# 'ಹಣತೆ : ಸಂಕಥನ'

ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ. ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ಸಂಪ್ರಬಂಧ


ಸಂಶೋಧಕರು

■ ಅಂಜಲಿದೇವಿ. ಎಂ

ಮಾರ್ಗದರ್ಶಕರು

■ ಪ್ರೊ . ಮಂಜುನಾಥ ಬೇವಿನಕಟ್ಟಿ







ಜಾನಪದ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

# ಹಣತೆ : ಸಂಕಥನ

(ಎಂ. ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಸಂಪ್ರಬಂಧ)



ಸಂಶೋಧಕರು
ಅಂಜಲಿದೇವಿ. ಎಂ.

ಮಾರ್ಗದರ್ಶಕರು
ಡಾ. ಮಂಜುನಾಥ ಬೇವಿನಕಟ್ಟಿ
ಪ್ರಾಧ್ಯಾಪಕರು





ಜಾನಪದ ಅಧ್ಯಯನ ವಿಭಾಗ
ಸಮಾಜ ವಿಜ್ಞಾನ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೦೮

# ಮಾರ್ಗದರ್ಶಕರ ಪ್ರಮಾಣ ಪತ್ರ

**'ಹಣತೆ : ಸಂಕಥನ'** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು **ಅಂಜಲಿದೇವಿ ಎಂ.** ಇವರು ನನ್ನ ಮಾರ್ಗದರ್ಶನದಲ್ಲಿ ಎಂ.ಫಿಲ್. ಪದವಿಗಾಗಿ ಜಾನಪದ ಅಧ್ಯಯನ ವಿಭಾಗ ಕನ್ನಡ ವಿಶ್ವವಿದ್ಯಾಲಯ ಹಂಪಿ ವಿದ್ಯಾರಣ್ಯಕ್ಕೆ ಒಪ್ಪಿಸಲು ಸಿದ್ಧಪಡಿಸಿದ್ದಾರೆ. ಇದನ್ನು ಈ ಹಿಂದೆ ಯಾವುದೇ ಪದವಿಗಾಗಿ ಬೇರೆ ವಿಶ್ವವಿದ್ಯಾಲಯಕ್ಕೆ ಹಾಗೂ ಇತರೆ ಸಂಘ ಸಂಸ್ಥೆಗಳಿಗೆ ಸಲ್ಲಿಸಿಲ್ಲವೆಂದು ಈ ಮೂಲಕ ನಾನು ದೃಢೀಕರಿಸುತ್ತೇನೆ.

**ಡಾ.ಮಂಜುನಾಥ ಬೇವಿನಕಟ್ಟಿ**
ಪ್ರಾಧ್ಯಾಪಕರು, ಮತ್ತು ಮಾರ್ಗದರ್ಶಕರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

ದಿನಾಂಕ :
ಸ್ಥಳ : ವಿದ್ಯಾರಣ್ಯ

# ಅಭ್ಯರ್ಥಿಯ ಪ್ರಮಾಣ ಪತ್ರ

**'ಹಣತೆ : ಸಂಕಥನ'** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ನಾನು **ಡಾ. ಮಂಜುನಾಥ ಬೇವಿನಕಟ್ಟಿ** ಪ್ರಾಧ್ಯಾಪಕರು, ಜಾನಪದ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ. ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತೇನೆ. ಇದನ್ನು ಈ ಹಿಂದೆ ಯಾವುದೇ ಪದವಿಗಾಗಿ ಬೇರೆ ವಿಶ್ವವಿದ್ಯಾಲಯಕ್ಕೆ ಹಾಗೂ ಇತರೆ ಸಂಘ ಸಂಸ್ಥೆಗಳಿಗೆ ಸಲ್ಲಿಸಿಲ್ಲವೆಂದು ಈ ಮೂಲಕ ನಾನು ದೃಢೀಕರಿಸುತ್ತೇನೆ.

ಅಂಜಲಿದೇವಿ. ಎಂ

**ಅಂಜಲಿದೇವಿ.ಎಂ**
**ಸಂಶೋಧಕರು**
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

ದಿನಾಂಕ : ೭ - ೧೦ - ೦೮
ಸ್ಥಳ : ವಿದ್ಯಾರಣ್ಯ

## ಕೃತಜ್ಞತೆಗಳು

* ಆಯ್ಕೆ ಮಾಡಿಕೊಂಡು ಈ ಸಂಪ್ರಬಂಧಕ್ಕೆ ಸೂಕ್ತ ಮಾರ್ಗದರ್ಶನ ನೀಡಿದ **ಡಾ. ಮಂಜುನಾಥ ಬೇವಿನಕಟ್ಟಿ**. ಪ್ರಾಧ್ಯಾಪಕರು ಇವರಿಗೆ ಅನಂತ ಅಭಿನಂದನೆಗಳು.

* ನಮ್ಮ ವಿಭಾಗದ ಮತ್ತಿತರ ಮಾರ್ಗದರ್ಶಕರುಗಳಾದ **ಡಾ. ಹೆಬ್ಬಾಲೆ ಕೆ.ನಾಗೇಶ್, ಡಾ. ಸ.ಚಿ. ರಮೇಶ್** ಪ್ರಾಧ್ಯಾಪಕರು, **ಡಾ. ಮೊಗಳ್ಳಿ ಗಣೇಶ್, ಡಾ. ಹರಿಶ್ಚಂದ್ರ ದಿಕ್ಸಂಗೀಕರ್, ಡಾ. ಟಿ.ಸಿ. ಗುರುಪ್ರಸಾದ್** ಇವರಿಗೆ ಅನಂತ ಅಭಿನಂಧನೆಗಳು.

* ಈ ಸಂಪ್ರಬಂಧಕ್ಕೆ ವಿಷಯವನ್ನು ಸೂಚಿಸಿ ಸಲಹೆ ನೀಡಿದ ಹಾಗೂ ನನ್ನ ಜೀವನದ ಭವಿಷ್ಯವನ್ನು ಕಟ್ಟಿಕೊಳ್ಳಲು ಕಾರಣರಾಗುತ್ತಿರುವ ಪ್ರೀತಿಯ ಗುರುಗಳಾದ **ಡಾ. ಬಿ.ವಿ. ವಸಂತಕುಮಾರ್** ಇವರಿಗೆ ಹೃತ್ಪೂರ್ವಕ ಅಭಿನಂದನೆಗಳು.

* ಮತ್ಪೂರ್ವ ಗುರುಗಳಾದ ಡಾ.ಶ್ರೀಕಂಠ ಕೂಡಿಗೆ, ನೀವೃತ್ತ ಪ್ರಾಧ್ಯಾಪಕರು ಅವರಿಗೆ ಅಭಿನಂದನೆಗಳು.

* ತಮ್ಮ ಅನೇಕ ತೊಡುಕುಗಳ ನಡುವೆಯೂ, ಮಗಳು ಓದಿ ಒಂದು ಉತ್ತಮ ಸ್ಥಾನದಲ್ಲಿರಬೇಕೆಂದು ಹಂಬಲಿಸಿ ಜೀವನವನ್ನು ರೂಪಿಸುತ್ತಿರುವ ನನ್ನ ಪ್ರೀತಿಯ ತಂದೆ-ತಾಯಿಯಾದ **ಶ್ರೀ. ಬಿ.ಪಿ. ಮೂರ್ತಿ** ಮತ್ತು **ಶ್ರೀಮತಿ ಕಾಳಮ್ಮ ಮೂರ್ತಿ** ಇವರಿಗೆ ನನ್ನ ಅನಂತ ಅಭಿನಂದನೆಗಳು.

* ಆರಂಭದಿಂದಲೂ ನನ್ನ ಎಂ.ಫಿಲ್ ಅಧ್ಯಯನಕ್ಕೆ ಸಹಕರಿಸಿದ ನಮ್ಮ ಮಾವನವರಾದ **ಡಾ.ಕಲವೀರ ಮನ್ವಾಚಾರಿ**, ಶಾಸನಶಾಸ್ತ್ರ ವಿಭಾಗ, ಕ.ವಿ.ವಿ.ಹಂಪಿ ಮತ್ತು ಅತ್ತೆಯವರಾದ **ಮಮತ ಕಲವೀರ ಮನ್ವಾಚಾರಿ** ಅವರಿಗೆ ನನ್ನ ಚಿಕ್ಕಪ್ಪ ಚಿಕ್ಕಮ್ಮ, **ಶಶಿಧರ** ಮತ್ತು **ಅಂಬಕ್ಕ** ಅವರಿಗೂ ಹೃತ್ಪೂರ್ವಕ ವಂದನೆಗಳು.

* ನನ್ನ ಸಾಧನೆಗೆ ಹಂತ ಹಂತವಾಗಿ ಜೊತೆಗಿದ್ದು ಸಹಕರಿಸುತ್ತಿರುವ ನನ್ನ ಪ್ರೀತಿಯ ತಮ್ಮ **ಬೆನಕಚಾರಿ** ಇವರಿಗೆ ಅಭಿನಂದನೆಗಳು.

* ನನ್ನ ಆತ್ಮೀಯ ಬಳಗದಲ್ಲಿ ಈ ವಿಷಯಕ್ಕೆ ಮತ್ತಷ್ಟು ಸಲಹೆ ನೀಡಿದ ಕುವೆಂಪು ವಿ.ವಿ.ಯಲ್ಲಿ ಸಂಶೋಧನೆ ಕೈಗೊಂಡಿರುವ **ಶಿವರುದ್ರಪ್ಪ** ಮತ್ತು **ಪ್ರೇಮ** ಇವರಿಗೆ ಅಭಿನಂದನೆಗಳು.

* ಈ ಸಂಪ್ರಬಂಧ ರೂಪುಗೊಳ್ಳಲು ಕಾರಣರಾದ ನನ್ನ ತಂಗಿ **ಕು.ಚಂದ್ರಿಕ**, ನನ್ನ ತಮ್ಮ **ಸಿಂಧೂರ್** ಇವರಿಗೆ ಅಭಿನಂದನೆಗಳು.

* ಆರಂಭದಿಂದಲೂ ಜೊತೆಗಿದ್ದು ನನ್ನ ಅಧ್ಯಯನಕ್ಕೆ ಸಹಕರಿಸಿದ ಆತ್ಮೀಯ ಗೆಳತಿಯರಾದ **ಜಿ.ವಿ.ಶಶಿಕಲಾ, ಶ್ವೇತ, ವೀಣಾ, ಮಂಗಳಾ, ಅನಿತಾ, ಜ್ಯೋತಿ, ಸವಿತ** ಹಾಗೂ ಗೆಳೆಯರಾದ **ಈಶ್ವರ ರಾವ್, ಗೋವಿಂದ,**

ಲಕ್ಷ್ಮಣ್ ದೂರಣ್ಣನವರ್, ವೆಂಕಟೇಶ, ನಿಸ್ಸಾರ್, ರಂಗನಾಥ, ಮಲ್ಲಿಕಾರ್ಜುನ್, ಬಸವರಾಜ್, ಪರಮೇಶ್ವರಪ್ಪ, ನಿಂಗಪ್ಪ ಮಾದಣ್ಣನವರ್ ಇವರಿಗೆ ಹೃತ್ಪೂರ್ವಕ ಅಭಿನಂದನೆಗಳು.

* ನನ್ನ ಸ್ಫೂರ್ತಿಯ ಸೆಲೆಯಾದ ಆತ್ಮೀಯ ಸ್ನೇಹಿತರಾದ **ಸೌಮ್ಯ, ಕೆ.ಸಿ. ನಿರ್ಮಲ ವಸಂತಕೂಮಾರ್, ರೂಪ, ಸ್ಮಿತಾಮಂಜೇಶ್** ಇವರಿಗೂ ಅನಂತ ಅಭಿನಂದನೆಗಳು.

* ಈ ಸಂಪ್ರಬಂಧವನ್ನು ಅಂದವಾಗಿ ಡಿಜಿಟಲ್ ಫೋಟೋಸ್‌ಗಳನ್ನು ಪ್ರಿಂಟ್‌ಮಾಡಿ ಕೊಟ್ಟ **ಅಜಯ್ ಪ್ರಸಾದ್** (ಕಲರ್ ಕ್ರಾಫ್ಟ್ಸ್, ಮೈಸೂರು) ಇವರಿಗೆ ಅಭಿನಂದನೆಗಳು.

* ಈ ಸಂಪ್ರಬಂಧವನ್ನು ಸಮಯಕ್ಕೆ ಸರಿಯಾಗಿ ಅಂದವಾಗಿ ಮುದ್ರಿಸಿಕೊಟ್ಟಂತಹ **ಶ್ರೀಮತಿ ಅನ್ನಪೂರ್ಣ ಕಮ್ಮಾರ ಮತ್ತು ನಾಗರಾಜ ಬಡಿಗೇರ** ಇವರಿಗೆ ಹೃತ್ಪೂರ್ವಕ ಅನಂತ ಅಭಿನಂದನೆಗಳು.

* * *

# ಹರಹು



* * *

## ಅಧ್ಯಾಯ-೧

# ಅಧ್ಯಯನ ಉದ್ದೇಶ, ವ್ಯಾಪ್ತಿ ಮತ್ತು ಮಹತ್ವ

ಪ್ರಕೃತಿಯೊಂದಿಗೆ ಮನುಷ್ಯ ಸಂಬಂಧಗಳು ಲೀನವಾದರೆ ಸಂಸ್ಕೃತಿಯಾಗುತ್ತದೆ ಎನ್ನುವ ಮಾತಿದೆ. ಮೂಲತಃ ಇದು ವಾಸ್ತವದ ಸಂಗತಿ. ಮೂಲ ಗುಣದಿಂದ ವಿಭಜಿಸಿ ಸಾಪೇಕ್ಷವಾಗಿ ನೋಡುವುದನ್ನು ಚರಿತ್ರೆಕಾರರು ಬಯಸಿದರೂ. ಸಂಸ್ಕೃತಿ ಪ್ರಕೃತಿಯೊಂದಿಗೆ ಸ್ಪಂದಿಸುತ್ತ ಪರಂಪರೆಯನ್ನು ಬೆಳೆಸುವುದನ್ನು ನೋಡುತ್ತದೆ. ಬೆಂಕಿ ಪ್ರಕೃತಿಯಿಂದ ಬಂದ ಸಹಜ ಗುಣ. ಈ ಗುಣ ಸಾಮಾಜಿಕವಾಗಿ ಧಾರ್ಮಿಕವಾಗಿ ನಿಂತಾಗ ಅದರ ರೂಪವೇ ಭಿನ್ನವಾಗುತ್ತದೆ. ಹಾಗಾಗಿ ಮನುಷ್ಯ ಸಂಬಂಧದೊಳಗೆ ಶುದ್ಧೀಕರಣ ಮತ್ತು ಸಂಯೋಗವು ಲಕ್ಷಣಗಳಾಗಿರುವುದು. ಜನಪದರು ಈ ಎರಡು ಗುಣಗಳನ್ನು ಒಳಗೊಂಡಿರುವಂಥವರು. ಇದಕ್ಕೆ ಕಾರಣ ಅವರು ನಂಬಿಕೊಂಡ ಬಂದ ಮೂಲ ಗುಣಗಳು. ಜನಪದರು ಬೆಂಕಿಯೊಂದಿಗೆ ಬೆಳೆಸಿಕೊಂಡ ನಂಬಿಕೆಗಳು, ವಿಶಿಷ್ಟ ಕಲ್ಪನೆಗಳು, ಅದ್ಭುತ ಸಾಹಸಗಳು ಅಭಿವ್ಯಕ್ತಿ ಗೊಂಡಿರುವುದನ್ನು ಕಾಣಬಹುದಾಗಿದೆ ಎಂದು ಕೆ.ವೈ.ನಾರಾಯಣ ಸ್ವಾಮಿ ಹೇಳುತ್ತಾರೆ.

ಬೆಂಕಿಗೂ ಸ್ಪಂದಿಸುವ ಗುಣವಿದೆ ಎಂದು ಅರ್ಥೈಸಿದವರು ಜನಪದರು. ಜನಪದರು ಬೆಂಕಿ ಎಂದು ಕರೆದರೆ, ಶಿಷ್ಟರು ಅಗ್ನಿ ಎಂದು ಕರೆಯುತ್ತಾರೆ. ಒಟ್ಟಾರೆ, ಈ ಎರಡು ಪದಗಳು ಸಂಸ್ಕೃತಿಯ ಪರಂಪರೆಯನ್ನು ಬೆಳಕಿಗೆ ತಂದಂಥವು. ಈ ಭೂಮಿಗೆ ಬೆಂಕಿ ಹೇಗೆ ಬಂತು ಎಂಬುದಕ್ಕೆ ಬೆಂಕಿ ಪುರಾಣ ಆಧಾರವಾಗುತ್ತದೆ. ಅಂತೆಯೇ ಶಿಷ್ಟರಲ್ಲಿ ವೇದಗಳು ಆಧಾರವಾಗಿವೆ. ಅವರಲ್ಲಿ ಅಗ್ನಿ ಮತ್ತು ಪುರುಷನಿಗೆ ಸಂಬಂಧವಿದೆ ಎಂದು ಹೇಳಿದರೆ ಜನಪದರು ಬೆಂಕಿಯನ್ನು ಜ್ಯೋತಿಯಾಗಿ ಪರಿವರ್ತಿಸಿಕೊಂಡು ಸ್ತ್ರೀ ರೂಪದಲ್ಲಿ ಆರಾಧಿಸುತ್ತಾರೆ.

ಶಂಭಾ ಜೋಶಿಯವರು ಜಾನಪದ ವಿಶ್ವಕೋಶದಲ್ಲಿ ಅಗ್ನಿಯನ್ನು ಎರಡು ಭಾಗದಲ್ಲಿ ಗುರುತಿಸಿದ್ದಾರೆ.

೧. ನಚಿಕೇತಾನ ಅಗ್ನಿ-ಸ್ವಹಿತಾ ಸಕ್ತಿಯಾದದ್ದು

೨. ವೈಶ್ವಾನರ ಅಗ್ನಿ-ವಿಶ್ವಮುಖಿಯಾದದ್ದು

ಆದರೆ ಜನಪದರಲ್ಲಿ ಬೆಂಕಿಯು, ಕಿಚ್ಚು, ಅಗ್ನಿ, ಕೆಂಡ, ಕೊಳ್ಳಿ, ಕಿಡಿ, ಉರಿ, ಧಗೆ, ಸೂರ್ಯ, ಕಾವು, ಸಿಡಿಲು, ಜ್ಯೋತ್ಯಮ್ಮ ಎಂದು ರೂಪಗಳನ್ನು ಪಡೆದುಕೊಂಡಿದೆ.

ಪಂಚಭೂತಗಳಲ್ಲಿ ಒಂದಾದ ಅಗ್ನಿ ತತ್ತ್ವವು ಜನಪದರಲ್ಲಿ ಕಂಡು ಬಂದಿಲ್ಲ. ಹಾಗಾಗಿಯೇ ಶಿಷ್ಟರ ತಾತ್ವಿಕ ದೃಷ್ಟಿಕೋನಗಳಿಗಿಂತ ಜನಪದರ ತಾತ್ವಿಕ ದೃಷ್ಟಿಕೋನಗಳಲ್ಲಿ ಸಾಕಷ್ಟು ವ್ಯತ್ಯಾಸ ಕಾಣಿಸುವುದು. ಜನಪದರು ಏಕ ಕಾಲದಲ್ಲಿ ಸಲಿಗೆ, ಅಕ್ಕರೆ, ಭಯ, ಆರಾಧನೆ ಮತ್ತು ನಿರೀಕ್ಷೆಗಳನ್ನು ಮುಖ್ಯವಾಗಿಟ್ಟುಕೊಂಡವರು. ಪ್ರಕೃತಿಯಲ್ಲಿ ಅಗಾಧ ಶಕ್ತಿಯುಳ್ಳದ್ದು ಎಂದು ನಂಬಿ ಆರಾಧಿಸಿದವರು. ಅವರ ಯಾವುದೇ ಆಚರಣೆಯಲ್ಲಿ ಆರಾಧನೆಗೆ ಪ್ರಕೃತಿಯೇ ಮೊದಲ ಸ್ಥಾನ ಪಡೆದುಕೊಂಡಿದೆ. ಜೀವನದ ಅಂಗದಂತಿರುವ ಪ್ರಕೃತಿಯಿಂದಲೇ ತಾವು ಬದುಕುವುದು ಬಾಳುವುದು. ಹಾಗಾಗಿ ಇದನ್ನು ಕಾಪಾಡುವ ಹೊಣೆಗಾರಿಕೆ ನಮ್ಮ ಕೈಯಲ್ಲಿದೆ ಎಂದು ಭಾವಿಸಿದವರು. ಜನಪದರ ಬದುಕು, ಕಲೆ, ಆರಾಧನೆ, ಚಿಂತನೆಗಳು ಪ್ರಕೃತಿಯ ನಡುವೆ ಏರ್ಪಡುತ್ತದೆ. ಹಾಗಾಗಿ ಪ್ರಕೃತಿಯೊಂದಿಗೆ ನಡೆಯುವ ಎಲ್ಲ ಸಾಮಾಗ್ರಿಗಳು ಅಧ್ಯಯನಕ್ಕೆ ಯೋಗ್ಯವಾದವುಗಳಾಗಿರುತ್ತವೆ. ಈ ಹಿನ್ನೆಲೆಯಲ್ಲಿ ಹಣತೆ ಸಂಕಥನದ ಅಧ್ಯಯನವು -ಒಂದಾಗಿದೆ.

ಹಣತೆಯನ್ನು ಪಣತಿ, ಮಣ್ಣಿನ ದೀಪ, ಸೊಡರು, ಪ್ರಣತಿ ಎಂಬುದಾಗಿ ಕರೆಯುವ ಜನಪದರು ಪ್ರಕೃತಿಯ ಮೊದಲ ಆರಾಧಕರು. ಈ ಜಗತ್ತಿನಲ್ಲಿ ಪ್ರತಿಯೊಂದು ವಸ್ತುವು ಮೊದಲು ಜೀವ ತಳೆದದ್ದು ಮಣ್ಣಿನ ಮೂಲಕ. ಒಂದರ್ಥದಲ್ಲಿ ಮಣ್ಣಿನಿಂದಲೇ ಜೀವಿಯ ಉಗಮವಾಗಿದೆ ಎಂಬುದರಲ್ಲಿ ಯಾವ ಸಂಶಯವೂ ಇಲ್ಲ. ಹಾಗಾಗಿಯೇ ಹಣತೆಯನ್ನು ನಮ್ಮ ಜನಪದರು,

ಮಣ್ಣಲಿ ಹುಟ್ಟಿದೆ, ಮಣ್ಣಲಿ ಬೆಳೆದೆ

ಎಣ್ಣೆಯಲಿ ಕಣ್ಣು ಬಿಟ್ಟದೆ | ಜಗಜ್ಯೋತಿ

ಸತ್ಯದಿಂದುರಿಯೇ ಜಗಜ್ಯೋತಿ ||

ಎಂದು ಹಾಡಿ ನಮಿಸುತ್ತಾರೆ. ಜನಪದರು ಬೆಳಗಾಗಿ ಎದ್ದು ಮೊದಲು ನೆನೆಯುವುದು ಭೂಮಿತಾಯಿಯನ್ನು ಮಣ್ಣಿನಿಂದಲೇ ಜೀವ ಪಡೆದು ಮತ್ತದೇ ಮಣ್ಣಿನಲ್ಲಿ ಲೀನವಾಗುವ ಹುಟ್ಟು, ಸಾವಿನ ಕ್ರಿಯೆಗಳನ್ನು ಬದುಕಿನ ಅಂಗಗಳು ಎಂದು ಅಪಾರವಾಗಿ ನಂಬಿದ್ದಾರೆ. ಈ ಅಂಗಗಳನ್ನು ಹಣತೆಯ ಮೂಲಕ ಸಂಕೇತಿಸುವ ಸಾಧನವಾಗಿ ಪ್ರತಿ ನಿತ್ಯ ಆರಾಧಿಸುತ್ತಾರೆ. ತಮ್ಮ ಸಂಸ್ಕೃತಿಯ ಪರಂಪರೆಯ ಒಳಗೆ ತಮ್ಮದೇ ಆದ ಮಹತ್ವದ ಸ್ಥಾನವನ್ನು ಕಟ್ಟಿಕೊಟ್ಟಿದ್ದಾರೆ. ಹಣತೆಯ ಪರಂಪರೆಯು ಇಂದಿಗೂ ಮರೆಯಾಗದ ಒಂದು ಸಂಪ್ರದಾಯ ಬದ್ಧ ಆಚರಣೆಯಾಗಿ ಉಳಿದಿರುವುದನ್ನು ನಾವು ಕಾಣುತ್ತೇವೆ. ಈ ಹಿನ್ನೆಲೆಯಲ್ಲಿ ಜನಪದರ ಎಷ್ಟೋ ಆಚರಣೆಗಳು, ಸಂಪ್ರದಾಯಗಳು, ನಂಬಿಕೆಗಳು ಅಂತ್ಯವನ್ನೇ ಕಾಣದೆ, ವಿಶಿಷ್ಟವಾದ ಮಹತ್ವದ ಅಂಶಗಳನ್ನು ಸಾರುತ್ತಲೇ ಜೀವಂತವಾಗಿರುವುದನ್ನು ಗುರುತಿಸಬಹುದಾಗಿದೆ. ಈ ನೆಲೆಯಲ್ಲಿ ಪ್ರಸ್ತುತ ಹಣತೆಯ ಸಂಕಥನದ ಅಧ್ಯಯನವನ್ನು ಕೈಗೊಳ್ಳಲಾಗಿದೆ.

''ಹಣತೆಗಳನ್ನು ಅಥವಾ ದೀಪಗಳನ್ನು ಕ್ರಿಯಾತ್ಮಕ ಹಾಗೂ ಕಲಾತ್ಮಕ ಎಂದು ಎರಡು ವಿಭಾಗವಾಗಿ ವಿಂಗಡಿಸಬಹುದು. ಕ್ರಿಯಾತ್ಮಕದಲ್ಲಿ ಬೆಳಕಿನ ಉಪಯೋಗಗಳನ್ನು ಕುರಿತು ವಿಶ್ಲೇಷಿಸುವುದಾದರೆ, ಕಲಾತ್ಮಕದಲ್ಲಿ

ಅದರ ಸೌಂದರ್ಯ, ಅಂದ, ಚೆಂದ, ಸಾಂಸ್ಕೃತಿಕ ಅಂಶಗಳನ್ನು ಗುರುತಿಸಬಹುದಾಗಿದೆ. ಹಾಗೆ ಕ್ರಿಯಾತ್ಮಕವನ್ನು ಗುರುತಿಸುವಾಗ ಹಣತೆಯ ಉಗಮ ವಿಕಾಸವನ್ನು ಗಮನಿಸುವುದಾದರೆ, ಆದಿವಾಸಿಗಳ ಕಾಲದಲ್ಲಿ ಚಕಮಕಿ ಕಲ್ಲುಗಳನ್ನು ಒಂದಕ್ಕೊಂದು ಘಟ್ಟಿಸಿ ಬೆಂಕಿಯನ್ನು ಸೃಷ್ಟಿಸಿಕೊಳ್ಳುತ್ತಿದ್ದರು. ಇದರಿಂದಲೇ ತಮ್ಮ ಆಹಾರವನ್ನು ಬೇಯಿಸಿ ತಿನ್ನುವ, ಚಳಿಯಿಂದ ತಮ್ಮ ದೇಹವನ್ನು ರಕ್ಷಿಸಿಕೊಳ್ಳುವುದನ್ನು ಕಲಿತರು. ಕಾಲಾನಂತರದಲ್ಲಿ ಹವಾಮಾನದ ವೈಪರೀತ್ಯದಿಂದಾಗಿ ಈ ಕಲ್ಲಿನಿಂದ ಬೆಂಕಿ ಉತ್ಪಾದನೆಯಾಗದ ಕಾರಣ ಯಾವಾಗಲೂ ಬೆಂಕಿಯನ್ನು ಸದಾಕಾಲವೂ ರಕ್ಷಿಸಿಟ್ಟುಕೊಳ್ಳುವ ಉಪಾಯ ಮಾಡಿದರೂ, ಕೆಲವು ತೊಂದರೆಗಳಿಂದಾಗಿ ಅದು ಫಲಿಸದಾಯಿತು.

ಹಾಗೆ ಎಣ್ಣೆ ಹಾಕಿ ಬತ್ತಿ ಉರಿಸುವ ದೀಪಗಳ ವ್ಯವಸ್ಥೆಯೂ ಎಂದಿನಿಂದ? ಯಾರಿಂದ? ಮತ್ತು ಹೇಗೆ? ರೂಪ ಪಡೆದುಕೊಂಡಿತು ಎನ್ನುವುದಕ್ಕೆ ಖಚಿತವಾದ ದಾಖಲೆಗಳು ದೊರೆಯುವುದಿಲ್ಲ. ೩. ಮತ್ತು ೪ನೇ ಶತಮಾನಗಳಲ್ಲಿ ಎಸ್ಕಿಮೋ ಜನರು ಕಡಲಾಮೆಗಳ ಒಳ ಚಿಪ್ಪಿನಲ್ಲಿ ಮೀನಿನ ಎಣ್ಣೆಯನ್ನು ಸುರಿದು ನಾಯಿಯ ಬಾಲದ ನರದ ನಾರಿನಿಂದ ದೀಪವನ್ನು ಹಚ್ಚಿಕೊಂಡು ತಮ್ಮ ಪುಟ್ಟ ಗುಡಿಸಿಲುಗಳಲ್ಲಿ ಬೆಳಕುಮಾಡಿಕೊಳ್ಳುತ್ತಿದ್ದರೆಂದು ಮಾನವಶಾಸ್ತ್ರ ಸಂಶೋಧಕರು ತಿಳಿಸಿದ್ದಾರೆ. ಹೀಗೆ ಶೀತವಲಯದಲ್ಲಿ ಸಸ್ಯದ ಅಭಾವವಿದ್ದುದ್ದರಿಂದ ಪ್ರಾಣಿಗಳಿಂದಲೇ ಬೆಳಕನ್ನು ತಮ್ಮ ಬುದ್ಧಿ ಶಕ್ತಿಯಿಂದ ಮೂಡಿಸಿಕೊಂಡು ದೀಪಗಳ ಪ್ರಥಮ ಹಂತದ ವಿಕಾಸಕ್ಕೆ ಕಾರಣರಾದರು ಎಂದು ಮಾನವಶಾಸ್ತ್ರಜ್ಞರು ತಿಳಿಸುತ್ತಾರೆ.

ನಂತರ ಇದೇ ದೀಪದ ಸೂತ್ರವು ಸಸ್ಯಭರಿತ ಪ್ರದೇಶಗಳಲ್ಲಿ ದೀಪವುರಿಸಿಕೊಳ್ಳುವ ಕಲೆಯ ಕ್ರಿಯೆಯನ್ನು ಕಲಿತರೆನ್ನುವ ನಿರ್ಣಯಕ್ಕೆ ಬಹುಶಃ ಬಂದಿರಬಹುದು. ಆದಿವಾಸಿಗಳಲ್ಲಿ ನಾಗರೀಕತೆಯ ಪ್ರಭಾವದಿಂದಾಗಿ ಕಾಲದ ಪರಿಣಾಮವಾಗಿ ರಾತ್ರಿವೇಳೆ ಬೇಟೆಗೆ ಹೋಗುವಾಗ ಒಣಕಡ್ಡಿಗಳನ್ನು ದೀಪದಂತೆ ಉರಿಸಿಕೊಂಡು ಹೋಗುತ್ತಿದ್ದರು. ಅಂದಿನಿಂದ ಮನುಷ್ಯನ ಬದುಕಿನಲ್ಲಿ ಶಾಖ, ದೀಪ, ಬೆಳಕು ಎಂಬ ಸ್ವರೂಪವು ಮಹತ್ವ ಪಡೆದುಕೊಂಡಿತು. ಈ ಮೂಲಕ ದೀಪಕ್ಕೆ ಒಂದು ಸಿದ್ಧ ರೂಪ ಕೊಟ್ಟು ಬಳಸತೊಡಗಿದರು”.[೨]

ನಾಗರೀಕತೆಯ ಪ್ರಭಾವದಿಂದಾಗಿ ಹಣತೆಯ ರೂಪು ರೇಷೆಯಲ್ಲಿ ಬದಲಾವಣೆಗಳು ಕಂಡು ಬಂದವು. ಯಾವುದೇ ಮಂಗಳಕಾರ್ಯ ಪ್ರಾರಂಭಿಸುವ ಮೊದಲ ಜ್ಯೋತಿಯನ್ನು ಬೆಳಗಿಸುವುದು ಸಂಪ್ರದಾಯ. ಮಂಗಳ ಪ್ರದಾಯವಾದ ಆ ಕೆಲಸ ಪೂರ್ತಿಯಾಗುವವರೆಗೂ ದೀಪ ಆರಿಹೋಗಬಾರದು. ದೀಪ ಆರಿದರೆ ಅಪಶಕುನವೆಂಬ ಭಾವನೆಯಿದೆ ಅಥವಾ ನಂಬಿಕೆ ಇದೆ. ದೇವರ ಎದುರು ನಂದಾ ದೀಪವನ್ನು ಬೆಳಗಿಸುವ ಒಂದು ಸಂಪ್ರದಾಯವಿದೆ. ದೇವರ ಮುಂದೆ ಪ್ರಮಾಣ ಮಾಡುವ ಮೊದಲು ದೇವರ ಮುಂದಿರಿಸಿದ ದೀಪವನ್ನು ಆರಿಸಿ ದೀಪಸಾಕ್ಷಿಯಾಗಿ ತಾವು ನಿಜವನ್ನೇ ಹೇಳುತ್ತಿದ್ದೇವೆಂದು ಸಾರುತ್ತಿದ್ದರಂತೆ. ಪ್ರಸವ ಗೃಹದಲ್ಲಿ ದೀಪದ ಬೆಳಕು ಇರಬೇಕೆಂದು ಹಿರಿಯರು ಹೇಳುತ್ತಾರೆ. ಬೀಳ್ಕೊಡುವಾಗ ಅಥವಾ ವಿಜಯ ಯಾತ್ರೆಯಿಂದ ಬರುವಾಗ ಆರತಿ ಎತ್ತುವ ಸಂಪ್ರದಾಯವಿದೆ. ಯಾರಾದರು ಸತ್ತರೆ ಆ ವ್ಯಕ್ತಿ ಸತ್ತಾಗ ತಲೆ ಯಾವ ದಿಕ್ಕಿನಲ್ಲಿ ಇತ್ತೋ ಆ ದಿಕ್ಕಿನಲ್ಲಿ ದೀಪ ಇಡುವ ಪದ್ಧತಿ ಇದೆ. ದೀಪದ ಜ್ವಾಲೆಯ ದಿಕ್ಕು, ಅದರ ಸ್ವರೂಪ, ಬಣ್ಣಗಳನ್ನಾಧರಿಸಿ ಬದುಕಿನ ಶುಭಾಶುಭಗಳನ್ನು ಹೇಳುವುದುಂಟು. ದೀಪವನ್ನು ನಂದಿಸುವದನ್ನು ದೀಪ ತುಂಬು ಎಂದು ಹೇಳುತ್ತಾರೆ. ಸಮುದಾಯದ ಬದುಕಿನಲ್ಲಿ ಇಷ್ಟೆಲ್ಲಾ ಮಹತ್ವ

ಪ್ರಮುಖ ಪ್ರಕಾರಗಳಾದ ಗೀತೆ, ಕಥೆ, ಒಗಟು, ಗಾದೆ ಒಡಪುಗಳನ್ನು ಸಹ ಅಧ್ಯಯನಕ್ಕೆ ಆಯ್ಕೆಮಾಡಿಕೊಂಡು ಹಣತೆಗೆ ಸಂಬಂಧಿಸಿದ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಅಧ್ಯಯನ ಮಾಡಲಾಗುತ್ತಿದೆ.

**ಅಡಿಟಿಪ್ಪಣಿ**

೧. ಕೆ.ವೈ. ನಾರಾಯಣಸ್ವಾಮಿ - 'ನೀರದೀವಿಗೆ' ಪುಟ-೫೨

೨. ಶಾರದಾ ಶಾಮಣ್ಣ - ಕರ್ಮವೀರ ದೀಪಾವಳಿ ವಿಶೇಷಾಂಕ ಪುಟ-೧೦೮



## ಅಧ್ಯಾಯ-೨

# ಜನಪದರಲ್ಲಿ ಹಣತೆಯ ಪರಿಕಲ್ಪನೆ

ನೀರು ಆದಿ ಭೌತಿಕ ವಸ್ತುವಾದ್ದರಿಂದ ನೀರಿಲ್ಲದೆ ಮನುಷ್ಯನ ಜೀವನವನ್ನು ಊಹಿಸಲು ಹೇಗೆ ಸಾಧ್ಯವಿಲ್ಲವೋ ಹಾಗೆಯೇ ಬೆಳಕಿಲ್ಲದೆ ಮನುಷ್ಯ ದಿನದ ಅರ್ಧದಿನ ಬದುಕುವುದು ಕಷ್ಟ. ಹಾಗಾಗಿ ಹಣತೆಗಳಿಂದ ಪ್ರತಿಯೊಂದು ಮನೆಯ ಪ್ರಾಂಗಣ ಬೆಳಗುತ್ತದೆ. ನಮ್ಮ ಸಂಸ್ಕೃತಿಯಲ್ಲಿ ದೀಪ (ಒಂದು) ಆಧ್ಯಾತ್ಮಿಕ. ಇದೊಂದು ಆದಿ ದೈವಿಕ, ಆದಿ ಭೌತಿಕ ರೂಪಗಳಲ್ಲಿ ಅಸಾಮಾನ್ಯ ಪ್ರಾಶಸ್ತ್ಯಪಡಿದಿದೆ. ದೀಪಂ ಮರ್ತ್ಯಗಳ ನಡುವೆ ಅಮೃತದವಿದದ್ದೆಂದು ಋಗ್ವೇದ ಹೇಳುತ್ತದೆ. 'ಪುರಾಣಗಳು ಸೂರ್ಯಾಂಶ ಸಂಭವೋದೀಪಃ' ಎಂದಿವೆ. ದೀಪ ಜ್ಞಾನದ ಸಂಕೇತ. ಜ್ಞಾನದಾನ ಮಾಡುವುದೆಂದರೆ ಒಂದು ದೀಪದಿಂದ ಮತ್ತೊಂದನ್ನು ಬೆಳಗಿಸುವುದು ಬೆಳಗಿಸುವ ದೀಪ ತನ್ನ ಅಸ್ತಿತ್ವವನ್ನು ಹಾಗೆಯೇ ಉಳಿಸಿಕೊಂಡು ಮತ್ತೊಂದು ದೀಪವನ್ನು ಬೆಳಗಿಸುತ್ತದೆ. ತನ್ನ ಸ್ಥಾನಕ್ಕೆ ಅದನ್ನು ತಲುಪಿಸುತ್ತದೆ. ಪುತ್ರ ಸಂತಾನವನ್ನು ಪೂರ್ವಿಕರು ಕುಲದೀಪಕನೆಂದು ಅಭಿವರ್ಣಿಸಿರುವುದು ಅದಕ್ಕಾಗಿಯೆ!

ದೀಪ ಜೀವವೂ ಹೌದು, ದೇವರೂ ಹೌದು ಅದಕ್ಕೆ ನಾವು ದೀಪವನ್ನು ಆರಿಸುವುದಿಲ್ಲ ದೊಡ್ಡದು ಮಾಡುತ್ತೇವೆ. ಅದು ನಂದುವುದೇ ಬೇಡವೆಂದು ನಂದಾದೀಪವಾಗಿಡುತ್ತೇವೆ. ನಮಗೆ ನಮ್ಮ ಮನೆಯ ಮಕ್ಕಳು ಅಥವಾ ವಂಶವೇ ಮನೆಯ ದೀಪ. ಯಾರಾದರೂ ತೀರಿಕೊಂಡರೆ ಮನೆಯ ದೀಪವೇ ಹೋದಂತೆ. ಅಂಥಾ ಅನಾಹುತ ಆಗದಿರಲೆಂದೇ ನಾವು ದೀಪವನ್ನು ನಮ್ಮ ಜೀವದಂತೆ ಕಾಪಾಡುತ್ತೇವೆ. ಆ ದೀಪವನ್ನು ಕಾಪಾಡುವುದೇ ಜೀವನವೆಂದು ತಿಳಿದಿರುತ್ತೇವೆ.[೧]

ಬೆಳಕಿನ ಮೂಲ ಅಗ್ನಿ. ಈ ಅಗ್ನಿಯ ಪೂಜೆ ಪುರಾತನದ ಆಚರಣೆಯಾಗಿ ಬೆಳೆದು ಬಂದಿದೆ. ಅಗ್ನಿ ಪವಿತ್ರಶಾಖ. ಬೆಳಕು ನೀಡುವ, ಪವಿತ್ರಗೊಳಿಸುವ, ನಾಶಮಾಡುವ ಶಕ್ತಿ ಅದಕ್ಕಿದೆ ಎಂಬ ನಂಬಿಕೆ ಇದಕ್ಕೆ ಕಾರಣ. 'ಅಗ್ನಿ ಹಾಗೂ ಸೂರ್ಯ' ಭಾರತೀಯರಿಗೆ ಬೆಳಕಿನ ಸಂಕೇತ.[೨] ಭಾರತೀಯ ಸಂಸ್ಕೃತಿಯಲ್ಲಿ ಅಗ್ನಿಗೆ ಮಹತ್ವ ಪೂರ್ಣವಾದ ಸ್ಥಾನವಿದೆ. ವೈದಿಕರಿಗೆ ಇಂದ್ರನ ನಂತರದ ಸ್ಥಾನ ಅಗ್ನಿಗೆ ಸಲ್ಲುತ್ತದೆ. ದೇವತೆಗಳಿಗೆ ಸಮರ್ಪಿತವಾಗುವ ದೀಪವು ಅಗ್ನಿಯ ಮೂಲಕವಾಗಿಯೇ ದೇವತೆಗಳಿಗೆ ತಲುಪುತ್ತದೆಯೆಂಬ ನಂಬಿಕೆ ಇದೆ. ಮಾನವನ ಸಾಂಸ್ಕೃತಿಕ ಬದುಕು

ಉತ್ಥಾನ ಮುಖಿಯಾಗಿ ಚೈತನ್ಯಯುತವಾದುದು. ಅಗ್ನಿಯ ಆವಿಷ್ಕಾರದ ಅನಂತರವೇ ಅಗ್ನಿಗೆ ಭೌಮಿತ, ಆಕಾಶ ಮತ್ತು ದಿವ್ಯ ಜ್ಯೋತಿಗಳೆಂಬ ತ್ರಿವಿಧ ರೂಪಗಳಿರುತ್ತವೆಯೆಂದು ಹೇಳಲಾಗುತ್ತದೆ. ಉಗ್ರಸ್ವರೂಪಿಯಾದ ಅಗ್ನಿಯ ಸೌಮ್ಯರೂಪವೇ ಜ್ಯೋತಿ ಇಲ್ಲವೆ ದೀಪವೆನ್ನಬಹುದು. ದೀಪ ನಮಗೆ ಬೆಳಕಿನ ಜೊತೆಗೆ ರಕ್ಷಣೆಯನ್ನು ನೀಡುತ್ತದೆ. ಅದಕ್ಕಾಗಿಯೇ ಜ್ಯೋತಿಯನ್ನು ದೇವತೆಯನ್ನಾಗಿಯೇ ಮಾನವ ಆರಾಧಿಸಿದ್ದಾನೆ. "ತಮಸೋಮ ಜ್ಯೋತಿರ್ಗಮಯ" ಎಂಬುದು ಕತ್ತಲೆಯಿಂದ ಬೆಳಕಿನೆಡೆಗೆ ಪಯಣಿಸುವ ಮಾನವನ ಹಂಬಲ ನಿರಂತರವಾದುದು.[೩]

ಭಾರತೀಯ ಸಂಸ್ಕೃತಿಯಲ್ಲಿ ಅವಿನಾಭಾವಿಯಾಗಿ ಬೆರೆತ ದೀಪವನ್ನು ಸಂರಕ್ಷಿಸಿ ಆರಾಧಿಸುವ ಪದ್ಧತಿ ನಮ್ಮಲ್ಲಿ ಅನೂಚ್ಯವಾಗಿ ಬೆಳೆದು ಬಂದಿದೆ. ಪ್ರಾಚೀನ ಕಾಲದಲ್ಲಿ ದೀಪವನ್ನು ಹಚ್ಚುವ ಪಾತ್ರೆಗಳನ್ನು ಕಲ್ಲು ಹಾಗೂ ಚಿಪ್ಪಿನಿಂದ ಮಾಡಿ ಬತ್ತಿಹಾಕಿ, ಎಣ್ಣೆಎರೆದು ದೀಪಬೆಳಗುತ್ತಿದ್ದರು. ಅನಂತರ ಮಣ್ಣಿನ ಹಾಗೂ ಲೋಹದ ಪಾತ್ರೆಗಳಲ್ಲಿ ದೀಪವನ್ನು ಬೆಳಗುವ ಸಂಪ್ರದಾಯ ಬೆಳೆದು ಬಂತು. ಕೆಲವು ವಿಶೇಷ ಹಬ್ಬಗಳ ಸಂದರ್ಭದಲ್ಲಿ ಮೊಗೆಕಾಯಿ, ಹಿಂಡಲಿಕಾಯಿ, ಮತ್ತು ಹಿಟ್ಟನ್ನು ಬಳಸಿ ದೊಂದಿಹಚ್ಚಿ ದೀಪಬೆಳಗುವ ಪದ್ಧತಿಯೂ ಇದೆ.

**೨.೧. ಹಣತೆ ಅರ್ಥ ಹಾಗೂ ಸ್ವರೂಪ**

ಹಣತೆ ಎಂದರೆ ಮುಗ್ಧ ಸ್ನಿಗ್ಧ ಬೆಳಕು. ಇಲ್ಲಿ ಸ್ನಿಗ್ಧ ಎಂದರೆ ಜಿಡ್ಡುಳ್ಳ, ಎಣ್ಣೆಹತ್ತಿದ, ನುಣುಪಾದ, ಕೋಮಲವಾದ, ಅನುರಕ್ತ, ದಯಾಳು, ತಂಪಾದ ಎಂಬ ಅರ್ಥದ ಛಾಯೆಗಳನ್ನು ಪಡೆದುಕೊಂಡಿದೆ. ಹೀಗೆ ಹಣತೆಯನ್ನು ನಾನಾ ವಿಧಗಳಿಂದ ವರ್ಣಿಸಿರುವುದನ್ನು ಕಾಣುತ್ತೇವೆ. ಸಂಸ್ಕೃತದಲ್ಲಿ ದೀಪ ಎಂದರೆ ಅಂಧಕಾರವನ್ನು ತೊಲಗಿಸುವುದು. ಜಗತ್ತಿನ ಕತ್ತಲೆಯನ್ನು ದೂರ ಮಾಡಲು ಹಣತೆಯನ್ನು ಹಚ್ಚುವುದರ ಮೂಲಕ ನಿವಾರಿಸಿಕೊಳ್ಳುವಂತೆ ಹಣತೆಯನ್ನು ಜ್ಞಾನದ ಸಂಕೇತವಾಗಿ ಬಳಸುವುದನ್ನುನೋಡುತ್ತೇವೆ. ಜನಪದರಲ್ಲಿ ಜ್ಯೋತಮ್ಮಳಾಗಿ ರೂಪ ಪಡೆದುಕೊಂಡಿದೆ. ಹಾಗೆಯೆ ಹಣತೆ ಕುರಿತಂತೆ ಜನಪದರಲ್ಲಿ ಹಲವಾರು ನಂಬಿಕೆ, ಆಚರಣೆ, ಸಂಪ್ರದಾಯ, ವಿಧಿ-ನಿಷೇಧಗಳನ್ನು ಕಾಣುತ್ತೇವೆ. ಹೀಗಿರುವ ಹಣತೆ ಕಾಲಾನಂತರದಲ್ಲಿ ಹಲವಾರು ಬದಲಾವಣೆಗೆ ಒಳಪಟ್ಟಿರುವುದನ್ನು ಕಾಣುತ್ತೇವೆ. ವಚನಕಾರರಲ್ಲಿ ಬಳಕೆಯಲ್ಲಿರುವ ಪದವೆಂದರೆ ಜ್ಯೋತಿ. ಇಲ್ಲಿ ಜ್ಯೋತಿ ಎಂದರೆ ಬೆಳಕು ಅಥವಾ ದೀಪ ಎಂಬ ಸಾಮಾನ್ಯ ಅರ್ಥವಿರುವುದಾದರೂ ವಚನಗಳಲ್ಲಿ ಅದಕ್ಕೆ "ಅನುಭಾವಿಯು ತನ್ನ ಬೋಧ ಚಕ್ಷುತ್ರಿನಿಂದ ಕಾಣುವ ಬೆಳಕು" ಎಂಬರ್ಥವೇ ಇದೆ. "ಇದು ಸಾಧಾರಣ ರೀತಿ ಬೆಳಕಲ್ಲ. ಚೈತನ್ಯಾತ್ಮಕ ಬೆಳಕು ಚಿದ್ಬೆಳಗು ಎಂದು ಹೇಳುತ್ತಾರೆ".[೪]

ಪ್ರಸ್ತುತದಲ್ಲಿ ಹಣತೆ ಮತ್ತು ಅದರ ಪರ್ಯಾಯ ಪದಗಳಿಗೆ ವಿವಿಧ ಅರ್ಥಕೋಶ ಮತ್ತು ವಿಶ್ವಕೋಶಗಳಲ್ಲಿ ಇರುವ ಅರ್ಥಗಳು ಈ ಕೆಳಗಿನಂತಿದೆ

**ಜಾನಪದ ವಿಶ್ವಕೋಶ**

* ಹಣತೆ -(ನಾ) ಪಣತಿ: ಮಣ್ಣಿನ ದೀಪ: ಸೊಡರು ಇದಕ್ಕೆ ಹೊಂಗೆ ಎಣ್ಣೆ, ಇಪ್ಪೆಎಣ್ಣೆ, ಬೇವು, ಹರಳು ಮೊದಲಾದ ಎಣ್ಣೆಯನ್ನು ಬಳಸುತ್ತಾರೆ. ಹಣತೆ ಹಚ್ಚಿ ಕೈಮುಗಿದು ಹಾರಿಸಿದರು...
* ಪಣತಿ-(ನಾ) ಹಣತೆ: ದೀಪ: ತತ್ರಾಣಿ, ಪಣತಿ, ಮೊದಲಾದ ವಸ್ತುಗಳನ್ನು ಕಲಾತ್ಮಕವಾಗಿ ರಚಿಸಿದ್ದಾನೆ.

* ಸೂಡರು-ಸೊಡ್ಡು, ಸೊಳ್ಳು (ನಾ) ದೀಪ: ದೀವಿಗೆ ಕೈಯೆಣ್ಣೆ ಸೊಡರು ಹೊಲ್ಲೆಸಿ... ಕೈಮುಗಿದು
* ಹಣತೆ -ಸೂರ್ಯನ ಸಂಕೇತ
* ದೀಪ -(ನಾ) ಸೊಡರು: ದೀವಿಗೆ: ಹೊಸಮಡಿಕೆಯಲ್ಲಿ ಹುರಿದು

  ಅಕ್ಕಿಯ ಪುಡಿ, ಹಾಲು... ದೀಪ ಇಡುತ್ತಾರೆ.

  ದೀಪ ನುಂಗೋ ಅತ್ತೆಗೆ ದೀವಟಿಗೆ ನುಂಗೋ ಸೊಸೆ (ಗಾದೆ)
* ದೀಪ ಕಚ್ಚೋ ಹೊತ್ತು= ಸಂಜೆ ಹೊತ್ತು: ಕಾರ ಅರೆಯೋ ಹೊತ್ತು
* ದೀಪದ ಅಲಗು= ಗೋಡೆಗೆ ತಗುಲಿಹಾಕಬಹುದಾದ ದೀಪವಿಡುವ ಸಾಧನ: ದೀಪದ ಕಂಬಗಳು,
* ದೀಪದ ಕುಡಿ= ದೀಪದ ಬತ್ತಿಯ ತುದಿ ದೀಪದ ಕುಡಿ ತಿದ್ದು (ರೂಢಿ)
* ದೀಪದ ಗುಡ್ಡ= ದೀಪವನ್ನು ಇರಿಸುವ ಕಂಬ

  ದೀಪಾಲೆ ಕಂಬ ಇದರ ಮೇಲೆ ಸಗಣಿ ಉಂಡೆ

  ಇಟ್ಟು ದಿಪ ಇಡುತ್ತಾರೆ. ದೀಪದ ಗುಡ್ಡಗಳು, ಮೂರು ಕಡೆಗೋಲುಗಳು.... ಸಂಗ್ರಹಿಸಿ
* ದೀಪದ ಚಕ್ಕೆ= ದೀಪದ ಗುಡ್ಡು ದೀಪದ ಚಕ್ಕೆ ಅಲಕುಗಳು

  ಮುಳ್ಳಾವಿಗೆ.... ಇಲ್ಲಿವೆ
* ದೀಪದ ಮಲ್ಲಿ - ದೀಪ ಹಿಡಿದಿರುವ ಬೊಂಬೆ, ವಿಗ್ರಹ
* ದೀಪದ ಸ್ಥಂಭ =ದೀಪದ ಗುಡ್ಡ: ದೀಪದ ಸ್ಥಂಭಗಳು
* ದೀಪ ದೇವರು ಮಾಡು (ಕರಾ) ದೀಪ ನಂದಿಸು
* ದೀಪ ಮುಡಿಸು=ದೀಪ ಹಚ್ಚು; ದೀಪ ಮುಡಿಸಿ ನೋಡದರೊಳಗೆ ತಗದಿತ್ರಿ ಕದ ಬಾಗಿಲ
* ದೀಪಟಿಯ (ನಾ)-ದೀವಟಿಗೆಯವನು: ಪೂಜೆ ನೆರವೇರಿಸುತ್ತಾರೆ. ದೀಪಟಿಯನು ಸಲಾಂ ಮಾಡುತ್ತಾನೆ.
* ದೀಪ ತುಂಬಿಸು (ಕ್ರಿ)- ದೀಪ ಆರಿಸು: ಎಂಟ್ಮೊಂಬತ್ತು ಗಂಟೆಗೆ ನಮ್ಮೂರಿನವರು ದೀಪ

  ತುಂಬಿಸಿಡುತ್ತಾರೆ.
* ದೀಪದಾರಿ (ನಾ)- ದೀಪಹಿಡಿದು ಹೋಗುವ ವ್ಯಕ್ತಿ:

  ದೀಪದಾರಿ: ದೀಪದಾರಿಗಳು ದೀಪವನ್ನು ತೆಗೆದುಕೊಂಡು ಪೂಜೆ ಸಲ್ಲಿಸಿ
* ದೀಪ ನೃತ್ಯ (ನಾ)- ಕೈಗಳಲ್ಲಿ ದೀಪಗಳನ್ನು ಹಿಡಿದು

  ಮಾಡುವ ಕುಣಿತ: ದಟ್ಟಿ ಮೇಳವು ದೀಪವೃತ್ಯವಾಗಿ ಪರಿಣಮಿಸಿದೆ.
* ದೀಪಾರತಿ: ದೀಪಾರ್ತಿ (ನಾ) ದೀಪವಿಟ್ಟು ಬೆಳಗುವ ಆರತಿ

  ಹಾಗೆ ಮಾಡಲು ಬಳಸುವ ಸಾಧನ: ದೇವರಿಗೆ ದೀಪಾರತಿ ಮಾಡಿ (ರೂಢಿ) ದೀಪಾರ್ತಿ; ಪೀಕುದಾನಿ,

  ದೀಪಾತಿ ಸಂಗ್ರಹಿಸಿದೆವು
* ದೀಪನೆಡು (ಕ್ರಿ) ಸತ್ತವರ ಸಂಸ್ಕಾರ ಮುಗಿಸಿ ಬಂದು ಕೈಕಾಲು ಮುಖ ತೊಳೆದು ಸತ್ತ ಮನೆಯಲ್ಲಿ

  ಹಚ್ಚಿಟ್ಟಿರುವ ದೀಪವನ್ನು ನೋಡು ಹಿಂಡೆಕೂಳು... ದೀಪ ನೋಡೋದು

* ದೀಪಾರ್ತಿ 'ದೀಪಾರಾತಿ' ನೋ
* ದೀಪಾಲೆಕಂಬ (ನಾ) ದೀಪವನ್ನಿಡಲು ಮಾಡಿದ ಮರದ ಅಥವಾ ಲೋಹದ ಕಂಬ: ಮರದ ದೀಪಾಲೆಕಂಬದ ಮೇಲೆ... ಮಣ್ಣಿನ ಹಣತೆ ಇಟ್ಟೆವು
* ದೀಪಾವಳಿ (ನಾ) ಕಾರ್ತೀಕಶುದ್ಧ ಪಾಡ್ಯದ ದಿನ ಬಲಿ ಚಕ್ರವರ್ತಿಯ ಹೆಸರಿನಲ್ಲಿ ಆಚರಿಸುವ ಹಬ್ಬ: ದೀವಳಿಗೆ; ಹಟ್ಟಿ ಹಬ್ಬ ಐಪಿ ಆದಿನ ಸಾಲುಸಾಲಗಿ ದೀಪಗಳನ್ನು ಬೆಳಗಿಸುತ್ತಾರೆ; ನಾವು ಅಲ್ಲಿಗೆ ಬಂದದ್ದು... ದೀಪಾವಳಿ ಹಬ್ಬವನ್ನು ಚಿತ್ರೀಕರಿಸಿ ಕೊಳ್ಳುವುದಕ್ಕಾಗಿ
* ದೀಪಾವಳಿರಾಗ (ನಾ) ದೀವಳಿಗೆ ಹಬ್ಬದಲ್ಲಿ ಹಾಡುವ ಹಾಡು;
  ದೀಪಕರಾಗ 'ರಾಜವಿಕ್ರಮ' (ನಾಟಕದಲ್ಲಿ ಈ ಹಾಡು ಪ್ರಸಿದ್ಧವಾಗಿದೆ. ಇದನ್ನು ಹಾಡಿದರೆ ದೀಪಗಳು ತಂತಾನೆ ಹತ್ತಿಕೊಳ್ಳುತ್ತವೆ ಎಂಬ ನಂಬಿಕೆಯಿದೆ ದೀಪಾವಳಿರಾಗವನ್ನು ಕಾರ್ತೀಕ ಸೋಮವಾರ ದಿನ ಹಾಡುತಾವಳೆ ಸತ್ಯವಂತೆ ನಾಗಮ್ಮ ಹಸ್ತಪ್ರತಿ)
* ದೀರ್ಕನಮರ (ನಾ) ಒಂದು ಬಗೆಯ ಮರ ಭೂಮಿ ಹುಣ್ಣಿಮೆಯ ಬೆರೆಕೆ ಸೊಪ್ಪಿನ ಪಲ್ಯಕ್ಕೆ ಇದರ ಸೊಪ್ಪನ್ನು ಸೇರಿಸುತ್ತಾರೆ. ದೀರ್ಕನ ಮಹ, ಕೇಸಟ್ಟಿಮರ... ಸೇರಿಸುತ್ತಾರೆ
* ದೀವ ದೀವು (ನಾ) ೧. ಒಂದು ಜನಾಂಗದ ಹೆಸರು ಮತ್ತು ಜನಾಂಗಕ್ಕೆ ಸೇರಿದ ವ್ಯಕ್ತಿ, ಹೆಂಡ ಇಳಿಸುವುದು ಇವರ ವೃತ್ತಿ. ಇವರಲ್ಲಿ ಕಾನುದೀವರು, ಊರದೀವರು ಎಂಬ ಎರಡು ಬಗೆಗಳಿವೆ, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅವರನ್ನು ಪೂಜಾರಿಗಳು ಎಂದೂ ಮೈಸೂರು ಕಡೆ ಹಳೇ ಪೈಕದವರೆಂದೂ ಕರೆಯುವರು. ಶಿವಮೊಗ್ಗ ಜಿಲ್ಲೆಯಲ್ಲಿ ದೀವರು ಅಥವಾ ಹಳೇಪೈಕದವರೆಂದು ಕರೆಯಲ್ಪಡುವ ಹೆಣ್ಣುಮಕ್ಕಳು ೨. ಬೇಟೆಯಲ್ಲಿ ಕ್ರೂರಮೃಗಗಳನ್ನು ಆಕರ್ಷಿಸಲು ಬಳಸುವ ಪ್ರಾಣಿ: ದೀವರ ಪ್ರಾಣ ರೂಢಿ
* ದೀವು :೨ ಅರಸುಗಳ ಬೇಟೆಯಲ್ಲಿ ದೀವು ಕಟ್ಟುವ ಒಂದು ವಿಶಿಷ್ಟ ಕೆಲಸ ಮಾಡುತ್ತಿದ್ದರಿಂದ ದೀವರು ಎಂಬ ಹೆಸರು ಬಂತೆಂದೂ ಹೇಳುತ್ತಾರೆ.
* ದೀವಟಿಗೆ : ದೀವಟಿಗಿ (ನಾ) ಪಂಜು, ಪತ್ತು ಸಾಲು ದೀವಟಿಗೆ ಬೆಳುಗಿದಾವೋ ಎನ್ನೊಡೆಯನಿಗೆ
* ದೀವಟಿಗೆ : ದೀವಟಿಗಿ ಹತ್ತಿಸರೋ (ರೂಢಿ)
* ದೀವಟಿಗೆ ಸಲಾಮು (ನಾ) ಅಗಸರವನ್ನು ಪಂಜುಗಳನ್ನು ಹಿಡಿದು ದೇವರಿಗೆ ನೀವಾಳಿ ತೆಗೆಯುವುದು: ದೀವಟಿಗೆ ಸಲಾಮು ಉತ್ಸವದಲ್ಲಿ ಬರುವುದು.
* ದೀವಟಿಗೆ ಸೇವೆ (ನಾ) ದೀವಟಿಗೆ ಸಲಾಮು: ದೇವರಿಗೆ ನಡೆಯುವ ದೀವಟಿಗೆ ಸೇವೆ
* ದೀವಳಿಗೆ (ನಾ) ದೀಪಾವಳಿ: ದೀವಳಿಗೆ ಹಬ್ಬಕ್ಕೆಂದು ತಂಗಿಯನ್ನು ಕರೆ
  ಉಂಡೆದ್ದೇ ಉಗಾದಿ ಮಿಂದಷ್ಟೆ ದೀವಳಿಗೆ (ಗಾದೆ)

* ದೀವಳಿಗೆದಂಡು (ನಾ): ಭಾಗವಂತಿಕೆಯವರು ದೀವಳಿಗೆ ಕಾಲದಲ್ಲಿ ಹಾಡುತ್ತಾ ಹಳ್ಳಿ ಹಳ್ಳಿಗೆ ಹೋಗುವುದು ಮೈಸೂರು, ಮಂಡ್ಯ, ಹಾಸನ ಮೊದಲಾದ ಭಾಗಗಳಲ್ಲಿ ಇದರ ವಿಶೇಷ: ದೀವಳಿಗೆ ಕಾಲದಲ್ಲಿ ಹಳ್ಳಿ ಹಳ್ಳಿಗೆ ಹೋಗುವುದಕ್ಕೆ.... ದೀವಳಿಗೆದಂಡು ಎಂದು ಕರೆಯುತ್ತಾರೆ.
* ದೀವಿಗೆ (ನಾ) ದೀಪ: ಇಪ್ಪತ್ತಾಳುದ್ದ ಗವಿ ಒಳಗೆ ತೊಗರಿ ದೀವಿಗೆಯ
* ನೀವಾಳಿ - ದೃಷ್ಟಿ ದೋಷದ ಆರತಿ
* ನೀಲಾಂಜನ - ದೀಪ
* ಹಣತೆಯ ಮುಗ್ಧ ಸ್ನಿಗ್ಧ ಬೆಳಕು

(ಸ್ನಿಗ್ಧ- ಜಿಡ್ಡುಳ್ಳ, ಎಣ್ಣೆ ಹತ್ತಿದ, ನುಣುಪಾದ, ಕೋಮಲವಾದ ಅನುರಕ್ತ, ದಯಾಳು ತಂಪಾದ

* ಸೊಡರು = ಸೊಡರ್ = ಸಣ್ಣ ದೀಪ
* ಹಣತೆ = ಪ್ರಣತಿ
* ಪ್ರಣತಿ - ನಾ (ಸಂ)- ಬಾಗುವಿಕೆ, ಪ್ರಣಾಮ, ವಿನಯ, ಶರಣಾಗತಿ, ನಮಗ್ರತೆ
* ಪ್ರಣತೆ - ಹಣತೆ, ಹಣತಿಗೆ, ದೀಪ, ಉರಿಸುವ ಮಣ್ಣಿನ ತಟ್ಟೆ, ಪಣತಿ
* ದೀಪಂಕರ - ಬುದ್ಧನ ಒಂದು ಅವತಾರ
* ದೀಪ - ದೀವಿಕೆ, ಕುಲ, ಶಿರೋಮಣಿ ದ್ವೀಪ
* ದೀಪಕ - ದೀಪ, ಅರ್ಥಲಂಕಾರದ ಒಂದು ಭೇದ, ಅಜವಾನ, ಕುಂಕುಮ, ಗಿಡಗ, ಮಯೂರ, ಶಿಬೆ
* ದೀಪದಾನ - ಆರಾಧ್ಯ ದೇವತೆಯ ಎದುರಿಗೆ ದೀಪ ಹಚ್ಚುವಿಕೆ, ಧೀಕ್ಷೆ
* ದೀಪನ - ಹಸಿವೆ, ಜೀರ್ಣ ಉತ್ತೇಜನ, ಕಾಮಪೀಡೆ, ಈರುಳ್ಳಿ, ಅಗ್ನಿವರ್ಧಕ
* ದೀಪಧ್ವಜ - ದೀಪದ ಹುಟ್ಟು, ದೀಪದ ಕುಡಿ, ದೀವಟಿಗೆ, ಕಾಡಿಗೆ
* ದೀಪಾರಾಧನೆ - ಆರತಿ ಮಾಡುವಿಕೆ, ದೀಪಗಳಿಂದ ದೇವರನ್ನು ಆರಾಧಿಸುವುದು ದೀಪೋತ್ಸವ
* ದೀಪಾವಳಿ - ದೀವಳಿಗೆಯ ಹಬ್ಬ
* ದೀಪಿಕಾಂಕುರ - ದೀಪದ ಕುಡಿ, ದೀಪಿಕಾ, ದೀಪಿಕೆ, ಚಿಕ್ಕದೀಪ, ಒಂದುರಾಗಿಣಿ, ಬೆಳದಿಂಗಳು
* ದೀಪಿತ - ದೀಪ್ತ, ಪ್ರಜ್ವಲಿತ, ಹೊಳೆಯುವ, ಉತ್ತೇಜಿತ
* ದೀಪ್ತ - ದೀಪಿತ, ಸುವರ್ಣ, ಸಿಂಹ, ಇಂಗು, ನಿಬೆ, ಮೂಗಿನ ಒಂದು ರೋಗ
* ದೀಪ್ತಾಗ್ನಿ - ಅತ್ಯಂತ ಹೆಚ್ಚಿನ ಜೀರ್ಣ ಶಕ್ತಿಯುಳ್ಳವ, ಅಗಸ್ತ್ಯ ಮುನಿ
* ದೀಪ್ತಿ - ಹೊಳಪು, ಕಾಂತಿ, ಮಿಂಚಿನ, ವೇಗದಿಂದ ಬಾಣವು ಚಲಿಸುವಿಕೆ, ಜ್ಞಾನದ ಅಭಿವ್ಯಕ್ತಿ, ಅರಗು, ಕಂಚು
* ದೀಪ್ಯ - ಅಗ್ನಿ ವರ್ಧಕ, ಅಜವಾನ, ಮಯೂರ, ಶಿಖೆ, ರುದ್ರಜವಾ
* ದೀಪ್ಯಮಾನ - ಹೊಳೆಯುವ, ಹೊಳೆಯುತ್ತಿರುವ
* ದೀಪೋತ್ಸವ - ದೀಪಾವಳಿ ಹಬ್ಬ

* ನಂದಾ ದೀಪ - ಆರದ ಸದಾ ಉರಿಯುವ ದೀಪ
* ಸೊಡ್ಡು - ಸೊಡ್ಲು, ಸೊಡರು, ದೀಪ, ಮಣ್ಣಿನ ಹಣತೆ
* ದೀಪತುಂಬು - ದೀಪ ಆರಿಸು
* ದೀಪಾಲೆಕಂಬ - ದೀಪ ಹೊತ್ತಿಸುವ ಕಂಬ, ನೆತ್ತಿಯ ಮೇಲೆ ದೀಪ ಇಡಲು ಸಾಧ್ಯವಾಗುವಂಥ ಒಂದರಿಂದ ಎರಡೂವರೆ ಅಡಿಗಳಷ್ಟು ಎತ್ತರ ಇರುವ ಮರದ ಅಥವಾ ಲೋಹದ ಆಧಾರಸ್ತಂಭ.

ಮೇಲಿನ ಅರ್ಥಗಳನ್ನು ನೋಡಿದಾಗ ಬಹಳ ಮುಖ್ಯವಾಗಿ ಹಣತೆ ಎಂಬುದು ದೀಪ, ಪ್ರಣತಿ, ಪಣತಿ, ಸೊಡರು, ಸೊಡ್ಲು, ದೀವಿಗೆ, ಹೊಳೆಯುತ್ತಿರುವ ಜ್ಯೋತಿ, ಕಾಂತಿ, ಆರತಿ, ಪ್ರಾಂಜಲ ಹೀಗೆ ಹತ್ತು ಹಲವಾರು ಅರ್ಥಗಳನ್ನು ಕಾಣುತ್ತೇವೆ. ಜನಪದರಲ್ಲಿ ಬಹಳ ಮುಖ್ಯವಾಗಿ ಕತ್ತಲಿನಿಂದ ಬೆಳಕಿನೆಡೆಗೆ ಸಾಗುವ ಆಶಯದ ಹಿನ್ನೆಲೆಯಲ್ಲಿ ಕಂಡುಕೊಂಡಿದ್ದಾರೆ. ಹಾಗಾಗಿಯೆ ಯಾವುದೇ ಶುಭಕಾರ್ಯ ಪ್ರಾರಂಭಿಸುವ ಮೊದಲು ಜ್ಯೋತಿಯನ್ನು ಬೆಳಗಿಸುವುದು ಒಂದು ಸಂಪ್ರದಾಯ. ಮಂಗಳಪ್ರದಾಯವಾದ ಆ ಕೆಲಸ ಪೂರ್ಣವಾಗುವವರೆಗೂ ದೀಪ ಆರಿಹೋಗಬಾರದು. ದೀಪ ಆರಿದರೆ ಅಪಶಕುನವೆಂಬ ಭಾವನೆ ಇದೆ. ಪ್ರಮಾಣಮಾಡುವ ಮೊದಲು ದೇವರ ಎದುರು ಇರಿಸಿದ ದೀಪವನ್ನು ಆರಿಸಿ ದೀಪಸಾಕ್ಷಿಯಾಗಿ ತಾವು ನಿಜವನ್ನೇ ಹೇಳುತ್ತಿದ್ದೇವೆಂದು ಸಾರುತ್ತಿದ್ದರು. ಮಹಾಕಾಳಿಯನ್ನು ಅರ್ಪಿಸುವ ವಿಧಗಳಲ್ಲಿ ಒಂದಾದ ದೀಪ ನಮಸ್ಕಾರಕ್ಕೆ ವಿಶೇಷ ಪ್ರಾಧಾನ್ಯತೆ ಇದೆ.

**೨.೨ ರಚನಾ ವಿನ್ಯಾಸ**

ಯಾವುದೇ ಒಂದು ವಸ್ತುವನ್ನು ನೋಡಿದಾಗ ಆ ವಸ್ತುವಿನ ಆಕರ್ಷಣೆ ಅದರ ರಚನಾ ವಿನ್ಯಾಸದಲ್ಲಿ ಇರುತ್ತದೆ. ಅಂದರೆ ವಸ್ತು ತುಂಬಾ ಆಕರ್ಷಕವಾಗಿ ಕಾಣಬೇಕಾದರೆ ಅದರ ರಚನೆಯು ಅಷ್ಟೇ ಉತ್ಕೃಷ್ಟವಾಗಿರಬೇಕು. ಕೇವಲ ಉತ್ಕೃಷ್ಟತೆಯಿದ್ದು ಇದು ಬಳಕೆಗೆ ಯೋಗ್ಯವಾಗದಿದ್ದಲ್ಲಿ ಅದರ ಮೌಲ್ಯ ಕೇವಲ ಪ್ರದರ್ಶನಕ್ಕೆ ಸೀಮಿತವಾಗಿರುತ್ತದೆ. ಆದರೆ ಜನಪದರು ತಮ್ಮ ಕಲಾ ಕೌಶಲ್ಯತೆಯ ಮೂಲಕ ಉತ್ಕೃಷ್ಟವಾಗಿ ರಚಿಸುವುದರ ಜೊತೆಗೆ ಅದು ಉಪಯೋಗಕ್ಕೆ ಬರುವ ರೀತಿಯಲ್ಲಿ ತಮ್ಮ ಚಾಣಾಕ್ಷತೆಯನ್ನು ಮರೆದಿರುತ್ತಾರೆ. ಈ ಹಿನ್ನೆಲೆಯಲ್ಲಿ ಹಣತೆಯ ಕುರಿತು ಯೋಜಿಸಿದಾಗ ಉತ್ಕೃಷ್ಟತೆ ಮತ್ತು ಉಪಯೋಗದ ಜೊತೆಗೆ ಅವುಗಳ ರಚನಾ ವಿನ್ಯಾಸದಲ್ಲಿ ಸೊಗಸು, ಭಕ್ತಿ, ಭಾವುಕತೆ ಇರುವುದನ್ನು ಕಾಣುತ್ತೇವೆ. ಮತ್ಸ್ಯ, ಕೂರ್ಮ, ಸರ್ಪ, ನಂದಿ, ನವಿಲು, ಗಿಳಿ ಮುಂತಾದ ಪ್ರಾಣಿ ಪಕ್ಷಿಗಳನ್ನು ಕಲಾತ್ಮಕವಾಗಿ ಅಳವಡಿಸಿದ ವಿವಿಧ ಬಗೆಯ ಆರತಿ ತಟ್ಟೆಗಳಲ್ಲಿ ಭಕ್ತರು ಪವಿತ್ರವಾದ ದೀಪವನ್ನು ಬೆಳಗಿ, ಸಂರಕ್ಷಿಸಿ ಧನ್ಯತೆ ಪಡೆಯುತ್ತಾರೆ. ಕಾಲುದೀಪಗಳಲ್ಲಿಯೂ ಆಕಾರ ವೈವಿಧ್ಯವಿದ್ದು ಅದರ ತುದಿಯಲ್ಲಿ ಐಯ್ಯು ದೀಪ ವೈವಿಧ್ಯ ಪೂರ್ಣ ತೂಗುದೀಪಗಳನ್ನೇ ದೇವಾಲಯದ ರಾಜ ಮಂದಿರಗಳಲ್ಲಿ ಕಾಣಬಹುದಾಗಿದೆ. ದೀಪಾವಳಿ ಕಾರ್ತಿಕೋತ್ಸವ, ಕ್ರಿಸ್‌ಮಸ್ ಮುಂತಾದ ಸಂದರ್ಭಗಳ ಸಾಲುದೀಪ, ಅಂತರಾಳದಲ್ಲಿ ತೂಗಾಡುವ ಆಕಾಶದೀಪಗಳ ಸವಿ ಸೊಗಸನ್ನು ಅನುಭವಿಸಿಯೇ ಅರಿಯಬೇಕು. ಮಾನವನ ನಿತ್ಯ ಬದುಕಿನಲ್ಲಿ ಚಿಮಣಿದೀಪ, ಲಾಟೀನು, ಗ್ಯಾಸ್, ದೀಪ ವಿವಿಧ ಸ್ವರೂಪದ ವಿದ್ಯುತ್‌ದೀಪಗಳ ಒಂದು ಲೋಕದಲ್ಲಿ ಕ್ರಾಂತಿಯೇ ಆಗಿದೆ. ಸಭೆ ಸಮಾರಂಭಗಳಲ್ಲಿ ವಿದ್ಯುತ್ ದೀಪಗಳಿಂದ ಮಾಡುವ ಅಲಂಕಾರ ಕಣ್ಣುಮುಂದೆ ಮಾಯಾ ಲೋಕವನ್ನು ತೆರೆದಿಡುತ್ತವೆ.[೫]

ಮೊದ ಮೊದಲಿಗೆ ಬಳಸಿದ ಹಣತೆ ಬಟ್ಟಲು ಪಾತ್ರೆಯ ಆಕಾರವನ್ನು ಹೊಂದಿರುತ್ತಿತ್ತು. ನಂತರ ಅದಕ್ಕೆ ಬತ್ತಿ ಇಡುವ ಸಲುವಾಗಿ ಉಕ್ಕಿನಾಕಾರದ ರಚನೆಯನ್ನು ಸೇರಿಸಲಾಯಿತು. ಅದರ ಜೊತೆಗೆ ಅಲಂಕಾರವನ್ನಾಗಿ ಪೀಠವನ್ನು ಅಳವಡಿಸಲಾಯಿತು. ದೀಪವನ್ನಿಡಲು ಮರದ ಇಲ್ಲವೇ ಕಲ್ಲಿನ ಪೀಠಗಳನ್ನು ಮೊದಲಿಗೆ ಉಪಯೋಗಿಸುತ್ತಿದ್ದುದು ತಿಳಿದು ಬರುತ್ತದೆ. ವೃತ್ತಾಕಾರದ ಅಥವಾ ಚೌಕಾಕಾರದ ಪೀಠವನ್ನು ಹೊಂದಿರುತ್ತಿದ್ದ ದೀಪಗಳು ನಂತರದ ದಿನಗಳಲ್ಲಿ ಕಲಾವಿದನ ಕಲಾ ಕೌಶ್ಯಲ್ಯಕ್ಕೆ ಅನುಗುಣವಾಗಿ ಅಲಂಕೃತವಾದುದನ್ನು ಗಮನಿಸಬಹುದು. ಈ ಪೀಠಗಳು ಮರದ್ದಾದರೂ, ಕಲ್ಲಿನದ್ದಾದರೂ, ಲೋಹದ್ದಾದರೂ ಅಲಂಕೃತ ಪೀಠಗಳಾಗಿ ಮಾರ್ಪಟ್ಟವು. ದಿನ ಕಳೆದಂತೆ ದೀಪವನ್ನು ಇಡುವ ಪೀಠಕ್ಕೂ ಮಹತ್ವದ ಸ್ಥಾನ ದೊರೆಯಿತು.[೬]

ಪ್ರಾಚೀನ ಸಾಹಿತ್ಯ ಗ್ರಂಥಗಳಲ್ಲಿ ಬೆಳ್ಳಿ,ಚಿನ್ನ ಹಾಗೂ ರತ್ನ ದೀಪಗಳ ಪ್ರಸ್ತಾಪವಿದೆ. ಜನಪದರಲ್ಲಿ ಮುತ್ತಿನ, ಹವಳದ, ಹೂವಿನ ದೀಪಗಳು ಚಿತ್ರಗಳು ದೊರೆಯುತ್ತವೆ. ರತ್ನ ದೀಪಗಳು ಬೆಳಕಿನಲ್ಲಿ ಹಿಂದೆ ರಾತ್ರಿಯುದ್ಧಗಳು ಜರುಗುತ್ತಿದ್ದ ವಿವರಣೆಗಳು ನಮ್ಮ ಕಾವ್ಯಗಳಲ್ಲಿ ಸಿಗುತ್ತವೆ. ಅತ್ಯಂತ ಪ್ರಾಚೀನವಾದ ಸಿಂಧೂ ಸಂಸ್ಕೃತಿಯಲ್ಲಿ ಬೀದಿ ದೀಪ ಮುಖ್ಯರಸ್ತೆಗಳಲ್ಲಿ ಸ್ತಂಭದೀಪ, ಮನೆಯ ಪ್ರಧಾನ ಬಾಗಿಲಲ್ಲಿ ಚಿಕ್ಕ ದೀಪಗಳನ್ನಿಡುತ್ತಿದ್ದರೆಂದು ತಿಳಿದು ಬರುತ್ತದೆ. ಮೊಗಲ ರಜಪೂತರ ಹಾಗೂ ಮರಾಠರ ಆಳ್ವಿಕೆಯಲ್ಲಿ ಮೇಲ್ಛಾವಣಿಯ ದೀಪ, ಸ್ತಂಭದೀಪ ಸಾಲುದೀಪಗಳನ್ನು ಬೆಳಗುತ್ತಿದ್ದರಂತೆ, ಆಯುರಾರೋಗ್ಯ, ಪುತ್ರ ಸಂತಾನದಿ ಅಭೀಷ್ಟ ಸಿದ್ಧಿಗಾಗಿ ದೇವರನ್ನು ಪ್ರಾರ್ಥಿಸಿ, ಇಷ್ಟ ಸಿದ್ಧಿಯಾದಾಗ ತುಪ್ಪದ ದೀಪ, ಹೊನ್ನೆಣ್ಣೆ ದೀಪ, ನಂದಾದೀಪಗಳನ್ನು ಹರಕೆಯ ರೂಪದಲ್ಲಿ ಹಚ್ಚುವ ಸಂಪ್ರದಾಯ ಇಂದಿಗೂ ಇದೆ.

ದೀಪಗಳ ಒಂದು ಮಾಸವೇ ಹಿಂದೂಗಳಲ್ಲಿ ಪ್ರಸಿದ್ಧ ಆಚರಣೆಯಾಗಿದೆ. ಅದೇ ಶರದೃತುವಿನ ಕಾರ್ತಿಕ ಮಾಸವಾಗುವುದು ದೀಪ ಹಚ್ಚುವುದರಿಂದಲೇ ಮತ್ತು ಮುಕ್ತಾಯಗೊಳ್ಳುವುದು ಮಂಗಳಾರತಿಯಿಂದಲೇ, ದೇವರ ಮುಂದೆ ಸಣ್ಣಗೆ ಉರಿಯುತ್ತಿರುವ ದೀಪವನ್ನು ನಂದಾದೀಪವೆನ್ನುತ್ತಾರೆ. ಹೀಗೆ ದೀಪಗಳನ್ನು ಅನೇಕ ಸಂದರ್ಭಗಳಲ್ಲಿ ಬಳಸಿ ಪ್ರಥಮ ಪ್ರಾಶಸ್ತ್ಯ ನೀಡಿರುವುದರಿಂದ ಕಲಾವಿದ ಇಂದು ಅನೇಕ ರೀತಿಯಲ್ಲಿ ದೀಪಗಳನ್ನು ರಚಿಸಿ ವಿನ್ಯಾಸ ನೀಡಿದ್ದಾನೆ. ಈ ವಿನ್ಯಾಸವನ್ನು ಕುರಿತು ಹಣತೆಯ ವರ್ಗೀಕರಣದಲ್ಲಿ ನೋಡಬಹುದಾಗಿದೆ.

**ಹಣತೆಯ ವರ್ಗೀಕರಣ**

೧. ಆರತಿ ದೀಪ

೨. ಕಾಲು ದೀಪ

೩. ವೃಕ್ಷ ದೀಪ

೪. ದೀಪದ ಮಲ್ಲಿ

೫. ತೂಗು ದೀಪ

೬. ನಂದಾ ದೀಪ

೭. ತೋರಣದೀಪ

೮. ಸಾಲುದೀಪ

೯. ದೀವಟಿಗೆಗಳು

### ೧. ಆರತಿ ದೀಪ

'ಏಕಂ ಸತ್ ವಿಪ್ರಾ ಬಹುದಾವದಂತಿ' ಅಂದರೆ ವಿವಿಧತೆಯಲ್ಲಿ ಏಕತೆ ಎನ್ನುವ ಭಾರತೀಯ ತತ್ವ ಸಿದ್ಧಾಂತದ ಸಾಂಕೇತಿಕ ರೂಪ ಒಂದೇ ಜ್ಯೋತಿ ಅನೇಕವಾಗಿ ಮತ್ತೆ ಒಂದಾಗಿ ಉಳಿಯುತ್ತದೆ. ಹಿಂದೂ ವೈಧಿಕ ಶಾಸ್ತ್ರಗಳಪ್ರಕಾರ ದೇವತಾ ಕಾರ್ಯಗಳಲ್ಲಿ ಆರಂಭವಾಗುವಾಗ ಮೊದಲು ಏಕ ಆರತಿಯಿಂದ ಆರಂಭಿಸಿ ಮಹಾರತಿಯೊಂದಿಗೆ ಮಂಗಳಾರತಿಯೊಂದಿಗೆ ಹಿಡಿದ ಕಾರ್ಯವನ್ನು ಪೂರ್ಣಗೊಳಿಸುತ್ತಾರೆ. ಹಾಗಾಗಿಯೇ ಆರತಿಯನ್ನು ವೈದಿಕ ಸ್ವರೂಪವು, ''ತಮಸೋಮ ಜ್ಯೋತಿರ್ಗಮಯ'' ಎಂದು ವರ್ಣಿಸಿ, ದೀಪಜ್ಯೋತಿಯನ್ನು ''ಜ್ಯೋತಿಷಾಂ ಜ್ಯೋತಿರುತ್ತಮಂ'' ಎಂದು ತಿಳಿಸಿದೆ. ಹಾಗಾಗಿ ಆರತಿ ದೀಪವನ್ನು ಧಾರ್ಮಿಕ ದೀಪ ಎಂದು ಕರೆಯುತ್ತಾರೆ. ''ಡಿ.ಜಿ.ಕೇಲ್ಕರ್'' ಎಂಬುವವರು ತಮ್ಮ ''ಲ್ಯಾಂಪ್ಸ್ ಆಫ್ ಇಂಡಿಯಾ'' ಎಂಬ ಗ್ರಂಥದಲ್ಲಿ ಆರತಿಯನ್ನು ಕುರಿತು ಹೇಳುತ್ತಾರೆ. ಆರತಿ ಎನ್ನುವುದು ಭಗವಂತನಿಗೆ ಅರ್ಪಿಸುವ ಭಕ್ತನ ಆತ್ಮವನ್ನು ಪ್ರತಿನಿಧಿಸುತ್ತದೆ.

ಆಗಮಗಳಲ್ಲಿ ದೀಪದ ಆರತಿಯನ್ನು ಕುರಿತು ತಿಳಿಸಲಾಗಿದೆ. ಇದರಲ್ಲಿ ಉರಿಯುತ್ತಿರುವ ದೀಪವು ದೈವತ್ವದ ಸಂಕೇತವಾಗಿದೆ ಎನ್ನಲಾಗುತ್ತದೆ. ದೀಪದಲ್ಲಿನ ಬೆಂಕಿಯು ಅಗ್ನಿಯನ್ನು ಪ್ರತಿನಿಧಿಸಿದರೆ ದೀಪದ ಮಧ್ಯಭಾಗವು ಈಶ್ವರನನ್ನು ಮತ್ತು ಅದರ ತಳಭಾಗವು ಪ್ರಜಾಪತಿಯನ್ನು ಪ್ರತಿಸಿಧಿಸುತ್ತದೆ ಎಂದು ಹೇಳಲಾಗುತ್ತದೆ. ದೀಪದಲ್ಲಿ ಮೂಡುವ ಆರತಿಯು ಸೂರ್ಯ ಮತ್ತು ಬೆಂಕಿಯನ್ನು ಸಾಂಕೇತಿಸುವುದು ಎಂದು ಅರ್ಥೈಸಿಕೊಳ್ಳಲಾಗುವುದು.

ಜನಪದರಲ್ಲಿ ಸರಸಿಜದಾರತಿ, ಪ್ರ್ಯಕ್ಷನಿಗಾರತಿ, ಕಾಂಚನಾದಾರತಿ, ನೋದದೊಳಾರತಿ, ಮೃಗಮದಾರತಿ, ಮಣಮಯದಾರತಿ, ಕುಂದಣದಾರತಿ, ಮೇರುವೆಯಾರತಿ, ಸದ್ಮಾದಾರತಿ, ಕುರುಜಿನಾರತಿ, ತರುಣಿಯರಾರತಿ ಬೆಲ್ಲದಚ್ಚಿನ ಆರತಿ, ಮುತ್ತಿನಾರತಿ, ಇತರೆ ಎಂದು ಹಲವು ರೀತಿಯಲ್ಲಿ ಬೆಳಗುತ್ತಾರೆ. ಇದರ ರೂಪಗಳೇ ಶಿಶ್ಪರಲ್ಲಿ ಆರತಿಗಳು ವಿನ್ಯಾಸಗೊಂಡಿರುವುದನ್ನು ನೋಡುತ್ತೇವೆ.

ಆರತಿ ದೀಪಗಳು ಒಂದು, ಮೂರು, ಐದು, ಏಳು ದೀಪಗಳಿಂದ ಹಿಡಿದು ಸುಮಾರು ಇನ್ನೂರೈವತ್ತೊಂದು ದೀಪಗಳನ್ನು ಹೊಂದಿರುತ್ತವೆ. ದೇವರ ಮುಂದೆ ಆರತಿ ಬೆಳಗುವುದನ್ನು ನಿರಂಜನ, ಆರತಿ, ದೀಪ, ಜ್ಯೋತಿ ಹೀಗೆ ಕೆಲವು ಹೆಸರುಗಳಿಂದ ಕರೆಯಲಾಗುತ್ತದೆ.

ಆರತಿದೀಪದಲ್ಲಿ ಬಟ್ಟಲಿನ ಸಂಖ್ಯೆಯನ್ನು ಆಧರಿಸಿ ಏಕಾರತಿ ಅಂದರೆ ಮಹೇಶ್ವರನೆಂದು, ದ್ವಿಆರತಿಯನ್ನು ಉಮಾ ಮಹೇಶ್ವರನೆಂದೂ, ತ್ರೀ ಆರತಿಯನ್ನು ತ್ರಿಮೂರ್ತಿಯರಾದ ಬ್ರಹ್ಮ, ವಿಷ್ಣು, ಶಿವ ಇಲ್ಲವೇ ಮೂರು ತತ್ವಗಳೆಂದು ತಿಳಿಯಲಾಗುತ್ತದೆ. ಪಂಚಾರತಿಯು ಪಂಚ ಮಹಾಭೂತಗಳನ್ನು ಪ್ರತಿನಿಧಿಸುತ್ತದೆ. ಸಪ್ತ ಆರತಿಯನ್ನು ಸಪ್ತಮಹರ್ಷಿಗಳು (ಕಶ್ಯಪ, ಭರಧ್ವಾಜ, ವಿಶ್ವಮಿತ್ರ, ಗೌತಮು, ಜಮದಗ್ನಿ, ವಸಿಷ್ಠ (ಭಾರ ಶಲ್ಯರ್ಳಾ) ಮರೀಚಿ, ಅಂಗಿರಸು, ಪ್ರಲಸ್ತ್ಯ ಕ್ರಕು). ಇಲ್ಲವೇ ಸಪ್ತಮಾತೃಕೆಯರು ಎಂದು ತಿಳಿಯಲಾಗುತ್ತದೆ. ಅಷ್ಟ ದೀಪಾರತಿಯು ಅಷ್ಟ ವಿದ್ಯೆಗಳನ್ನು ಅಥವಾ ಈಶ್ವರನು ಅಷ್ಟ ಮೂರ್ತಿಗಳನ್ನು ಪ್ರತಿನಿಧಿಸುತ್ತದೆ. ಭೂಮಿ, ಅಗ್ನಿ, ಬ್ರಾಹ್ಮಣ,

ಸೂರ್ಯ, ಜಲ, ವಾಯು, ಚಂದ್ರ ಮತ್ತು ಆಕಾಶಗಳನ್ನು ಶಿವನ ಅಷ್ಟ ಮೂರ್ತಿಗಳು ಎಂದು ಪುರಾಣಗಳಲ್ಲಿ ವಿವರಣೆ ದೊರೆಯುತ್ತದೆ.

ದಕ್ಷಿಣ ಭಾರತದಲ್ಲಿ ನಿರ್ಮಿಸಲಾದ ಏಕಾರತಿಯೊಂದು ಇದರಲ್ಲಿ ಸರಳವಾದ ರಚನಾ ವಿನ್ಯಾಸವನ್ನು ಹೊಂದಿದ್ದು, ಇದಕ್ಕೆ ಎರಡು ಕಾಲುಗಳನ್ನು ಅಳವಡಿಸಲಾಗಿದೆ. ಇದರ ಎತ್ತರ ಸುಮಾರು ೨ ಸೆಂ.ಮೀ ಇದ್ದು ಇದನ್ನು ಕ್ರಿ.ಶ.ಸುಮಾರು ೧೭ನೇ ಶತಮಾನದಲ್ಲಿ ರಚಿಸಲಾಗಿದೆ. ಮಹೇಶ್ವರನನ್ನು ಪ್ರತಿನಿಧಿಸುವ ಏಕಾರತಿಯು ಹೆಸರೇ ಸೂಚಿಸುವಂತೆ ಏಕ ಸೊಡರಿನ-ಏಕದೀಪ ಪಾತ್ರೆಯಾಗಿದೆ. ಧಾರ್ಮಿಕ ದೀಪವೊಂದರಲ್ಲಿ ಸುಮಾರು ನೂರಾಒಂದು ದೀಪಗಳನ್ನು ಬೆಳಗುವ ಅನುಕೂಲ ಮಾಡಿರುವುದನ್ನು ದೇವಾಲಯಗಳಲ್ಲಿ ಕಾಣುತ್ತೇವೆ. ಈ ದೀಪದಲ್ಲಿ ಹಂತ ಹಂತಗಳಲ್ಲಿ ದೀಪದ ಬಟ್ಟಲಗಳನ್ನು ಅಳವಡಿಸಲಾಗಿದ್ದು. ಸುಮಾರು ಕ್ರಿ.ಶ ೧೮ನೇ ಶತಮಾನದಲ್ಲಿ ತಯಾರಿಸಲಾಗಿದೆ. ಕ್ರಿ.ಶ.ಸುಮಾರು ೧೫ನೇ ಶತಮಾನದಲ್ಲಿ ನಿರ್ಮಾಣವಾದ ಪಂಚಾರತಿಯು ವಿಶೇಷವಾದ ವಿನ್ಯಾಸವನ್ನು ಹೊಂದಿರುವುದನ್ನು ಕಾಣಬಹುದು. ಪ್ರೊ.ಎಸ್.ಕೆ.ರಾಮಚಂದ್ರರಾವ್ ಅವರ ಪ್ರಕಾರ ''ಪೂಜೆಯ ಸಮಯದಲ್ಲಿ ಒಂಬತ್ತು ದೀಪಗಳನ್ನು ಆರತಿಯಾಗಿ ಬೆಳಗುವುದು ಅತ್ಯುತ್ತಮ. ಇವುಗಳ ನಂತರ, ಐದು ದೀಪಗಳು ಅತ್ಯುತ್ತಮವೆಂದು ಪರಿಗಣಿಸಲಾಗುತ್ತದೆ. ಕನಿಷ್ಠ ಪಕ್ಷ ಒಂದು ಸೊಡರಿನ ಆರತಿಯನ್ನಾದರೂ ಬೆಳಗಬೇಕು ಮತ್ತು ದೀಪವನ್ನು ಅಷ್ಟಮಂತ್ರದಿಂದ ಪುನೀತಗೊಳಿಸಬೇಕು ಎನ್ನುತ್ತಾರೆ..''

ಶಾಸ್ತ್ರ ಗ್ರಂಥಗಳು ನಮಗೆ ಸಿಕ್ಕಿರುವ ಆರತಿ ದೀಪಗಳನ್ನು ಕುರಿತು ಹೇಳುವುದರ ಜೊತೆಗೆ ದೇವಾಲಯಗಳಲ್ಲಿ ಅವುಗಳನ್ನು ಬಳಸುವ ವಿಧಿ-ವಿಧಾನಗಳನ್ನು ಕುರಿತು ತಿಳಿಸುತ್ತೇವೆ. ಕಾಮಿಕಾಗಮ ಎಂಬ ಗ್ರಂಥದಲ್ಲಿ ದೇವರ ಮುಂದೆ ಆರತಿಯನ್ನು ಬೆಳಗುವ ವಿಧಾನವನ್ನು ಹೇಳಲಾಗಿದೆ. ಇದರಲ್ಲಿ ಆರತಿ ಬೆಳಗುವಾಗ ಮೊದಲನೆಯ ಸುತ್ತು ದೇವ ಮೂರ್ತಿಯ ತಲೆಯಿಂದ ಪಾದದವರೆಗೆ ಇರಬೇಕು. ಎರಡನೆಯ ಸುತ್ತಿನಲ್ಲಿ ಮುಖದಿಂದ ಮೊಣಕಾಲಿನವರಿಗೆ ಇರಬೇಕು. ಮೂರನೇ ಸುತ್ತು ಕತ್ತಿನಿಂದ ಸೊಂಟದವರೆಗೆ ಇರಬೇಕು ಎಂದಿದೆ.

ಆರತಿ ದೀಪಗಳ ರಚನಾ ವಿನ್ಯಾಸಗಳಲ್ಲೂ ಆಕೃತಿಗಳು ಇಲ್ಲವೇ ಉದ್ದೇಶದ ಆಧಾರದ ಮೇಲೆ ಹೆಸರು ಸೂಚಿಸಿರುವುದನ್ನು ನೋಡಬಹುದು.

೧. ಏಕಾರತಿ

೨. ತ್ರಿಕಾರತಿ

೩. ಪಂಚಾರತಿ

೪. ಮಹಾರತಿ

೫. ದೂಪಾರತಿ

೬. ಶಂಖಾರತಿ

೭. ಚಕ್ರಾರತಿ

೮. ಕುರ್ಮಾರತಿ

೯. ನಾಗಾರತಿ

೧೦. ರಥಾರತಿ

೧೧. ಹಂಸಾರತಿ

೧೨. ಮಯುರಾರತಿ

೧೩. ಪದ್ಮಾರತಿ

೧೪. ಕುಂಭಾರತಿ

೧೫. ಕರ್ಪೂರಾರತಿ

೧೬. ಚಂದ್ರದೀಪ

೧೭. ಕೈತಾಲಿ

ನಿವೇದನೆಯ ದೀಪವಾದ ಆರತಿಯು ಆಧ್ಯಾತ್ಮಿಕವಾಗಿ ಧಾರ್ಮಿಕವಾಗಿ ಮಹತ್ವಪೂರ್ಣವಾಗಿದೆ. ಆರತಿಯ ಜ್ಯೋತಿಯು ತನ್ನ ಆತ್ಮವನ್ನು ಪ್ರತಿನಿಧಿಸುತ್ತದೆ ಎಂದು ನಂಬಿಕೆ ಇದೆ. ಜ್ಯೋತಿಯು ಭಗವಂತನಲ್ಲಿ ಲೀನಗೊಳ್ಳುವ ತೀರದಲ್ಲಿ ತಾನೂ ಪರಮಾತ್ಮನಲ್ಲಿ ಶರಣಾಗತನಾಗಬೇಕೆಂದು ಪ್ರಾರ್ಥಿಸುತ್ತಾನೆ. ಇದೇ ಆರತಿ ಭಕ್ತಿಯಿಂದ ಹಾಗೇ ಆರತಿ ಮಾಡುವುದರಿಂದ ದೇವರ ಮೇಲೆ ಯಾವುದೇ ಕೆಟ್ಟದೃಷ್ಟಿ ಬೀಳುವುದಿಲ್ಲ ಎಂಬ ನಂಬಿಕೆಯು ಹಿಂದೂ ಸಂಪ್ರದಾಯದಲ್ಲಿ ಇರುವುದು ಕಾಣುತ್ತೇವೆ. ಇವುಗಳಲ್ಲಿ ಕೆಲವು ಆರತಿಗಳನ್ನು ವಿಶ್ಲೇಷಣೆಗೆ ಒಳಪಡಿಸಿಕೊಳ್ಳಲಾಗಿದೆ.

**೧. ನಾಗಾರತಿ**

ಶೈವ ದೇವಾಲಯಗಳಲ್ಲಿ ಬಳಸುವ ಪಂಚಾರತಿಯಲ್ಲಿ ಐದು ತಲೆಯ ನಾಗಾರತಿ ಇರುವುದು ಕಾಣುತ್ತೇವೆ. ಆರತಿ ದೀಪಗಳಲ್ಲಿ ಒಂದು ತಲೆಯ ಸರ್ಪವನ್ನು ರಾಹುವೆಂದೂ, ಐದು ತಲೆಯ ಸರ್ಪವಾದರೆ ಅದನ್ನು ಕೇತು ಎಂದು ತಿಳಿಯಬೇಕು. ಈ ರೀತಿಯ ಪಂಚಾರತಿಯನ್ನು ನಾಗ ಪಂಚಾರತಿ ಎಂದೂ ಅಥವಾ ನಾಗಾರತಿ ಎಂದು ಅಥವಾ ನಾಗ ದೀಪ ಎಂದು ಕರೆಯಲಾಗುತ್ತಿದೆ. ಇದರಲ್ಲಿ ಗಾಂಭೀರ್ಯ ಸೌಮ್ಯ ರೂಪಗಳಿವೆ ನಾಗನು ಸಮೃದ್ಧಿಯ ಸಂಕೇತವಾಗಿದೆ. ಒಂದು ತಲೆಯ ನಾಗಾರತಿಯ ದೀಪದ ರಚನೆಯನ್ನು ನೋಡಬಹುದಾಗಿದೆ. ಈ ದೀಪದಲ್ಲಿ ನಾಗ ಪಂಚಾರತಿಯನ್ನು ಬೆಳಗುವ ಅವಕಾಶವನ್ನು ಮಾಡಲಾಗಿದೆ. ಇನ್ನೊಂದು ನಾಗದೀಪವು ಪಂಚಾರತಿಯನ್ನು ಮಾಡಲು ಐದು ದೀಪಗಳನ್ನು ಹೊಂದಿರುವುದರ ಜೊತೆಗೆ ಪ್ರತಿಯೊಂದು ದೀಪದ ಮೇಲೆ ಹಾವಿನ ಹೆಡೆ ಇರುವಂತೆ ಚಿತ್ರಿಸಲಾಗಿದೆ. ಇದರ ಮೇಲೆ ಹಾವಿನ ಹೆಡೆ ಇರುವಂತೆ ಚಿತ್ರಿಸಲಾಗಿದೆ. ಇದರ ಕಾಲ ಕ್ರಿಶ.ಸುಮಾರು ೧೭ನೇ ಶತಮಾನವಿರಬಹುದು.

**೨. ಕೂರ್ಮಾರತಿ**

ಕೂರ್ಮಾರತಿ ದೀಪವು ಆಮೆಯ ವಿನ್ಯಾಸವನ್ನು ಹೊಂದಿರುವುದರಿಂದ ಈ ಆರತಿಗೆ ಕೂರ್ಮಾರತಿ ಎಂದು ಹೆಸರು. ಇದನ್ನು ಹೆಚ್ಚಾಗಿ ಬೆಳ್ಳಿಯ ಲೋಹದಲ್ಲಿ ಮಾಡಿರುತ್ತಾರೆ. ಕೂರ್ಮಾಕಾರದಲ್ಲಿ ಇದರ ನಾಲ್ಕು ಕಾಲಗಳು ದೀಪಪಾತ್ರಗೆ ಆಧಾರ ನೀಡುತ್ತವೆ. ಕೈಹಿಡಿಯಲ್ಲಿ ಪುಷ್ಪರೇಖೆಗಳಿರುತ್ತವೆ.

೩.ರಥಾರತಿ

ರಥಾರತಿಯನ್ನು ರಥದಂತೆ ನಿರ್ಮಿಸಲಾಗಿದ್ದು, ಇದು ದೇವಾಲಯಗಳ ಗೋಪುರಗಳ ಆಕಾರವನ್ನು ಇಟ್ಟುಕೊಂಡು ರಚನೆ ಪಡೆದಿರುವುದರಿಂದ ಇದನ್ನು ರಥಾರತಿ ಎಂದು ಕರೆಯಲಾಗಿದೆ. ಗೋಪುರಾರತಿಯಲ್ಲಿ ಕನಿಷ್ಟ ಪಕ್ಷ ಮೂರು ಹಂತಗಳಿರುತ್ತವೆ. ಮೂರಕ್ಕಿಂತ ಹೆಚ್ಚು ಹಂತಗಳು ಗೋಪುರದಾರತಿಯಲ್ಲಿ ಇರುವುದು ಕಾಣುತ್ತವೆ. ಈ ಆಕೃತಿಯ ಪ್ರತಿಯೊಂದು ಹಂತದಲ್ಲೂ ದೀಪಗಳ ಸಾಲು ಇರುತ್ತದೆ. ಆರತಿಯನ್ನು ಮಾಡಲು ಹಿಡಿಯು ಇರುತ್ತದೆ. ರಥದದೀಪವು ಸದಾಶಿವನನ್ನು ಪ್ರತಿನಿಧಿಸುತ್ತದೆ.

೪. ಚಂದ್ರದೀಪ

ಕರಾವಳಿಯ ಪ್ರದೇಶಗಳಲ್ಲಿ ಚಂದ್ರ ದೀಪಗಳನ್ನು ಹೆಚ್ಚಾಗಿ ಬಳಸಲಾಗುತ್ತದೆ. ಚಂದ್ರದೀಪವು ಅರ್ಧ ಚಂದ್ರಾಕೃತಿಯ ರೂಪದಲ್ಲಿ ರಚಿಸಲ್ಪಟ್ಟಿರುವುದರಿಂದ ಇದಕ್ಕೆ ಚಂದ್ರ ದೀಪ ಎಂದು ಹೆಸರು. ಧಾರ್ಮಿಕ ಆಚರಣೆಗಳ ವಿಶೇಷ ಸಂದರ್ಭಗಳಲ್ಲಿ ಮಾತ್ರ ಇದನ್ನು ಬಳಸುತ್ತಾರೆ.

೫. ಕುಂಭಾರತಿ

ಆರತಿಯ ಬಟ್ಟಾಲು ಕಂಭದ (ಬಿಂದಿಗೆ) ಆಕಾರವನ್ನು ಹೊಂದಿದ್ದರೆ ಅದನ್ನು ಕುಂಭಾರತಿ ಎಂದು ಕರೆಯಲಾಗುತ್ತದೆ. ಭಾರತೀಯ ಸಂಪ್ರದಾಯದಲ್ಲಿ ಕುಂಭವು ಮಂಗಳತರವಾದ ಸಂಕೇತವಾಗಿದ್ದು ಕಳಶವನ್ನು ಸಾಂಕೇತಿಸುತ್ತದೆ. ಚಿನ್ನ ಅಥವಾ ಬೆಳ್ಳಿಯಲ್ಲಿ ರಚಿಸಿರುವುದನ್ನು ಕರ್ನಾಟಕದ ಶೈವ ಮತ್ತು ವೈಷ್ಣವ ಸಂಪ್ರದಾಯದ ದೇವಾಲಯಗಳಲ್ಲಿ ದೊರೆಯುತ್ತವೆ. ಇದರ ಕುಂಭದಲ್ಲಿ ಎಣ್ಣೆಯನ್ನು ಹಾಕಲಾಗಿರುತ್ತದೆ. ಇದರ ಮುಚ್ಚಳದಲ್ಲಿ ದೀಪವನ್ನಿಡಲು ಅನುಕೂಲವನ್ನು ಮಾಡಿರಲಾಗಿದೆ. ಆರತಿಗಳ ಚಿತ್ರದಲ್ಲಿ ಇರುವ ಆಕೃತಿಯು ಕುಂಭಾರತಿಯಾಗಿದೆ.

೬. ಕೈತಾಲಿ

ಕೇರಳದಲ್ಲಿ ಕೈತಾಲಿಗಳು ಹೆಚ್ಚಾಗಿ ಕಂಡುಬಂದಿದ್ದು ಶೈಲಿಯಿಂದ ಕರ್ನಾಟಕದ ಕರಾವಳಿ ಪ್ರದೇಶವು ಪ್ರಭಾವಗೊಂಡಿರುವುದರಿಂದ ಈ ರೀತಿಯ ಕೈತಾಲಿಗಳು ಕರ್ನಾಟಕದಲ್ಲಿ ಬಳಕೆಯಲ್ಲಿರುವುದನ್ನು ನೋಡಬಹುದು. ಕೈತಾಲಿಯ ಮಧ್ಯದಲ್ಲಿ ಎಣ್ಣೆಯನ್ನು ಹಾಕಲು ಮಧ್ಯದಲ್ಲಿ ಜಾಗವಿರುತ್ತದೆ. ಸರ್ಪದ ತಲೆಯಾಕಾರದ ಹಿಡಿಯು ಇದಕ್ಕಿರುತ್ತದೆ. ಕೈತಾಲಿಗಳನ್ನು ದೀಪ ಹಚ್ಚುವುದರ ಜೊತೆಗೆ ಇತರೇ ದೀಪಗಳಿಗೆ ಎಣ್ಣೆ ಹಾಕಲು ಸಹಾ ಇದನ್ನು ಉಪಯೋಗಿಸಲಾಗುತ್ತದೆ. ಈ ರೀತಿ ದೀಪಗಳನ್ನು ಕರ್ನಾಟಕದ ಕರಾವಳಿ ಭಾಗದಲ್ಲಿ ಕಾಣುತ್ತೇವೆ.

೭. ಧೂಪಾರತಿ

ದೇವರ ಆರಾಧನೆಯಲ್ಲಿ ಧೂಪವನ್ನು ಹಾಕಿ ಪೂಜೆಸಲ್ಲಿಸುವುದು ಕೆಲವು ದೇವಸ್ಥಾನಗಳಲ್ಲಿ ಹಾಗೂ ಉತ್ತರ ಕರ್ನಾಟಕ ಜಿಲ್ಲೆಯಲ್ಲಿ ಮನೆಯಲ್ಲಿ ಧೂಪದಾರತಿ ಮಾಡಲಾಗುತ್ತದೆ. ಇದರಲ್ಲಿ ಧೂಪ ಮತ್ತು ದೀಪ ಎರಡೂ ಒಟ್ಟಿಗೆ ಇರುತ್ತವೆ. ಇದೇ ಕಾರಣದಿಂದ ಈ ಆರತಿಯನ್ನು ಧೂಪದೀಪ ಸೇವೆ ಎಂದು ಕರೆಯಲಾಗುತ್ತದೆ. ಇದರ ಬಟ್ಟಲು ಕರ್ಪೂರದಾತಿಯ ಬಟ್ಟಲಿಗಿಂತ ಹಿರಿದಾಗಿಯೂ ಅಗಲವಾಗಿಯೂ ಇರುತ್ತದೆ.

೮. ಕರ್ಪೂರದಾರತಿ

ಕರ್ಪೂರದಾರತಿಯನ್ನು ದೇವರಿಗೆ ಮಾಡುವುದು ಹಿಂದೂ ಧರ್ಮದ ಸಂಪ್ರದಾಯಗಳಲ್ಲಿ ಒಂದು. ಕರ್ಪೂರದಾರತಿಯನ್ನು ಪೂಜೆಗೆ ಮೊದಲು ಮತ್ತು ಪೂಜೆಯ ನಂತರ ಮಾಡಲಾಗುತ್ತದೆ. ಕರ್ಪೂರವನ್ನು ಬೆಳಗಿ ಇದರಲ್ಲಿ ಆರತಿಯನ್ನು ಮಾಡುವುದರಿಂದ ಇದಕ್ಕೆ ಕರ್ಪೂರದಾರತಿ ಎಂದು ಹೆಸರು. ಕ್ರಿ.ಶ.ಸುಮಾರು ೧೭ನೇ ಶತಮಾನದಲ್ಲಿ ನಿರ್ಮಾಣವಾದ ಕರ್ಪೂರವನ್ನು ಇಡಲು ಬಟ್ಟಲು ಸ್ವಲ್ಪ ಚಿಕ್ಕದಾಗಿದ್ದು ಇದಕ್ಕೆ ಹಿಡಿಯು ಇರುತ್ತದೆ.

ಹೀಗೆ ಆರತಿಗಳನ್ನು ನೋಡಬಹುದು. ಇವುಗಳಲ್ಲದೆ, ಏಕಾರತಿ, ತ್ರಿಕಾರಾರತಿ ಪಂಚಾರತಿ ಮಹಾರತಿಗಳು ಮುಖ್ಯವಾಗಿದ್ದು ಈ ಆರತಿಗಳು ವೈವಿಧ್ಯಪೂರ್ಣ ಹಾಗೂ ಅಷ್ಟೇ ಕಲಾ ಪೂರ್ಣವಾಗಿರುತ್ತವೆ. ಆರತಿಗಳಲ್ಲಿ ಪವಿತ್ರ ಮುದ್ರೆಯ ರಚನೆ ಒಂದು ಸಂಪ್ರದಾಯ, ಹಾಗಾಗಿಯೇ ಶಂಖಾರತಿ, ಚಕ್ರಾರತಿ, ಕೂರ್ಮಾರತಿಗಳನ್ನು ವಿವಿಧ ಸಂಪ್ರದಾಯಿಕರು ಬಳಸುತ್ತಾರೆ.

೨. ಕಾಲುದೀಪ

ಕಾಲು ದೀಪಗಳನ್ನು ದೇವಾಲಯಗಳಲ್ಲಿ ಮತ್ತು ಮನೆಗಳಲ್ಲಿ ಹೆಚ್ಚಾಗಿ ಬಳಸಲಾಗುತ್ತದೆ. ಈ ದೀಪಗಳ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಸ್ಥಳಾಂತರಿಸಬಹುದು. ಇದರ ಕಂಬವನ್ನು ಕಾಲು ಎಂದು ಗುರುತಿಸಲಾಗುತ್ತದೆ. ಇದು ವೈಜ್ಞಾನಿಕ ಜ್ಞಾನವನ್ನು ಪ್ರತಿಬಿಂಬಿಸುತ್ತದೆ. ಈ ದೀಪಗಳ ಬೆಳಕು ಹೆಚ್ಚು ಜಾಗವನ್ನು ಆವರಿಸುವುದರಿಂದ ಹೆಚ್ಚಾಗಿ ಬಳಸುತ್ತಾರೆ. ಈ ದೀಪಗಳನ್ನು ವನರಂಗದಲ್ಲಿ ಪ್ರಾಚೀನ ಕಾಲದಿಂದಲೂ ಇಡುತ್ತಿದ್ದಾರೆ. ಈ ಮೂಲಕ ನಂದಾದೀಪದ ಒಂದು ನಂಬಿಕೆ ಜನ್ಮವಾಗಿರಬಹುದು ಎಂದು ತಿಳಿದುಬರುತ್ತದೆ. ಮೊಟ್ಟಮೊದಲು ಒಂದು ಪುಟ್ಟ ಪೀಠ, ತುಸು ಎತ್ತರ ಮತ್ತು ಏಕೈಕ ದೀಪಪಾತ್ರೆಯನ್ನು ಹೊಂದಿದ್ದು ಕಾಲುದೀಪವು,ಶತಮಾನಗಳು ಕಳೆದಂತೆ ಎತ್ತರವಾಗಿ ಬೆಳೆದು ಹಲವಾರು ಅಂತಸ್ತುಗಳನ್ನು ಪಡೆದುಕೊಂಡಿದ್ದರಿಂದ ಪೀಠವನ್ನು ಬಿರಿದ ಕಮಲದ ಆಕಾರದಲ್ಲಿನ ದೀಪದ ಪಾತ್ರೆ ಕಾಲಾನಂತರದಲ್ಲಿ ಕಿರಿದಾಗಿ ತುದಿಯಲ್ಲಿ ಹಂಸ, ಕಿನ್ನರಿ ಮೊದಲಾದ ಆಕೃತಿಗಳನ್ನು ಅಳವಡಿಸಲಾಗಿದೆ (ಕಾಲುದೀಪ ಚಿತ್ರ ೨) ಕಾಣಬಹುದು. (ಕಾಲುದೀಪ ಚಿತ್ರ ೭) ಇರುವ ಕಾಲುದೀಪವು ದಕ್ಷಿಣಭಾರತದಲ್ಲಿ ಕ್ರಿ.ಶ.೧೬ನೇ ಶತಮಾನದಲ್ಲಿ ನಿರ್ಮಾಣವಾದುದು. ಈ ದೀಪದ ಕಾಲವನ್ನು ಮರದಲ್ಲಿ ನಿರ್ಮಿಸಲಾಗಿದೆ. ಮೊದಲಿಗೆ ದೀಪಕ್ಕೆ ಅಳವಡಿಸುತ್ತಿದ್ದ ಪೀಠವು ಆಯತಾಕಾರ, ಚೌಕಾಕಾರವನ್ನು ಇಲ್ಲವೇ ವೃತ್ತಾಕಾರವನ್ನು ಪಡೆದು ರಚನಾ ವಿನ್ಯಾಸದಲ್ಲಿ ಕಲಾ ಕೌಶಲ್ಯತೆಯನ್ನು ಪಡೆದಿದೆ.

ಕಾಲಾನಂತರದಲ್ಲಿ ಕಾಲು ದೀಪಗಳು ಕಂಬವನ್ನು ಹೋಲುವಂತೆ ಉತ್ತರವಾಗಿ ರಚನೆ ಮಾಡಲಾಯಿತು. ಈ ಕಂಬಗಳಿಗೆ ಅಲಂಕಾರಣಾ ಪ್ರಕಾರಗಳು ಸೇರಿಕೊಂಡುವು. ಈ ಕಾಲು ದೀಪದ ಕಂಬಗಳಿಗೆ ಗಂಟೆಯಾಕಾರದ ಪೀಠಗಳನ್ನು ಅಳವಡಿಸಲಾಯಿತು. ಇದರ ಸುತ್ತಳತೆ ಕಡಿಮೆ ಇರುತ್ತದೆ. ಇಂದು ಈ ಕಾಲು ದೀಪಗಳು ಲೋಹಗಳಲ್ಲಿ ಹೆಚ್ಚಾಗಿವೆ.

ಹಾಗೆ ಕಾಲು ದೀಪಗಳಲ್ಲಿ (ಕಾಲುದೀಪ ಚಿತ್ರ ೧೮) ತುದಿಯಲ್ಲಿ ವಿಶೇಷವಾಗಿ ರಚನೆಗೊಂಡಿದೆ. ಇದರಲ್ಲಿ ಅರ್ಧಭಾಗವು ಸ್ತ್ರೀಯನ್ನು ಹೊಂದಿದ್ದರೆ ಉಳಿದರ್ಧ ಹಂಸದಂತೆ ರಚನೆ ಇರುವುದನ್ನು ನೋಡಬಹುದು. ಇದು ಕ್ರಿ.ಶ.ಸುಮಾರು ೧೮ನೇ ಶತಮಾನದಲ್ಲಿ ದಕ್ಷಿಣ ಭಾರತದಲ್ಲಿ ನಿರ್ಮಾಣವಾದ ಮಾದರಿಯಾಗಿದೆ.

ಕೆಲವು ಸಾಲು ದೀಪಗಳನ್ನು ಗಜಲಕ್ಷ್ಮಿ ಎಂದುಕರೆಯುತ್ತಾರೆ. (ಕಾಲುದೀಪ ಚಿತ್ರ ೧೦) ಇರುವದು ದೀಪದಲ್ಲಿ ಕೆಳಗೆ ಪೀಠವಿದೆ. ಪೀಠದ ಮೇಲೆ ಆನೆಯ ವಿನ್ಯಾಸವಿದೆ. ಆನೆಯ ಬೆನ್ನ ಮೇಲೆ ಕಾಲುದೀಪದ ಕಂಭವಿದೆ. ಆನೆಯು ಈ ಕಾಲುದೀಪವನ್ನು ಬೆನ್ನ ಮೇಲೆ ಹೊತ್ತುಕೊಂಡಂತೆ ರಚನೆಮಾಡಲಾಗಿದೆ. ಇವುಗಳ ಮಧ್ಯದಲ್ಲಿ ಸ್ತ್ರೀಯ ವಿನ್ಯಾಸವಿದ್ದು ಇದರ ಮೇಲೆ ಒಂದು ದೀಪದ ಬಟ್ಟಲು ಮತ್ತು ಅದರ ಮಧ್ಯದಲ್ಲಿ ಪಕ್ಷಿಯ ಶಿಲ್ಪ ಇರುವುದನ್ನು ನೋಡಬಹುದು. ಇಂತಹ ಸಾಲುದೀಪಗಳು ಕ್ರಿ.ಶ.ಸುಮಾರು ೧೭ನೇ ಶತಮಾನದಲ್ಲಿ ಬಳಸಿದಂತೆ ಲೋಹಗಳಲ್ಲಿ ಹೆಚ್ಚು ಬಳಸಲಾಯಿತು.

(ಚಿತ್ರ ೪)ರಲ್ಲಿ ಸಾಲು ದೀಪದಲ್ಲಿ ಆನೆಯ ಶಿಲ್ಪವಿದ್ದು ಆನೆಯ ಮೇಲೆ ಪುಟ್ಟ ಕಂಭವಿದೆ. ಈ ಕಂಭದ ಮೇಲೆ ದೀಪದ ಬಟ್ಟಲು ಇರುವುದನ್ನು ನೋಡಬಹುದು. ಇದರ ಮಧ್ಯದಲ್ಲಿ ಪಕ್ಷಿಯೊಂದರ ಆಕೃತಿ ಇರುವಂತೆ ರಚಿಸಿರುವುದು ಕಾಣುತ್ತದೆ. ಈರೀತಿಯ ಸಾಲು ದೀಪಗಳು ಕ್ರಿ.ಶ.೧೮ನೇ ಶತಮಾನದಲ್ಲಿ ನಿರ್ಮಿಸಲಾಗಿದೆ. (ಚಿತ್ರ.೨೨)ರಲ್ಲಿ ಇರುವ ಸಾಲು ದೀಪದಲ್ಲಿ ಆನೆಯ ಶಿಲ್ಪವಿದ್ದು ಆನೆಯ ಮೇಲೆ ಚೌಕಾಕಾರದ ಪುಟ್ಟ ಕಂಭವಿದೆ. ಇದರ ಮೇಲೆ ಗಣಪತಿಯ ಜೊತೆಗೆ ಲಿಂಗ ಮತ್ತು ನಾಗನ ಆಕೃತಿಗಳು ಸಹ ಇರುವದನ್ನು ಕಾಣಬಹುದು. ಈ ಸಾಲು ದೀಪದಲ್ಲಿ ಇರುವ ಆನೆಯ ಸೊಂಡಿಲಿನಲ್ಲಿ ಒಂದು ದೀಪದ ಬಟ್ಟಲು ಇದೆ.

ಇದರಂತೆ ಕ್ರಿ.ಶ.೧೭ನೇ ಶತಮಾನದಲ್ಲಿ ನಿರ್ಮಿಸಿರುವುದು ತಿಳಿದು ಬರುತ್ತದೆ. ಆನೆಯ ಶಿಲ್ಪದ ಮೇಲೆ ದೀಪವನ್ನು ಇರಿಸುವ ಪದ್ಧತಿಯು ಉತ್ತರ ಭಾರತದಲ್ಲಿಯೂ ಇರುವುದನ್ನು ನೋಡಬಹುದು. (ಕಾಲುದೀಪ ಚಿತ್ರ ೫,೧೭)ರಲ್ಲಿ ಇರುವ ಸಾಲುದೀಪವು ಉತ್ತರ ಭಾರತ ಛತ್ತೀಸ್‌ಘಡ್‌ನಲ್ಲಿ ಬಳಸಲ್ಪಡುವ ಸಾಲುದೀಪದ ಮಾದರಿಗಳಲ್ಲೊಂದು. ಈ ಕಾಲು ದೀಪದಲ್ಲಿಯೂ ವೃತ್ತಾಕಾರದ ಪೀಠದ ಮೇಲೆ ಆನೆಯ ಶಿಲ್ಪವಿದೆ. ಈ ಆನೆಯ ಮೇಲೆ ಎರಡು ಪಕ್ಷಿಗಳು ಇದ್ದು ಅವು ಒಂದರ ಮೇಲೆ ಒಂದರಂತೆ ನಿಂತಿರುವ ರಚನೆಯನ್ನು ಮಾಡಲಾಗಿದೆ. ತುದಿಯಲ್ಲಿ ದೀಪವನ್ನು ಬೆಳಗಲು ಅಲಂಕಾರದ ಬಟ್ಟಲನ್ನು ಜೋಡಿಸಿರುವುದನ್ನು ಕಾಣಬಹುದಾಗಿದೆ.

ಇತ್ತೀಚೆಗೆ ರಚನಾಕಾರನ ಕೌಶಲ್ಯತೆಗೆ ತಕ್ಕಂತೆ ಲೋಹದ ದೀಪ ಕಂಬಗಳಲ್ಲಿ ಹಂತ ಹಂತವಾಗಿ ಹೊಸ ಹೊಸವಿನ್ಯಾಸವನ್ನು ಕೊಟ್ಟಿದ್ದಾನೆ. ಕಾಲುದೀಪದಲ್ಲಿ ಪುಟ್ಟ ಪುಟ್ಟ ಮನುಷ್ಯಾಕೃತಿಗಳನ್ನು ಬಳಸಿ ರಚಿಸಲಾಗುತ್ತಿದೆ.

**೩. ವೃಕ್ಷ ದೀಪ.**

ಕಾಲದೀಪದ ನಂತರ ರಚನಾಕಾರನು ವಿನ್ಯಾಸವನ್ನು ತನ್ನ ಮಧ್ಯ ಕೌಶಲ್ಯತೆಗೆ ನೀರೆರೆದು ಅದರ ಬೆಳವಣಿಗೆ ಸ್ವರೂಪವು ವೃಕ್ಷ ದೀಪಕ್ಕೆ ಅನುವುಮಾಡಿಕೊಂಡನು. ವೃಕ್ಷ ದೀಪವು ವಿಶೇಷವಾಗಿ ಲೋಹದಲ್ಲಿ ನಿರ್ಮಿಸಲಾಗಿರುತ್ತದೆ. ದೇವಾಲಯಗಳಲ್ಲಿ ಇರುವುದನ್ನು ಅಲಂಕಾರಕ್ಕಾಗಿ ಬಳಸಲಾಗುತ್ತದೆ. ಮರದಲ್ಲಿ ಕೊಂಬೆಗಳಿರುವಂತೆ ವೃಕ್ಷದೀಪದಲ್ಲೂ ರೆಂಬೆ ಕೊಂಬೆಗಳಿರುತ್ತವೆ. ಪ್ರತಿ ಕೊಂಬೆಯಲ್ಲು ದೀಪವನ್ನು ಬೆಳಗಲು ವ್ಯವಸ್ಥೆಯನ್ನು ಮಾಡಿರುತ್ತಾರೆ. ಈ ರೀತಿಯ ವೃಕ್ಷ ದೀಪವನ್ನು (ವೃಕ್ಷದೀಪ ಚಿತ್ರ ೧) ರಲ್ಲಿ ನೋಡಬಹುದಾಗಿದೆ. ಈ ವೃಕ್ಷ ದೀಪಗಳ ಮಾದರಿಗಳು ಕ್ರಿ.ಶ. ಸುಮಾರು ೧೮ನೇ ಶತಮಾನದಲ್ಲಿ ತಯಾರಾದವುಗಳಾಗಿವೆ. ಅಲಂಕಾರಿಕವಾಗಿ ಹೆಚ್ಚು ಉಪಯೋಗಿಸುವ ಈ ದೀಪವು ವಿಶೇಷ ಸಂದರ್ಭದಲ್ಲಿ ಬಳಸಲಾಗುತ್ತದೆ.

ಒಂದು ವಿಶೇಷವಾದ ದೀಪಗಳಲ್ಲಿ ಆನೆಯ ವಿನ್ಯಾಸವು ತನ್ನ ಸೊಂಡಿಲಿನಲ್ಲಿ ದೀಪಗಳನ್ನು ಎತ್ತಿ ಹಿಡಿದಂತೆ ಚಿತ್ರಿಸಲಾಗಿದೆ. ಆನೆಯ ಮೇಲೆ ಮಾವುತ ಕುಳಿತಿದ್ದಾನೆ. ಕೊಂಬೆಗಳನ್ನೆಲ್ಲ ರಥದಂತೆ ನಿರ್ಮಿಸಿ ಈ ಕೊಂಬೆಗಳ ಮೇಲೆ ನವಿಲುಗಳು ಕುಳಿತಂತೆ ಚಿತ್ರಿಸಲಾಗಿದೆ. ಮತ್ತೊಂದು ವೃಕ್ಷ ದೀಪ ಪ್ರತಿ ಹಂತದಲ್ಲಿ ಆರು ಕೊಂಬೆಗಳಿವೆ. ಅವುಗಳಲ್ಲಿ ಒಂದೊಂದು ದೀಪವನ್ನು ಇರಿಸಲು ಅವಕಾಶವನ್ನು ಮಾಡಲಾಗಿದೆ. ಇದರ ತುದಿಯಲ್ಲಿ ಕಮಲಾಕಾರದ ಬಟ್ಟಲು ಇದ್ದು, ಇದರಲ್ಲಿ ದೀಪವನ್ನು ಹಿಡಿದು ನಿಂತಿರುವ ಕಿನ್ನರಿಯ ವಿನ್ಯಾಸವಿದೆ. ನಂಜನ ಗೂಡಿನಲ್ಲಿ ನಂಜುಂಡೇಶ್ವರ ದೇವಾಲಯದಲ್ಲಿದೆ. ಇದು ಸುಮಾರು ೮ ಅಡಿ ಎತ್ತರವನ್ನು ಹೊಂದಿದೆ. ಹೀಗೆ ವೃಕ್ಷ ದೀಪಗಳಲ್ಲೂ ವೈವಿಧ್ಯಮಯವಾದ ರಚನೆಗಳು ದೊರೆಯುತ್ತವೆ. (ಚಿತ್ರ-೩)

**೪. ದೀಪದ ಮಲ್ಲಿ**

ದೀಪವನ್ನು ಹಿಡಿದು ನಿಂತ ಹೆಣ್ಣಿನ ಆಕೃತಿಯನ್ನು ಹೊಂದಿರುವ ವಿನ್ಯಾಸ ದೀಪಕ್ಕೆ ದೀಪದ ಮಲ್ಲಿ ಎನ್ನುತ್ತಾರೆ. ದಕ್ಷಿಣ ಭಾರತದಲ್ಲಿ ಬಳಕೆಯಲ್ಲಿರುವ ದೀಪ ಸ್ವರೂಪಗಳಲ್ಲಿ ದೀಪ ಲಕ್ಷ್ಮಿಯು ಒಂದು. ಈ ಸ್ತ್ರೀಯ ಆಕೃತಿಯು ತಮಿಳು ಸಾಹಿತ್ಯದಲ್ಲಿ ಕಂಡುಬರುತ್ತಿದೆ. ಭಾರತದಲ್ಲಿ ನೆಲೆಸಿದ್ದ ರೋಮನ್ನರಾದ ಯವನರು ಕ್ರಿ.ಶ. ಆರಂಭದಲ್ಲಿ ಮಾನವಾಕೃತಿಯಲ್ಲಿ ತಯಾರಿಸುತ್ತಿದ್ದ ದೀಪವನ್ನು ದೀಪದ ಲಕ್ಷ್ಮಿಯ ಕಲ್ಪನೆಗೆ ಮೂಲವಾಯಿತು, ಎಂದು ತಿಳಿದು ಬರುತ್ತಿದೆ. ಈ ವಿನ್ಯಾಸದ ಮಾದರಿಯನ್ನೇ ಬಳಸಿಕೊಂಡು ದಕ್ಷಿಣ ಭಾರತದ ಕುಶಲಕರ್ಮಿಗಳು ಈ ದೀಪದ ಮಲ್ಲಿಯ ವಿನ್ಯಾಸಕ್ಕೆ ತಮ್ಮ ಸಾಂಪ್ರದಾಯಿಕ ಶೈಲಿಯ ಕೌಶಲ್ಯದ ಮೆರುಗನ್ನು ನೀಡಿ ಅದರ ಅಂದವನ್ನು ಮತ್ತಷ್ಟು ಸೊಗಸುಗೊಳಿಸಿದರು.

ದೀಪದ ಮಲ್ಲಿಯಲ್ಲಿ ಸುಂದರ ದೇಹದ ಜೊತೆಗೆ ಅದರ ಮುಗುಳ್ನಗೆಯೊಂದಿಗೆ ಒಡವೆ ವೈಢೂರ್ಯಗಳಿಂದ ಕೂಡಿದ ಆಕೃತಿಯನ್ನು ಚಿತ್ರದಲ್ಲಿ ಕಾಣಬಹುದಾಗಿದೆ. ಹೀಗೆ ಸುಂದರವಾದ ಈ ಆಕೃತಿಯನ್ನು ನೋಡುವಾಗ ಕಲಾಕಾರನ ಕೌಶಲ್ಯದ ಸಾಮಾರ್ಥ್ಯವನ್ನು ಅಳೆಯುವುದು ಕಷ್ಟವಾಗುತ್ತಿದೆ. ಅವನು ತನ್ನ ಪರಿಸರ ಸಂಸ್ಕೃತಿಗೆ ತಕ್ಕಂತೆ ಆಕೃತಿಯ ಮುಖ, ಕೇಶ, ವಿನ್ಯಾಸ, ದೇಹದ ರಚನೆ, ವಸ್ತು ವಿನ್ಯಾಸಗಳಲ್ಲಿ ಬದಲಾವಣೆ ಮಾಡಿಕೊಂಡಿರುವುದನ್ನು ಗುರುತಿಸಬಹುದಾಗಿದೆ.

ಕೆಲವು ದೀಪದ ಮಲ್ಲಿ ಆಕೃತಿಯಲ್ಲಿ ಸ್ತ್ರೀ ಶಿಲ್ಪವು ದೀಪವನ್ನು ದಾನ ಮಾಡುತ್ತಿರುವಂತೆಯೂ ಚಿತ್ರಿಸಲ್ಪಟ್ಟಿರುತ್ತದೆ. ಜೈನರ ಕಾಲದಲ್ಲಿನ ಕೆಲವು ದೀಪಗಳಲ್ಲಿ ವಸ್ತು ಅಲಂಕಾರ ಇರುವುದನ್ನು ಕಾಣಬಹುದು. ಈ ದೀಪದಲ್ಲಿ ಒಡವೆಗಳು, ವಸ್ತ್ರದ ನಿರಿಗೆಗಳು ವಿಶೇಷವಾಗಿ ಗಮನ ಸೆಳೆಯುತ್ತವೆ. ಇಂತಹ ದೀಪದ ಮಲ್ಲಿಯನ್ನು ನೋಡಿದಾಗ ಈ ಕಲಾಕಾರ ಜೈನ ಧರ್ಮಕ್ಕೆ ಸೇರಿರಬಹುದೆಂದು ತಿಳಿಯಬಹುದಾಗಿದೆ.

ದೀಪದ ಮಲ್ಲಿಯಲ್ಲಿ ಕೂಡ ಇತರ ದೀಪಗಳಲ್ಲಿ ನಾಗರೀಕತೆ ಬದಲಾದಂತೆ ವಿನ್ಯಾಸದಲ್ಲಿ ಬದಲಾವಣೆ ಆಗಿರುವುದನ್ನು, ಶೈಲಿ, ವಸ್ತ್ರದಲ್ಲಿ ಬದಲಾಗಿರುವುದು ಕಂಡು ಬರುವುದು. ಚಾಲುಕ್ಯರ ಕಾಲದ ದೀಪದ ಮಲ್ಲಿಯು ಸರಳತೆಯನ್ನು ಹೊಂದಿದ್ದು ಮುಖ ಭಾವಗಳು ಸುಂದರವಾಗಿ ರಚಿಸಲ್ಪಟ್ಟಿವೆ. ದೀಪಲಕ್ಷ್ಮಿಯ ಒಡವೇ ವೈಢೂರ್ಯಗಳಲ್ಲೂ ಆಯಾ ಕಾಲಕ್ಕೆ ತಕ್ಕಂತೆ ಬದಲಾಗಿರುವುದು ಗಮನಿಸುವ ಅಂಶವಾಗಿದೆ. ಬಾದಾಮಿಯಲ್ಲಿ

ಕಂಠೀಹಾರವನ್ನು ಹೊಂದಿದ ದೀಪದ ಮಲ್ಲಿಯ ವಿನ್ಯಾಸವಿದೆ. ಇದೇ ಸಂದರ್ಭದಲ್ಲಿ ದುಂಡು ಮುಖದ ಭಾವವಿರುವ ದೀಪದ ಮಲ್ಲಿಯು ರಚನೆಯಾದವು. ಹಾಗೆ ಚೂಪಾದಗಲ್ಲ, ಕೋಲು ಮುಖ, ಚೂಪಾದ ಮೂಗನ್ನು ಹೊಂದಿ ವಸ್ತ್ರ ವಿನ್ಯಾಸವು ವಿಜಯನಗರ ಕಾಲದ ಶೈಲಿಯನ್ನು ಹೋಲುತ್ತದೆ.

ಕೆಲವು ದೀಪದ ಮಲ್ಲಿ ಆಕೃತಿಯಲ್ಲಿ ಸ್ತ್ರೀಯು ಒಂದು ಕೈಯಲ್ಲಿ ದೀಪವನ್ನು ಹಿಡಿದಿದ್ದು ಮತ್ತೊಂದು ಕೈಯಲ್ಲಿ ಹಿಡಿದಿರುವ ಪಾತ್ರೆಯಿಂದ ಆ ದೀಪಕ್ಕೆ ಎಣ್ಣೆಯನ್ನು ಸುರಿಯುತ್ತಿರುವಂತೆ ರಚನೆಗೊಂಡಿರುವುದನ್ನು ನೋಡಬಹುದು. (ದೀಪದ ಮಲ್ಲಿ ಚಿತ್ರ ೧) ಇರುವ ದೀಪದ ಮಲ್ಲಿಯ ಆಕೃತಿಯು ಕೆಳಗೆ ಅಥವಾ ತಳದಲ್ಲಿ ತೆಳ್ಳನೆಯ ಪೀಠವಿದ್ದು ಇದರ ಮೇಲೆ ಊರ್ಧ್ವ ಪದ್ಮದ ರಚನೆ ಇದೆ. ಹಾಗೆ ಈ ಪೀಠದ ಮೇಲೆ ವಿಶಿಷ್ಟವಾದ ಆಕೃತಿ ಇದ್ದು, ಮುಖವು ಸಿಂಹದ ಮುಖವನ್ನು ಹೋಲುತ್ತಿದ್ದರೆ ಉಳಿದ ಭಾಗವು ಪಕ್ಷಿಯಂತೆ ರಚನೆಯಾಗಿರುವುದನ್ನು ನೋಡಬಹುದು. ಈ ಶಿಲ್ಪದ ಮೇಲೆ ದೀಪವನ್ನು ಹಿಡಿದಿರುವ ಸ್ತ್ರೀಯ ಬಲ ಭುಜದ ಮೇಲೆ ಗಿಳಿಯೊಂದು ಕುಳಿತಂತೆ ಪಕ್ಷಿಯನ್ನು ರಚಿಸಲಾಗಿದೆ. ಹೀಗೆ ಅನೇಕ ವಿನ್ಯಾಸಗಳಲ್ಲಿ ನೋಡಬಹುದು.

**೫. ತೂಗುದೀಪ**

ದೇವಾಲಯದ ಮೇಲ್ಛಾವಣಿಯಿಂದ ತೂಗು ಬಿಡಲು ಇದಕ್ಕೆ ಸಹಾಯವಾಗುವಂತೆ ಸರಪಳಿಗಳನ್ನು ಹೊಂದಿರುವ ದೀಪಗಳೇ ತೂಗು ದೀಪಗಳು. ಈ ದೀಪಗಳು ಬಹುತೇಕ ಭಾರತದ ಎಲ್ಲಾ ದೇವಸ್ಥಾನಗಳಲ್ಲಿ ನೋಡಬಹುದು. ಕ್ರಿ.ಶ.ಸುಮಾರು ೯ ರಿಂದ ೧೦ನೇ ಶತಮಾನಕ್ಕೆ ಸೇರುವ ಕಂಚಿನ ತೂಗುದೀಪದಲ್ಲಿ ನೃತ್ಯ ಭಂಗಿಯಲ್ಲಿರುವ, ಪುರುಷ, ಸ್ತ್ರೀಯರ ಆಕೃತಿಗಳು ಇವೆ. ಮುಂಬೈನ ಪ್ರಿನ್ಸ್ ಆಫ್ ವೇಲ್ಸ್ ಮ್ಯೂಸಿಯಂನ ಜೋಗೇಶ್ವರಿ ಗುಹೆಯಲ್ಲಿರುವ ತೂಗು ದೀಪವನ್ನು ಚಾಲುಕ್ಯರು ಕ್ರಿ.ಶ.೧೨ನೇ ಶತಮಾನದಲ್ಲಿ ನಿರ್ಮಿಸಿದ್ದಾರೆ ಎಂದು ತಿಳಿದುಬರುತ್ತದೆ. ಈ ತೂಗು ದೀಪಗಳು ಪ್ರಾಚೀನತೆಯನ್ನು ಸಾರುವ ಹಾಗೆ ಶಾತವಾಹನರ ಕಾಲದಲ್ಲಿ ನಿರ್ಮಾಣಗೊಂಡಿರುವ ಅನೇಕ ದೀಪಗಳು ಮಹಾರಾಷ್ಟ್ರದಲ್ಲಿ (ತಿಳಿದು ಬರುತ್ತದೆ) ಸಿಕ್ಕುತ್ತವೆ.

ಚಿತ್ರ.೧, ತೂಗುದೀಪದಲ್ಲಿರಾಜಕುಮಾರನೊಬ್ಬನು ಆನೆಯ ಮೇಲೆ ಸವಾರಿ ಮಾಡುತ್ತಿದ್ದಾನೆ. ಇವನಿಗೆ ಚಾಮರವನ್ನು ಬೀಸುತ್ತಿರುವ ಹೆಣ್ಣಿನ ಆಕೃತಿ ಇದ್ದು ಇದರ ಮೇಲೆ ಸರಪಳಿಯ ಉದ್ದಕ್ಕೂ ಅಲ್ಲಲ್ಲಿ ವಾದ್ಯವನ್ನು ನುಡಿಸುತ್ತಿರುವವರು ಮತ್ತು ನರ್ತಕಿಯರ ಶಿಲ್ಪಗಳು ಇರುವುದು ಕಾಣುತ್ತೇವೆ. ಈ ದೀಪದಲ್ಲಿನ ಆನೆಯ ಟೊಳ್ಳು ದೇಹದಿಂದ ದೀಪಕ್ಕೆ ಹನಿ ಹನಿಯಾಗಿ ಎಣ್ಣೆಯು ಬೀಳುವಂತೆ ವ್ಯವಸ್ಥೆಯನ್ನು ಮಾಡಲಾಗಿದೆ. ಈ ದೀಪವನ್ನು ಐರಾವತ ದೀಪ ಎಂದು ಕರೆಯಲಾಗುತ್ತದೆ. ಐರಾವತ ಎಂದ ಕೂಡಲೆ ನಾವು ಪುರಾಣದ ಕಥೆಯನ್ನು ನೆನಪಿಸಿಕೊಳ್ಳುವಂತಾಗುತ್ತದೆ.

ಹೊಯ್ಸಳರ ಕಾಲದಲ್ಲಿಯೂ ಕಂಚಿನ ಆಕೃತಿಗಳನ್ನು ತಯಾರಿಸುತ್ತಿದ್ದರು. ಶೈವ ಸಂಪ್ರದಾಯದ ದೇವಸ್ಥಾನಗಳಲ್ಲಿ ಶಿವನ ವಾಹನವಾದ ನಂದಿಯ ಆಕೃತಿಯನ್ನು ತೂಗು ದೀಪಕ್ಕೆ ಬಳಸಿಕೊಂಡಿರುವುದನ್ನು ನೋಡಬಹುದು. ಈ ರೀತಿಯ ತೂಗುದೀಪಗಳಲ್ಲಿ ನಂದಿಯ ಆಕಾರವನ್ನು ಎಣ್ಣೆಯ ಬಟ್ಟಲಿನಂತೆ ಬಳಸಿಕೊಳ್ಳಲಾಗುತ್ತದೆ. ಇನ್ನೂ ಅನೇಕ ರಚನೆಯನ್ನು ಹೊಂದಿರುವ ವಿವಿಧ ಮಾದರಿಯ ತೂಗುದೀಪಗಳನ್ನು ನೋಡಬಹುದು. ಇವುಗಳಲ್ಲಿ

ಹಂಸ, ನವಿಲು, ನಂದಿ, ಗಜಲಕ್ಷ್ಮಿ, ಓಂ ಚಿಹ್ನೆ ಮುಂತಾದ ಹಿಂದೂ ಸಂಪ್ರದಾಯಕ್ಕೆ ಸೇರಿದಂತಹ ಇನ್ನಿತರ ಪ್ರಾಣಿ ಪಕ್ಷಿಗಳನ್ನು, ದೇವಾನುದೇವತೆಗಳನ್ನು ಪ್ರತಿಬಿಂಬಿಸುವ ಆಕೃತಿಗಳು ತೂಗುದೀಪದ ರಚನೆಯಲ್ಲಿ ಇರುತ್ತವೆ.

ಕರ್ನಾಟಕದ ಕರಾವಳಿ ಪ್ರದೇಶಗಳಲ್ಲಿ "ಮಲಬಾರ್ ವಿಳಕ್ಕು" ಎಂದು ಕರೆಯಲಾಗುವ ಕೇರಳದ ದೀಪಗಳ ಪ್ರಭಾವವನ್ನು ಹಲವಾರು ತೂಗುದೀಪಗಳಲ್ಲಿ ಕಾಣಬಹುದು. ತೂಗುದೀಪಗಳನ್ನು ಮುಖ್ಯವಾಗಿ ನಂದಾದೀಪವಾಗಿ ಬಳಸಲಾಗುತ್ತದೆ. ಹನಿ ಹನಿಯಾಗಿ ಸೊಡರಿಗೆ ಎಣ್ಣೆಯನ್ನು ಉಣಬಡಿಸುವ ಪಾತ್ರ ಅವಶ್ಯಕವಾಗಿದ್ದು, ಕಂಚುಗಾರನು ತನ್ನ ಕಲ್ಪನೆಯೆಲ್ಲವನ್ನು ಇದಕ್ಕಾಗಿ ಎರೆದು ತಯಾರಿಸಿರುವ ಉದಾಹರಣೆಗಳಿವೆ. ಶುಕದ ಆಕೃತಿಯಲ್ಲಿ ಎಣ್ಣೆ ಪಾತ್ರೆಯನ್ನು ರೂಪಿಸಿ, ಅದರ ಕೊಕ್ಕಿನಿಂದ ಸೊಡರಿಗೆ ಎಣ್ಣೆ ಹರಿಯುವ ತೂಗುದೀಪ, ಡೊಂಬರಾಟದಲ್ಲಿ ತೊಡಗಿ, ಹಿಂಭಾಗದಿಂದ ಕಾಲುಗಳೆರಡನ್ನೂ ತಲೆಗೆತಾಗಿಸಿರುವ ಹುಡುಗಿಯ ಹಸ್ತದಿಂದ ಸರಪಣಿಯ ಕೊಳವೆಯ ಮೂಲಕ ಸೊಡರಿಗೆ ಎಣ್ಣೆ ತಲುಪಿಸುವ ದೀಪಗಳಲ್ಲಿ ಕಲಾತ್ಮಕ ಪ್ರತಿಭೆ ನೋಡುವವರನ್ನು ಬೆರಗುಗೊಳಿಸುತ್ತದೆ.

(ತೂಗುದೀಪ ಚಿತ್ರ ೧೦) ರಲ್ಲಿ ಇರುವ ತೂಗುದೀಪದಲ್ಲಿ ದೀಪದ ಬಟ್ಟಲು ಇಟ್ಟು ಇದರ ಮೇಲೆ ಕುಂಭದಂತಹ ರಚನೆ ಮಾಡಿ ಮೇಲೆ ಹಂಸದ ಶಿಲ್ಪವಿದೆ. ಇದನ್ನು ತೂಗು ಬಿಡಲು ಅನುಕೂಲವಾಗುವಂತೆ ಸರಪಳಿಯನ್ನು ಅಳವಡಿಸಲಾಗಿದೆ. ಇದಲ್ಲದೇ ಇದೇ ದೀಪಗಳನ್ನು ನಂದಾ ದೀಪದ ಬಟ್ಟಲನ್ನು ಶಂಖದ ರಚನಾ ವಿನ್ಯಾಸವನ್ನು ಮಾಡಲಾಗಿದೆ. ಈ ಮಾದರಿಯ ತೂಗು ದೀಪಗಳು ಕ್ರಿ.ಶ.ಸುಮಾರು ೧೭ನೇ ಶತಮಾನಕ್ಕೆ ಸೇರುತ್ತವೆ.

ಕೆಲವು ತೂಗು ದೀಪಗಳನ್ನು ಕಮಲದೀಪ ಎಂದು ಕರೆಯಲಾಗುತ್ತದೆ. ಕಾರಣ ಈ ದೀಪಗಳು ಕಮಲದ ದಳದ ವಿನ್ಯಾಸವನ್ನು ಹೊಂದಿರುವುದರಿಂದ ಹಾಗೆ ಕರೆಯುತ್ತಾರೆ. ತೂಗುದೀಪ ಚಿತ್ರ ೮ ಈ ರೀತಿಯ ತೂಗು ದೀಪಗಳು ಕ್ರಿ.ಶ.೧೮ನೇ ಶತಮಾನದಲ್ಲಿ ಕಂಡುಬರುತ್ತವೆ. ಇದರ ರಚನೆ ಎಂದರೆ ದಳಗಳ ಸುತ್ತಲು ದೀಪಗಳನ್ನು ಬೆಳಗಲು ಮಾಡಿ, ಮಧ್ಯದಲ್ಲಿ ಪಕ್ಷಿಯ ಆಕೃತಿ ಇದೆ ಈ ಪಕ್ಷಿಗೆ ಸರಪಳಿ ಹಾಕಿ ತೂಗುಬಿಡಲು ಹಾಕಿದೆ.

ಮತ್ತೆ ಕೆಲವು ದೀಪಗಳ ಸರಪಳಿಯ ಉದ್ದಕ್ಕೂ ಅನೇಕ ಚಿತ್ರಗಳ ಅಲಂಕಾರಗಳನ್ನು ಬಳಸಿ ದೀಪಕ್ಕೆ ವಿನ್ಯಾಸ ಕೊಡುತ್ತಾರೆ. ಹೀಗೆ ನಾವು ತೂಗು ದೀಪಗಳ ವಿನ್ಯಾಸಗಳನ್ನು ಅನೇಕ ರೀತಿಯಲ್ಲಿ ನೋಡಬಹುದಾಗಿದೆ.

**೬. ನಂದಾದೀಪ**

ನಾವು ಪ್ರತೀ ದಿನ ನಮ್ಮ ಮನೆಯಲ್ಲಿ ದೇವರ ಎದುರು ನಂದಾ ದೀಪಗಳನ್ನು ಹಚ್ಚುತ್ತೇವೆ. ಆದರೆ ಈ ಹಿಂದೆ ಮನೆಗಳಲ್ಲೇ ಪ್ರತೀ ದಿನವೂ ಯಜ್ಞ, ಹೋಮಗಳು ನಡೆಯುತ್ತಿದ್ದರಿಂದ ನಿರಂತರವಾಗಿ ಉರಿಯುತ್ತಿರುವ ಯಜ್ಞ ಕುಂಡಗಳಿರುತ್ತಿದ್ದವು. ಯಜ್ಞ ಕುಂಡದ ಸಂಕೇತವಾಗಿ ಅದರ ಬದಲು ಎಂದೂ ಆರದ ನಂದಾ ದೀಪವನ್ನು ಬೆಳಗುವ ಪರಿಪಾಠವಾಯಿತು.[೭]

ನಮಗೆ ನಂದಾದೀಪದ ಸ್ವರೂಪ ದೇವರನ್ನು ಮೂರ್ತೀಕರಿಸಿ ರಚಿಸುವುದಾಗಿದೆ. ನಂದಾ ದೀಪದಲ್ಲಿ ವಿಶೇಷವಾದ ದೀಪ ಎಂದರೆ ಗಜಲಕ್ಷ್ಮಿ ದೀಪ ನಂದಾದೀಪ ಚಿತ್ರ ೯. ಈ ದೀಪದಲ್ಲಿ ದೊಡ್ಡ ಬಟ್ಟಲಿದ್ದು ದೀಪದ ಹಿಂದೆ ಗಜ ಲಕ್ಷ್ಮಿಯ ಆಕೃತಿ ಇರುವುದನ್ನು ಕಾಣಬಹುದು. ಗಜಲಕ್ಷ್ಮಿಯ ಎರಡು ಬದಿಗಳಲ್ಲಿ ಆನೆಯ ಆಕೃತಿ, ಇದ್ದು

ಅವುಗಳು ಗಜಲಕ್ಷ್ಮಿಗೆ ನಮಸ್ಕರಿಸುವಂತಿದೆ. ಇಲ್ಲಿ ಉಬ್ಬು ಶಿಲ್ಪದಲ್ಲಿ ರಚಿಸಿರುವಂತೆ ಕಾಣುತ್ತದೆ. ಗಜಲಕ್ಷ್ಮಿಯ ಸುತ್ತಲೂ ಪ್ರಭಾವಳಿಯಂತೆ ರಚನೆ ಇಟ್ಟು ಇದರ ಮಧ್ಯದಲ್ಲಿ ಕೀರ್ತಿ ಮುಖದ ಶಿಲ್ಪ ರಚನೆಯು ಇದೆ. ನಂದಾ ದೀಪ ಎಂದರೆ ಎಂದೂ ನಂದದ ದೀಪ ಅಥವಾ ಆರದ ದೀಪ ಎಂದರ್ಥ. ಒಮ್ಮೆ ಹತ್ತಿಸಿದ ದೀಪವು ಸೂರ್ಯ ಚಂದ್ರರಿರುವವರೆಗೂ ಬೆಳಗುತ್ತಲೇ ಇರಬೇಕೆಂಬ ಉದ್ದೇಶದಿಂದ ನಂದಾದೀಪವನ್ನು ಬೆಳಗುತ್ತಲೇ ಇರುತ್ತದೆ. ನಂದಾ ದೀಪವನ್ನು ಹರಕೆಯ ದೀಪ ಎಂದು ಹೇಳುತ್ತೇವೆ. ನಂದಾ ದೀಪಕ್ಕೆ ತುಪ್ಪವನ್ನು ಅಥವಾ ಎಣ್ಣೆಯನ್ನೋ ದಾನಮಾಡುವ ಹರಕೆ ಹೊತ್ತಿರುತ್ತಾರೆ. ಅದರಂತೆ ಕಾರ್ಯ ಸಾಧನೆಯಾದ ಪಕ್ಷದಲ್ಲಿ ತಾವು ಅಂದುಕೊಂಡಂತೆ ದಾನವನ್ನು ಮಾಡುವುದು ಪದ್ಧತಿಯಾಗಿದೆ.

ಪ್ರಾಚೀನ ಇತಿಹಾಸದಲ್ಲಿ ನಂದಾ ದೀಪಕ್ಕೆ ದಾನವಾಗಿ ನೀಡಿದಂತಹ ರಾಜಮಹಾರಾಜನನ್ನು ಕುರಿತು ಶಾಸನಗಳು ದೊರೆಯುತ್ತವೆ. ಸೂರ್ಯೋದಯದಿಂದ ಸೂರ್ಯೋದಯದವರೆಗೆ ಸತತವಾಗಿ ಗರ್ಭಗುಡಿಯಲ್ಲಿ ನಂದದೆ ಬೆಳಗುವ ನಂದಾ ದೀಪವು ದೇವರ ಸನ್ನಿಧಾನದಲ್ಲಿ ಏಕಾಂಗಿಯಾಗಿ ಪರಮಾನಂದವನ್ನು ಅನುಭವಿಸಬೇಕೆಂಬ ಭಕ್ತನ ಉತ್ಕಟ ಹಂಬಲದ ಪ್ರತೀಕವಾಗಿದೆ ಎಂದು ಹೇಳಲಾಗಿದೆ.

**೭. ತೋರಣ ದೀಪಗಳು**

ದ್ವಾರದ ಚೌಕಟ್ಟಿನ ಮೇಲಿನ ಭಾಗಕ್ಕೆ ತೋರಣ ಎಂದು ಕರೆಯುತ್ತಾರೆ. ಈ ತೋರಣದಲ್ಲಿ ಸಾಲಾಗಿ ಇಡುವ ದೀಪಗಳನ್ನು ತೋರಣ ದೀಪಗಳು ಎಂದು ಕರೆಯುತ್ತಾರೆ. ತೋರಣ ದೀಪಗಳನ್ನು ವಿಶೇಷ ಸಂದರ್ಭದಲ್ಲಿ ಬಳಸುತ್ತಾರೆ. ಇವುಗಳು ಹಣತೆಯ ವಿನ್ಯಾಸದಲ್ಲಿ ಇರುತ್ತವೆ. ಕೆಲವು ದೇವಸ್ಥಾನಗಳಲ್ಲಿ ಮಣ್ಣಿನ ಹಣತೆಗಳಿಂದ ಅಥವಾ ಕಂಚಿನಿಂದ ತಯಾರಿಸಿ ಬೆಳಗಿಸುತ್ತಾರೆ. ಅಲಂಕಾರಕ್ಕೆ ಪ್ರಾಶಸ್ತ್ಯಕೊಟ್ಟು ಈ ಹಣತೆಗಳನ್ನು ವಿನ್ಯಾಸಗೊಳಿಸುತ್ತಾರೆ.

**೮. ಸಾಲು ದೀಪಗಳು**

ಸಾಲು ದೀಪಗಳಲ್ಲಿ ದೀಪಗಳನ್ನು ಸಾಲಾಗಿ ಜೋಡಿಸಿ ಬೆಳಕನ್ನು ಪಡೆಯುವುದಾಗಿದೆ. ಸಾಲು ದೀಪಗಳನ್ನು ಗರ್ಭಗುಡಿಯ ಗೋಡೆಯ ನೇರಕ್ಕೆ ಅಳವಡಿಸಿರುತ್ತದೆ. ಇಲ್ಲವೇ ಹೊರಗೆ ಸಾಲಾಗಿ ಜೋಡಿಸಲಾಗುತ್ತದೆ. ಈ ದೀಪವನ್ನು ವಿಶೇಷ ಸಂದರ್ಭಗಳಲ್ಲಿ ಬೆಳಗಿಸುತ್ತಾರೆ. ಹಾಗೆ ಹರಕೆಯ ದೀಪಗಳಾಗಿ ಬಳಸುತ್ತಾರೆ. ಈ ದೀಪಗಳನ್ನು ನಿಂಬೆ ಹಣ್ಣಿನಲ್ಲೂ ಬೆಳಗುತ್ತಾರೆ.

**೯. ದೀವಟಿಗೆಗಳು**

ಭಾರತೀಯರ ಸಂಸ್ಕೃತಿಯಲ್ಲಿ ಕೆಲವು ಆಚರಣೆಗಳು ಕೇವಲ ಧಾರ್ಮಿಕ ಹಿನ್ನೆಲೆಯಲ್ಲಿಯೇ ರೂಪುಗೊಂಡಿಲ್ಲ. ಅಲ್ಲಿ ಸಾಮಾಜಿಕ ಕಳಕಳಿಯು ಇತ್ತು. ಆ ಕಾರಣದಿಂದಾಗಿ ದೇವಾಲಯಗಳು ಅಂದು ಸಾಮೂಹಿಕವಾದ ಒಂದು ಸ್ಥಳವಾಗಿ ನೆಲೆಸಿದ್ದವು. ಅಲ್ಲಿ ಸಾಮೂಹಿಕವಾಗಿ ಒಂದು ಊರಿನ/ಗ್ರಾಮಸ್ಥರು ಸೇರುವಂತೆ ಮಾಡಿಕೊಂಡಿದ್ದರು. ಈ ಓಸ್ನೆಯಲ್ಲಿ ಬೆಳಕು ಹೆಚ್ಚಾಗಿ ಬೇಕಾಗಿದ್ದರಿಂದ ಕಂಬಗಳಿಗೆ ಒರಗಿಸಿ ದೀವಟಿಗೆಗಳನ್ನು ಹಚ್ಚುತ್ತಿದ್ದರು. ಹಾಗೆ

ಹಿಂದಿನ ಕಾಲದಲ್ಲಿ ರಾಜ ಮಹಾರಾಜರು ಆಗಮಿಸುವಾಗ ಅವರಿಗೆ ದಾರಿ ದೀಪವನ್ನಾಗಿ ದೀವಟಿಗೆಗಳನ್ನು ಹಿಡಿದು ಉಪಯೋಗಿಸುತ್ತಿದ್ದರು. ಇದನ್ನು ದೊಂದಿ, ಪಂಜು ಎಂದು ಸಹ ಕರೆಯಲಾಗುತ್ತದೆ. ಮೊದಲು ಮರದ ಕೋಲಿಗೆ ಬಟ್ಟೆಯನ್ನು ಸುತ್ತಿ ಅದನ್ನು ಎಣ್ಣೆ ಅಥವಾ ತುಪ್ಪದಲ್ಲಿ ಅದ್ದಿ ತೆಗೆದು ಬೆಂಕಿಹಚ್ಚಿ ಬೆಳಕಿಗಾಗಿ ಉಪಯೋಗಿಸುತ್ತಿದ್ದರು. ಇದು ಬಹಳ ಸಮಯ ಉರಿಯುತ್ತಿತ್ತು.

ಕಾಲ ಕ್ರಮೇಣ ಮರದ ನೀಳ ಕೋಲಿಗೆ ಬದಲಾಗಿ ಕಲಾತ್ಮಕವಾದ ಮರದ ಕೆತ್ತನೆಯನ್ನು ಹೊಂದಿದ ದೀವಟಿಗೆಗಳು ಪ್ರಚಲಿತಕ್ಕೆ ಬಂದವು. ದೀವಟಿಗೆಯಲ್ಲಿ ವಿಶೇಷವಾದದ್ದು ಎಂದರೆ ಪಂಚದೀವಟಿಗೆ. ಇದಕ್ಕೆ ತ್ರಿಶೂಲದ ರೀತಿ ಐದು ರೀತಿ ಶಿಖೆಗಳಿರುತ್ತವೆ. ದೇವರ ಮೆರಣಿಗೆಯನ್ನು ಮಾಡುವಾಗಲೂ ದೀವಟಿಗೆಗಳನ್ನು ಬಳಸಲಾಗುತ್ತದೆ. ಈ ಮೆರವಣಿಗೆಯ ದೇವಾಲಯದ ಆವರಣ ಊರಿನ ಪ್ರಮುಖ ರಸ್ತೆಗಳಲ್ಲಿ ನಡೆಯುತ್ತದೆ. ಇಲ್ಲಿ ಬಳಸುವವು ಹೆಚ್ಚಾಗಿ ಮರದ್ದಾಗಿವೆ. ಹಾಗೆ ಪಂಜಿನ ತುದಿಯಲ್ಲಿ ಬೆಂಕಿಯನ್ನು ಇಡಲು ಬಟ್ಟಲಿನ ಆಕಾರದ ರಚನೆ ಇದ್ದು. ಇರುವ ಪಂಜಿನ ಮಾದರಿಗಳನ್ನು ಹೆಚ್ಚಾಗಿ ಲೋಹದಲ್ಲಿ ತಯಾರಿಸಲಾಗಿರುತ್ತದೆ. ಈ ಪಂಜನ್ನು ಉತ್ಸವಗಳ ಸಂದರ್ಭಗಳಲ್ಲಿ ಬಳಸುತ್ತಾರೆ.

ಹೀಗೆ ನಾವು ಹಣತೆಯ ರಚನಾ ವಿನ್ಯಾಸದಲ್ಲಿ ಮಾರ್ಪಾಡಾಗಿರುವುದನ್ನು ಕಾಣಬಹುದು. ಹಾಗಾಗಿಯೇ ಜನಪದರ ಹಣತೆಗೆ ಇಷ್ಟೊಂದು ಮಹತ್ವ ಲಭಿಸಿದೆ. ಇದಲ್ಲದೆ ನಾವು ಪ್ರತಿಯೊಂದು ಧಾರ್ಮಿಕ ಸಂದರ್ಭಗಳಲ್ಲಿ ದೀಪ ಬೆಳಗಿಸುತ್ತೇವೆ. ಹಿಂದೂಗಳಿಗೆ ದೀಪಗಳಿಗೆ ಸಂಬಂಧಿಸಿದಂತೆ ಒಂದು ಮಾಸವೇ ಇರುವುದನ್ನು ಅದನ್ನು ಕಾರ್ತಿಕ ಮಾಸವೆಂದು ಗುರುತಿಸಲಾಗುತ್ತದೆ. ಹಾಗೆ ಆಕಾಶದೀಪ, ಗೂಡು ದೀಪಗಳನ್ನು ನೋಡಬಹುದು. ಆಶಾಡ ಮಾಸದ ಅಮಾವಾಸ್ಯೆಯಂದು ವರ್ಷ ಪೂರ್ತಿ ಬೆಳಗಿಸಿದ್ದ ದೀಪಗಳಿಗೆ ದೀಪವನ್ನು ಬೆಳಗುವ ಮೂಲಕ ಆರತಿ ಮಾಡುವ ಮೂಲಕ ಗೌರವ ಸೂಚಿಸುತ್ತಾರೆ. ಶ್ರಾವಣ ಮಾಸದಲ್ಲಿ ಹಿಟ್ಟಿನ, ಅಥವಾ ನಿಂಬೆ ಹಣ್ಣಿ ದೀಪಗಳನ್ನು ಮಾಡುತ್ತಾರೆ. ಹಾಗೆ ಎಳ್ಳಿನ ದೀಪವನ್ನು ಮಾಡಿ ಆರತಿ ಮಾಡುತ್ತಾರೆ.

ಧಾರ್ಮಿಕ ಸಂದರ್ಭದಲ್ಲೇ ಹೆಚ್ಚು ಉಪಯುಕ್ತವಾಗುವ ಹಣತೆ, ಮನುಷ್ಯನ ಹುಟ್ಟಿನಿಂದ ಹಿಡಿದು ಸಾವಿನ ನಂತರದ ಆಚೆಗೂ ದೀಪಗಳನ್ನು ಬೆಳಗಿಸುವ ಪದ್ದತಿ ಹಿಂದೂ ಧರ್ಮದಲ್ಲಿ ಅನಾದಿ ಕಾಲದಿಂದಲೂ ಸಂಪ್ರದಾಯ ಬದ್ಧ ಆಚರಣೆಯಾಗಿ ಮೂಡಿಬಂದಿರುವುದನ್ನು ಇಂದಿಗೂ ಕಾಣುತ್ತಿದ್ದೇವೆ. ಹಾಗೆ ಸಾಕ್ಷೀ ದೀಪ ಎಂಬ ನಂಬಿಕೆ ಇತ್ತು. ಇದು ದೇವರ ಮುಂದಿರಿಸಿ ವ್ಯಕ್ತಿಯಿಂದ ಸತ್ಯವನ್ನು ಹೇಳಿಸುವ ಒಂದು ಪದ್ದತಿಯಾಗಿದೆ. ಹೀಗೆ ಈ ಸತ್ಯವನ್ನು ದೇವರ ಮುಂದೆ ಸಾಕ್ಷಿ ದೀಪದ ಮೇಲೆ ಕೈಯಿರಿಸಿ ಹೇಳಿಸುತ್ತಿದ್ದರಂತೆ. ಇಂದಿಗೂ ಕೆಲವು ಪ್ರದೇಶಗಳಲ್ಲಿ ಈ ಪದ್ದತಿ ಕಾಣಬಹುದಾಗಿದೆ. ಹಾಗೆ ಹಿಂದೂಗಳಲ್ಲಿ ದೀಪೋತ್ಸವ, ದೀಪಾರಾಧನೆ, ಕೃತಿ ಕೋತ್ಸವ, ಕಾರ್ತಿಕ ದೀಪೋತ್ಸವ, ಮುಂತಾದವು ಆಚರಣೆಗೆ ಬಂದವು.

ದೀಪದಾನ ಎನ್ನುವುದು ಭಾರತೀಯರಿಗೆ ಬೇರೂರಿದ ಪದ್ದತಿಯಾಗಿದೆ. ದಕ್ಷಿಣ ಭಾರತದಲ್ಲಿ ಸುಮಾರು ೧೬ ವಿಧದ ದೀಪದಾನಗಳನ್ನು ಮಾಡಲಾಗುತ್ತದೆ. ಜೊತೆಗೆ ಎಣ್ಣೆ, ತುಪ್ಪ, ದಾನವನ್ನು ಮಾಡುತ್ತಾರೆ. ಆದಿವಾಸಿಗಳಲ್ಲಿಯೂ ದೀಪಾರಾಧನೆ ಇರುವುದು ಕಂಡುಬರುತ್ತದೆ. ಆದಿವಾಸಿ ತಾಯಂದಿರು ಪೂಜಾರಾಧನೆಯಲ್ಲಿ

ದೀಪವನ್ನು ಬೆಳಗಿಸುತ್ತಾರೆ. ಆದರೆ ದೀಪ ಮಣ್ಣಿನದಲ್ಲ ಕಬ್ಬಿಣದಿಂದ ಮಾಡಲಾಗಿರುತ್ತದೆ. ಇವರು ಬಳಸುವ ದೀಪಗಳನ್ನು ನವಿಲು, ಕುದುರೆ ಅಥವಾ ಆನೆಯಕಾರದ ಆಕೃತಿಗಳನ್ನು ಮಾಡಿಕೊಂಡು ಉಪಯೋಗಿಸುತ್ತಾರೆ.

ದೀಪಕ್ಕೆ ಎಲ್ಲಾ ಎಣ್ಣೆಗಳು ಶ್ರೇಷ್ಠಗಳಲ್ಲ. ಅಲ್ಲಿ ಬಳಸುವ ಎಣ್ಣೆಗಳು ಒಂದೊಂದು ಅರ್ಥಗಳಿಂದ ಕೂಡಿವೆ. ಹರಳೆಣ್ಣೆಯನ್ನು ಸತ್ತಾಗ ಬಳಸುತ್ತಾರೆ. ತುಪ್ಪವನ್ನು ಶುಭಕಾರ್ಯಕ್ಕೆ ಬಳಸುತ್ತಾರೆ. ಇಲ್ಲದಿದ್ದರೆ ಸಾಸಿವೆ ಎಣ್ಣೆ ಹಾಕುತ್ತಾರೆ. ದೀಪದ ಎಣ್ಣೆ ಎಂದೇ ಸಿಗುತ್ತದೆ. ಹಾಗೆ ಕೆಲವರು ಮೂರು ಎಣ್ಣೆಯನ್ನು ಬೆರೆಸಿ ದೀಪ ಉರಿಸುತ್ತಾರೆ. (ಹರಳೆಣ್ಣೆ, ಕೊಬ್ಬರಿ, ಶೇಂಗಾ) ''ಡಿ.ಜಿ. ಕೇಲ್ಕರ್ ಅವರು ತಮ್ಮ ಲ್ಯಾಂಪ್ಸ್ ಆಫ್ ಇಂಡಿಯಾ ಕೃತಿಯಲ್ಲಿ ಭಾರತದ ದೀಪಗಳ ಶೈಲಿಗಳನ್ನು ಐದು ಪ್ರಮುಖ ಸಂಪ್ರದಾಯಕ್ಕೆ ಅನುಗುಣವಾಗಿ ನಿರ್ಮಿಸಲಾಗಿದೆ ಎಂದು ಹೇಳುತ್ತಾರೆ. ಅವುಗಳೆಂದರೆ ಶೈವ, ವೈಷ್ಣವ, ಗಣಪತಾಯ, ಸೌರ ಮತ್ತು ಶಾಕ್ತ ಎಂದು ಹೆಸರಿಸುತ್ತಾರೆ''.

ಶೈವ ಸಂಪ್ರದಾಯಗಳಲ್ಲಿ ನಂದಿ, ನಾಗ ಮತ್ತು ಕೆಲವು ಕಡೆ ಕೀರ್ತಿ ಮುಖಗಳನ್ನು ಬಳಸಿದರೆ ವೈಷ್ಣವ ಧರ್ಮದಲ್ಲಿ ವಿಷ್ಣುವಿನ ಆಯುಧ, ಪರಿಗಣಿಸಿ ಅಥವಾ ಅವುಗಳ ಸಂಕೇತಗಳನ್ನು ಇಟ್ಟುಕೊಂಡು ರಚನೆ ಮಾಡಲಾಗಿದೆ. ಹಾಗೆ ಲಕ್ಷ್ಮಿಯ ಹಿನ್ನೆಲೆಯಲ್ಲಿ ಗಜಲಕ್ಷ್ಮಿ ದೀಪ ಬಂದಿದೆ. ಗಣತಾಯ ಸಂಪ್ರದಾಯದ ದೀಪಗಳು ಆನೆಯ ಸಂಕೇತವನ್ನು ಉಳ್ಳದ್ದು, ಜೊತೆಗೆ ಸರ್ಪ, ಶಿವಲಿಂಗ, ಸಿದ್ಧಿ-ಬುದ್ಧಿಯರ ಆಕೃತಿ ಮೂಷಿಕನ ವಿನ್ಯಾಸವನ್ನು ಕೊಟ್ಟು ಬೆಳಗುತ್ತಾರೆ. ಸೌರ ಸಂಪ್ರದಾಯದವರಿಗೆ-ಸೂರ್ಯನೇ ಪ್ರಮುಖ ದೇವರಾಗಿರುವುದರಿಂದ ಒರಿಸ್ಸಾದ ಕೋನಾರ್ಕ್ ಸೂರ್ಯ ದೇವಾಲಯದಲ್ಲಿ ವಿಜೃಂಭಣೆಯಾಗಿ ಆಚರಿಸುತ್ತಾರೆ. ಭಾರತದಲ್ಲಿ ಆರತಿಯನ್ನು ಬೆಳಗುವ ಸಂಪ್ರದಾಯ ಹೆಚ್ಚು ಉತ್ತರ ಭಾರತದಲ್ಲಿ ಸಿಗುತ್ತದೆ. ಇವರು ಆರತಿಯನ್ನು ಇಳಿಸುವುದು ಎಂದು ಕರೆಯುತ್ತಾರೆ.

ಹೀಗೆ ಪರಮೋಚ್ಚ ಭಾವನೆಗಳನ್ನು ಹೊಂದಿರುವ ದೀಪವು ಆರಾಧನೆಗೆ ಅತ್ಯಂತ ಪೂರಕವಾದ ಸಾಧನವಾಗಿ, ದೇವಾಲಯಗಳಲ್ಲಿ, ಮಠಗಳಲ್ಲಿ, ಮನೆಗಳಲ್ಲಿ ಮತ್ತು ಇತರ ಪೂಜಾಸ್ಥಿತಿಗಳಲ್ಲಿ ದೇದೀಪ್ಯಮಾನವಾಗಿ ಕಂಗೊಳಿಸುತ್ತದೆ. ಶ್ರೀ.ಡಿ.ಜಿ. ಕೇಲ್ಕರ್ ಅವರು ತಮ್ಮ ಲ್ಯಾಂಪ್ ಆಫ್ ಇಂಡಿಯಾ ಪುಸ್ತಕದಲ್ಲಿ ಹೇಳಿರುವಂತೆ ''ದೀಪ ಜ್ವಾಲೆಯನ್ನು ಪರಮಾತ್ಮನಿಗೆ ಹೋಲಿಸಬಹುದು. ಜೀವನವು ದೀಪಜ್ಯೋತಿಯ ತೆರದಲ್ಲಿ ಇತರರ ಬಾಳಿನಲ್ಲಿ ಬೆಳಕನ್ನು ಮೂಡಿಸಲು ಯತ್ನಿಸಬೇಕು. ಒಂದು ಪುಟ್ಟ ದೀಪದಂತೆ ತನಗಾಗಿಯೇ ಬಾಳುವುದು ತಾಮಸ ಧರ್ಮ. ದೀಪ ಮಾಲೆಯಂತೆ ಇತರರಿಗಾಗಿ ಬಾಳುವುದು ರಾಜ ಧರ್ಮವಾಗಿರುತ್ತದೆ. ಮತ್ತು ನಮ್ಮನ್ನೆಲ್ಲಾ ಆಳುವ ವಿರಾಟ ಶಕ್ತಿಯನ್ನು ಧ್ಯಾನಿಸುವುದು ಸಾತ್ವಿಕ ಧರ್ಮವಾಗಿರುತ್ತದೆ. ನಮ್ಮ ಪುರಾತನ ಸೂತ್ರಗಳು ನಾನಾ ವಿಧದ ದೀಪಗಳ ಮೂಲಕ ಮಾನವ ಜೀವನದ ಪ್ರತಿ ಘಟ್ಟ ಮತ್ತು ಪ್ರತಿ ತಿರುವಿನಲ್ಲೂ ಸಾಂಕೇತಿಕ ಸಾದೃಶ್ಯತೆಯನ್ನು ಕಲ್ಪಿಸಿವೆ. ಈ ರೀತಿ ದೀಪವು ಭಾರತೀಯ ಉತ್ಕಾಂಕ್ಷೆಗಳ ಪ್ರತೀಕವಾಗಿದೆ'' ಎಂದು ವಿವರಿಸುತ್ತಾರೆ.

**೨.೩ ಹಣತೆಯ ಮಾಧ್ಯಮಗಳು**

ಇದುವರೆಗೂ ಹಣತೆಯ ಬಗ್ಗೆ ಒಂದಿಷ್ಟು ಮಾಹಿತಿಯನ್ನು ಕಲೆ ಹಾಕಿದರೂ ಹಣತೆಯು ಹೇಗೆ ಕಾರ್ಯನಿರ್ವಹಿಸುತ್ತದೆ ಎಂಬುದರ ಬಗ್ಗೆ ಮಾತ್ರ ತಿಳಿದ್ದೇವೆ. ಆದರೆ ಮನುಷ್ಯ ಹಣತೆಯನ್ನು ಹೇಗೆ ರೂಪಿಸಿಕೊಂಡ

**ಅಡಿಟಿಪ್ಪಣಿ**

೧. ಎಂ.ವಿ. ಶರ್ಮಾ ತದ್ದಲಸೆ - 'ಈ ದೀಪ ಬರಿಯ ಬೆಳಕಲ್ಲ'.
(ಕರ್ಮವೀರ ದೀಪಾವಳಿ ವಿಶೇಷಾಂಕ ೨೦೦೬) ಪುಟ - ೨೦೩

೨. (ಸಂ) ಡಾ ವೀರಣ್ಣ ದಂಡೆ - 'ದೀಪ - ಸಂಸ್ಕೃತಿ'
(ಲೇ - ಕಂಬಳಿ ಆದವಾನಿ) ಪುಟ - ೨೧೭

೩. ಕನ್ನಡ ವಿಷಯ ವಿಶ್ವಕೋಶ 'ಜಾನಪದ' - 'ದೀಪ ಸಂಸ್ಕೃತಿ' ಮೈಸೂರು ವಿಶ್ವವಿದ್ಯಾಲಯದ ಪ್ರಕಟಣೆ
(ಲೇ - ನಾಯಕ್ ಎನ್.ಆರ್. ಪ್ರಾಂಶುಪಾಲರು) ಪುಟ - ೨೪೫ ರಿಂದ ೨೪೮

೪. ವಚನ ಪರಿಭಾಷೆ (ಸಂ)

೫. ಕನ್ನಡ ವಿಷಯ ವಿಶ್ವಕೋಶ 'ಜಾನಪದ' - 'ದೀಪ ಸಂಸ್ಕೃತಿ' ಮೈಸೂರು ವಿಶ್ವವಿದ್ಯಾಲಯದ ಪ್ರಕಟಣೆ
(ಲೇ - ನಾಯಕ್ ಎನ್.ಆರ್. ಪ್ರಾಂಶುಪಾಲರು) ಪುಟ - ೨೪೫

೬. ಕರಕುಶಲ ಕಲೆಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.
(ಲೇ ಡಾ. ಎಸ್.ಸಿ. ಪಾಟೀಲ್) ಪುಟ -

೭. ಡಾ. ಗೀತಾಂಜಲಿ - 'ದೀಪಸ್ತಂಭಗಳು' ಪಿಹೆಚ್.ಡಿ ಪ್ರಬಂಧ ಉದ್ಧೃತ ಗ್ರಂಥ ಪುಟ

೮. ಎಸ್. ಕೆ. ಹರಿಹರೇಶ್ವರ 'ಅಗ್ನಿ, ಲಕ್ಷ್ಮೀ, ಶುಕ್ರ ಮತ್ತು ದೀಪ' (ಮಲ್ಲಾರ ಮಾಸ ಪತ್ರಿಕೆ ಮೇ ೨೦೦೫)
ಪುಟ ೧೬

೯. ಛಾಯಾಚಿತ್ರಗಳ ಸಂಗ್ರಹ.



## ಅಧ್ಯಾಯ-೩

# ಜನಪದ ಸಾಹಿತ್ಯದಲ್ಲಿ ಹಣತೆ

ಜನಪದ ಎನ್ನುವುದು ಒಂದು ಸಂಸ್ಕೃತಿ ಈ ಸಂಸ್ಕೃತಿಯು ಒಂದು ಜನ ಸಮುದಾಯದ ಹಾಡು, ಒಗಟು, ಗಾದೆ, ಕಥೆ, ಆಟ, ಸಂಪ್ರದಾಯ, ಆಚರಣೆ, ವಿಧಿ-ನಿಷೇದ ಮುಂತಾದ ಪರಿಕರಗಳ ಸಮಾವೇಶದಿಂದ ಆಗಿರುತ್ತದೆ. ಇದು ಒಂದು ಗುಂಪಿನ ಕ್ರಿಯೆ ಮತ್ತು ಆಲೋಚನೆಯ ವಿಶಿಷ್ಟ ಜೀವನ ವಿಧಾನವಾಗಿದೆ. ಇದರಲ್ಲಿ ಸಾಂಸ್ಕೃತಿಕವಾಗಿ ತನ್ನದೇ ಆದ ಪರಿವಲಯವನ್ನು ರೂಪಿಸಿಕೊಂಡು ಲಿಖಿತವಾದ ದಾಖಲೆಗೆ ಒಳಪಡಿರುತ್ತದೆ.

ಪ್ರಸ್ತುತ ಈ ಪ್ರಬಂಧದಲ್ಲಿ ಗುರುತಿಸುತ್ತಿರುವ ಹಾಗೆ ಜನಪದರು ಮೂಲವಾಗಿ ಮಣ್ಣಿನ ಮಕ್ಕಳು. ಅವರು ಈ ಮಣ್ಣನ್ನೇ ನಂಬಿ ತಮ್ಮ ಬದುಕನ್ನು ರೂಪಿಸಿಕೊಂಡವರು. ಈ ಬದುಕಿಗೆ ತಮ್ಮ ಅನುಭವದಿಂದಲೇ ರಚನಾ ವಿನ್ಯಾಸವನ್ನು ಕಲ್ಪಿಸಿಕೊಂಡವರು ಅಥವಾ ಪರಿಭಾವಿಸಿಕೊಂಡವರು. ದುಡಿಮೆ ಅಥವಾ ಶ್ರಮ ಇವರ ಪ್ರತ್ಯಕ್ಷ ಧರ್ಮ. ಅನುಭವ ಇವರ ದರ್ಶನ. ತಮ್ಮ ಅನುಭವಗಳಲ್ಲಿ ಒಂದೆಳೆಯಷ್ಟು ಪ್ರಾಮಾಣಿಕತನವಿಲ್ಲದಿದ್ದರೆ ಅದಕ್ಕೆ ಮಾನ್ಯತೆಯನ್ನು ಎಂದಿಗೂ ನೀಡರು. ಹಾಗಾಗಿ ಈ ಪರಂಪರೆಗೆ ಅನುಭವವೇ ಮುಖ್ಯ ಜೀವಾಳ.

ಈ ಹಿನ್ನೆಲೆಯನ್ನು ಆಧಾರವಾಗಿಟ್ಟುಕೊಂಡು ಜನಪದಕ್ಕೆ ಸ್ಥೂಲವಾಗಿ ಒಂದು ಜನಾಂಗ ಎನ್ನುವ ಅರ್ಥ ನೀಡಿದರೂ, ಈ ಜನಾಂಗ ಏಕ ಶಿಲೆಯಿಂದಾದ ಆಕೃತಿಯಲ್ಲ. ಇದರ ಒಳಾಂಗಣದಲ್ಲಿ ಅನೇಕ ಉಪ ಪ್ರಬೇಧಗಳು ಮೂಲ ಸಂಸ್ಕೃತಿಗಳೂ ಹಾಸು ಹೊಕ್ಕಾಗಿವೆ. ಹಾಗೆ ಇದರ ಅನಂತ ಮುಖಗಳು, ಆಯಾಮಗಳನ್ನು ತನ್ನ ಗರ್ಭದಲ್ಲಿ ರಕ್ಷಿಸಿಕೊಂಡಿರುವ ಜನಪದವು ಸಂಸ್ಕೃತಿಯನ್ನು ವಿಶಿಷ್ಟವಾಗಿ ರೂಪಿಸಿಕೊಂಡಿದೆ. ಹಾಗಾಗಿಯೇ ಜನಪದ ಸಂಸ್ಕೃತಿ ಅಷ್ಟು ಸುಲಭವಾಗಿ ಯಾರು ಹಿಡಿತಕ್ಕೂ ಸೀಮಿತಕ್ಕೂ ನಿಲುಕದ್ದಾಗಿರುವುದು.

ಸಂಸ್ಕೃತಿಯ ಪರಿಕಲ್ಪನೆಗೆ ಕೆಲವು ವಿದ್ವಾಂಸರು ವಿಶಿಷ್ಟವಾದ ವ್ಯಾಖ್ಯಾನ ಕಲ್ಪಿಸಿದ್ದಾರೆ. ''ಸಂಸ್ಕೃತಿ ಎಂಬುದು ಒಂದು ಪ್ರದೇಶದಲ್ಲಿ ವಾಸಿಸುತ್ತಿರುವ ಒಂದು ಜನಾಂಗದ ಜೀವನ ವಿಧಾನ. ಅದು ಜನಾಂಗದ ಸಮಸ್ತ ಕ್ರಿಯೆಗಳನ್ನು, ಅಭಿರುಚಿಗಳನ್ನು ಒಳಗೊಂಡಿರುತ್ತದೆ''. ಹೀಗೆ ಸಂಸ್ಕೃತಿ ಕುರಿತಂತ ವ್ಯಾಖ್ಯಾನಗಳನ್ನು ಅನೇಕ ವಿದ್ವಾಂಸರು ಕೊಟ್ಟಿದ್ದಾರೆ.

ಈಗಾಗಲೇ ಜನಪದ ಎಂದರೆ ಆಪ್ಟೆಯವರ ಅರ್ಥಕೋಶದಲ್ಲಿ A Community, rase, nation, a Kingdom, an empire, an inhabited country, ಮೊದಲಾದ ಅರ್ಥಗಳೊಂದಿಗೆ The country, opp, the town (ಪುರ, ನಗರ) ಎಂದು ಕರೆಯಲಾಗಿದೆ. Folk ಎಂಬ ಪದಕ್ಕೆ ಇಂಗ್ಲೀಷ್ ಭಾಷೆಯ ಜನಾಂಗ ಎಂಬ ಅರ್ಥವನ್ನು ಕೊಡಲಾಗಿದೆ. ಸಮಾಜದ ಕೆಳಗಿನ ಸ್ತರ, ಸಂಕೀರ್ಣ ಸ್ವಭಾವದ ನಾಗರೀಕ ಸಮಾಜದಲ್ಲಿ ಹಳೆಯ ಗುಂಪು, ಮೂಲ ಸಂಸ್ಕೃತಿಯನ್ನು ಒಯ್ಯುವ ಸಾಮಾಜಿಕ ವರ್ಗ ಸಂಪ್ರದಾಯಗಳೊಂದಿಗೆ ಹೆಣೆದ ಸಮಾಜ ಮೊದಲಾದ ಅರ್ಥ ಕೊಡುತ್ತದೆ. ಈ ಕುರಿತಂತೆ ಸಾಕಷ್ಟು ವಾದ-ವಿವಾದಗಳು ಕರ್ನಾಟಕದಲ್ಲಿ ಹಾ.ಮಾ.ನಾಯಕರಿಂದ ಹಿಡಿದು ಇತ್ತೀಚಿನ ವಿದ್ವಾಂಸರವರೆಗೂ ಚರ್ಚೆನಡೆಸಲಾಗಿದೆ. ಹಾಗೆ ಜಾನಪದ ಅಧ್ಯಯನಕ್ಕೆ ಸಂಬಂಧಿಸಿದಂತೆ ಜನಪದ, ಜಾನಪದ ಎಂಬ ವಿಶ್ಲೇಷಣೆ, ವಿವರಗಳನ್ನು ಚಿಂತನೆ ನಡೆಸಿರುವುದರಿಂದ ಈ ಚರ್ಚೆಯ ಬಗ್ಗೆ ಪ್ರಸ್ತಾಪಿಸುವುದಿಲ್ಲ. ಹಾಗಾಗಿ ನನ್ನ ಪ್ರಕಾರ ಜನಪದ ಎಂದರೆ, ''ಒಂದು ಸಮುದಾಯವು ಆಯಾ ಕಾಲಘಟ್ಟಕ್ಕೆ ಅನುಸಾರಿಯಾಗಿ ನಂಬಿಕೆ, ಆಚರಣೆ, ಸಂಪ್ರದಾಯ, ವಿಧಿ-ನಿಷೇಧ, ಸಾಹಿತ್ಯ, ಕಲೆ, ಸಂಸ್ಕೃತಿ, ಅಡಿಗೆ, ಉಡಿಗೆ, ವೈದ್ಯ ಇತ್ಯಾದಿಯಲ್ಲಿ ಮೂಲ ಸ್ವರೂಪವನ್ನು ಉಳಿಸಿಕೊಳ್ಳದೆ, ಅದಕ್ಕೆ ನಾಗರೀಕತೆಯ ಮೆರುಗನ್ನು ಹಚ್ಚಿ ಬೆಳಸಿಕೊಂಡು ಬಂದಿರುವ ಗುಂಪಾಗಿದೆ. ಇಂಥ ಗುಂಪಿನಲ್ಲಿ ಸಾಹಿತ್ಯವು ಅವರ ಜೀವನದ ಒಂದು ಮುಖ್ಯ ಭಾಗವಾಗಿದ್ದು, ಜನಪದ ಸಂಸ್ಕೃತಿಯು ಚಿರಕಾಲ ಉಳಿಯುವಂತೆ ಮಾಡಿದೆ.

''ಸಾಹಿತ್ಯವು ಲಲಿತ ಕಲೆಗಳಲ್ಲಿ ಒಂದು, ಸೂಕ್ಷ್ಮ ಜೀವಿಯಾದ ಕವಿಯು ತನ್ನ ಕಲೆಯ ಮೂಲಕ ಕಾಲವನ್ನೂ ಅಭಿವ್ಯಕ್ತಿಸುತ್ತಾನೆ. ಅಂತೆಯೇ ಕಲೆಯು ಸಮಕಾಲೀನವಾದುದಾಗಿರುತ್ತದೆಯೆಂದು ಹೇಳಲಾಗುತ್ತದೆ. ಕವಿಯಾದವನು ತನ್ನ ಕಾವ್ಯದಲ್ಲಿ ಕಾಲದ ಸಾಮಾಜಿಕ, ರಾಜಕೀಯ, ಐತಿಹಾಸಿಕ, ಧಾರ್ಮಿಕ, ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ವಿಷಯಗಳಿಗೆ ಅಭಿವ್ಯಕ್ತಿಯನ್ನು ನೀಡುತ್ತಾನೆ ಎಂದು ಡಿ.ಬಿ. ನಾಯಕ್ ಹೇಳುತ್ತಾರೆ''. ಜನಪದರಲ್ಲಿ ಸಾಹಿತ್ಯದ ರೂಪಪಡೆಯುವುದು ಮೊದಲು ಮೌಖಿಕ ಸ್ವರೂಪದಲ್ಲಿ, ನಂತರ ಅದು ದಾಖಲೆಯಾಗಲು ಲಿಖಿತ ರೂಪ ಪಡೆಯುತ್ತದೆ. ಒಟ್ಟಾರೆಯಾಗಿ ಪ್ರತಿಯೊಂದು ಅನುಭವಗಳನ್ನು ಅಭಿವ್ಯಕ್ತಿಸಿ ಅದಕ್ಕೆ ಒಂದು ಮೂರ್ತ ರೂಪವನ್ನು ಕೊಡುವುದಕ್ಕೆ ಸಾಹಿತ್ಯ ಎನ್ನುತ್ತೇವೆ. ಓದು-ಬರಹ ಬಲ್ಲವರಲ್ಲಿ ಅನೇಕರು ಆ ಪರಿಭಾಷಾ ಪದದ ಒಳಗಿನ ಅರ್ಥಗಳನ್ನು ಸೂಕ್ಷ್ಮವಾಗಿ ಗ್ರಹಿಸಿ ಅದರ ಸಾಂಪ್ರದಾಯಿಕ ಚಹರೆಗಳನ್ನು ಗುರುತಿಸಿ, ರಮಣೀಯ ಅರ್ಥ, ರಸ, ಭಾವ, ಅಲಂಕಾರ, ಶಬ್ದಲಾಂಕಾರ, ಇವುಗಳೆಲ್ಲಾ ತುಂಬಿಕೊಂಡಿದ್ದರೆ ಸಾಹಿತ್ಯವೆಂದು ಕರೆಯುವ ಕಾಲವೊಂದಿತ್ತು. ಆದರೆ ತಾಳ ಲಯ ಗತಿಗಳಿಗೆ ಸಿಗದೆ ಬರೀ ತನ್ನ ಅನುಭವಕ್ಕೆ ಒತ್ತುಕೊಟ್ಟು ರಚನೆಯಾದ ಅಥವಾ ಅಭಿವ್ಯಕ್ತಿಯಾದ ರೂಪವನ್ನು ಜನಪದರಲ್ಲಿ ಕಾಣಬಹುದಾಗಿದೆ. ಆ ಅಭಿವ್ಯಕ್ತಿಯನ್ನು ಮೌಖಿಕ ಅಭಿವ್ಯಕ್ತಿ ಎಂದು ಕರೆಯಲಾಗುತ್ತದೆ.

ಸಾಹಿತ್ಯದಲ್ಲಿ ದೇಶಿ ಮತ್ತು ಮಾರ್ಗ ಎಂಬ ಎರಡು ಪಂಥಗಳನ್ನು ಕಾಲಾನಂತರದಲ್ಲಿ ಗುರುತಿಸಲಾಯಿತು. ದೇಶಿ ಪಂಥವನ್ನು ಗ್ರಾಮ್ಯ ಸಾಹಿತ್ಯ ಅಥವಾ ಹಳ್ಳಿಯ ಸಾಹಿತ್ಯವೆಂದು ಕೆಲವು ವಿದ್ವಾಂಸರು ಗುರುತಿಸಿದರೆ, ಮಾರ್ಗ ಪಂಥವನ್ನು ಶಿಷ್ಟ ಸಾಹಿತ್ಯ ಎಂದು ಹೇಳಿದರು. ಈ ಹಿನ್ನೆಲೆಯನ್ನು ಇಟ್ಟುಕೊಂಡು ಜನಪದ ಸಾಹಿತ್ಯ ಮತ್ತು ಶಿಷ್ಟ ಸಾಹಿತ್ಯದ ಅಭಿವ್ಯಕ್ತಿಗಳನ್ನು ಆಧರಿಸಿ ಸಾಹಿತ್ಯವನ್ನು ವಿಶ್ಲೇಷಿಸುವ ಕ್ರಮವನ್ನು ಅನೇಕ ವಿದ್ವಾಂಸರು ತಮ್ಮ

ಅಧ್ಯಯನಗಳಲ್ಲಿ ಕೈಗೊಂಡಿದ್ದಾರೆ. ಇಲ್ಲಿ ಜನಪದ ಸಾಹಿತ್ಯವೊಂದನ್ನು ವಿವರಿಸುವುದಾದರೆ, ಜನಪದ ಸಾಹಿತ್ಯ ಮಾನವ ಸಂಸ್ಕೃತಿಯಷ್ಟೇ ಪ್ರಾಚೀನವಾದದ್ದು.

ಜನಪದರು ಮಾತಿನ ಮೂಲಕ ತಮ್ಮ ಅನುಭವಗಳನ್ನು, ಭಾವನೆಗಳನ್ನು, ಕಲ್ಪನೆಗಳನ್ನು ಹೇಳಿಕೊಳ್ಳುವ ವಿಧಾನವೇ ಜನಪದ ಸಾಹಿತ್ಯ ಅಥವಾ ಮೌಖಿಕ ಸಾಹಿತ್ಯ ಎಂದು ಕರೆಯಬಹುದು. ಈ ಜಾತಿಯಲ್ಲಿ ಜನಪದರ ಯಾವುದೇ ಪ್ರಕಾರ ಆಗಿರಬಹುದು. ಅಂದರೆ, ಕಥೆ, ಗೀತೆ, ಲಾವಣಿ, ಗಾದೆ, ಒಗಟು, ಇತ್ಯಾದಿ ಪ್ರಕಾರಗಳನ್ನು ಜನಪದ ಸಾಹಿತ್ಯ ಎಂದು ಗುರುತಿಸಲಾಗುತ್ತದೆ. ಈ ಸಾಹಿತ್ಯ ಕಾಲದಿಂದ ಕಾಲಕ್ಕೆ ವಾಕ್ ಸಂಪ್ರದಾಯದ ಮೂಲಕ ಹರಿದು ಬಂದು ಇಂದಿನವರೆಗೂ ಉಳಿದು ಬಂದಿರುವುದನ್ನು ಕಾಣುತ್ತೇವೆ. ತಾವು ರಚಿಸಿದ್ದನ್ನು ಹಂಚಿಕೊಳ್ಳುವ ಜನ ಸಮೂಹವು ಅನಕ್ಷರಸ್ಥರಾಗಿದ್ದು ಅದನ್ನು ಕಂಠಸ್ಥ ಸಂಪ್ರದಾಯದಲ್ಲಿ ಅಭಿವ್ಯಕ್ತಿಸಿ ಈ ಪರಂಪರೆಯ ಉಳಿವಿಗೆ ಕಾರಣರಾಗಿದ್ದಾರೆ. ಇಂಥ ಒಂದು ಅಭಿವ್ಯಕ್ತಿ ಒಂದು ಸಮುದಾಯವನ್ನು ಸೇರಿ ಅದು ಆ ಸಮುದಾಯದ ಆಸ್ತಿಯಾಗುತ್ತದೆ.

ಜನಪದ ಸಾಹಿತ್ಯ ಜನಪದ ಬದುಕಿನಿಂದಲೇ ಉಗಮಿಸಿದ್ದು ಜನಪದರ ಬದುಕಿನಲ್ಲೇ ಕ್ರಿಯಾಶೀಲಗೊಳ್ಳುವಂಥದ್ದು. ಮನರಂಜನೆ ಜನಪದ ಸಾಹಿತ್ಯದ ಉದ್ದೇಶವಿದ್ದರೂ ಕೇವಲ ಮನರಂಜನೆಗಾಗಿಯೇ ಸೃಷ್ಟಿಯಾಗಿದೆ ಎಂದು ಹೇಳುವಂತಿಲ್ಲ. ವ್ಯಕ್ತಿಯ ಶ್ರಮವನ್ನು ಹೋಗಲಾಡಿಸುವ ಮತ್ತು ಜೀವನದ ಏಕತಾನತೆಯನ್ನು ಮುರಿಯುವ ಸಾಧನವಾಗಿ ಬಳಕೆಯಾಗುತ್ತದೆ. ಅಂದರೆ, ಉದಾಹಣೆಗೆ ರಾಗಿ ಬೀಸೋ ಪದಗಳನ್ನು ಹಾಡುವಾಗ, ಶ್ರಮವನ್ನು ಗಣನೆಗೆ ತೆಗೆದುಕೊಂಡು, ಬೀಸೋಕಲ್ಲಿನ ನಾದದೊಂದಿಗೆ ತಮ್ಮ ಹಾಡುಗಳನ್ನು ಹಾಡುತ್ತಿದ್ದರು. ಹಾಗೂ ಕುಂತಲ್ಲೇ ಪದ್ಯಗಳನ್ನು ಕಟ್ಟುತ್ತಿದ್ದರು. ಹೀಗೆ ಜನಪದ ಸಾಹಿತ್ಯದ ಯಾವುದೇ ಪ್ರಕಾರವಾದರೂ ಸರಿ ಅದನ್ನು ವಿಶಿಷ್ಟವಾಗಿ ಬಳಸಿಕೊಳ್ಳಸುವ ಅದ್ಭುತ ಕಲೆಗಾರಿಕೆ ಅವರಲ್ಲಿತ್ತು.

ಈ ಮೇಲಿನ ಎಲ್ಲ ಹಿನ್ನೆಲೆಗಳನ್ನು ಒಳಗೊಂಡ ಅಧ್ಯಯನಕ್ರಮ ಆರಂಭವಾಗಿದ್ದು ಪಾಶ್ಚಾತ್ಯರ ಮೂಲಕ, ಭಾರತದಲ್ಲಿ ಜನಪದವು ಉಗ್ರಾಣದಂತಿದ್ದರೂ ಅದನ್ನು ಒಡೆದು ನೋಡಿದವರು ಪಾಶ್ಚಾತ್ಯರು. ಹಾಗಾಗಿ ಜಾನಪದ ಅಧ್ಯಯನವು ಪಾಶ್ಚಾತ್ಯರು ಹಾಕಿ ಕೊಟ್ಟ ಮಾರ್ಗದಲ್ಲಿ ಅಧ್ಯಯನವನ್ನು ಕೈಗೊಳ್ಳಲಾಯಿತು. ಆನೆ ನಡದದ್ದೇ ಹಾದಿಯಲ್ಲಿ ಅನ್ನುವ ಹಾಗೆ Folk literature ಎನ್ನುವುದಕ್ಕೆ ಕರ್ನಾಟಕದಲ್ಲಿ ಜನಪದ ಸಾಹಿತ್ಯವೆಂಬ ಪರಿಕಲ್ಪನೆಯನ್ನು ಅಥವಾ ಪ್ರಯೋಗವನ್ನು ಮಾಡಿದರು ಎಂಬುದು ಕುತೂಹಲ ಸಂಗತಿ. ಈ ಸಂಗತಿಯನ್ನು ಆಧರಿಸಿ ''ಹಾ.ಮಾ.ನಾ. ಅವರು ೧೯೩೧ ರಲ್ಲಿ ಪ್ರಕಟವಾದ ಗರತಿಯ ಹಾಡು ಸಂಕಲನಕ್ಕೆ ಮೊದಲ ಮಾತುಗಳನ್ನು ಬರೆದ ದಿವಂಗತ ಬಿ.ಎಂ. ಶ್ರೀಕಂಠಯ್ಯನವರು, ಶ್ರೀ ದ.ರಾ. ಬೇಂದ್ರೆಯವರು ಅಂದಿನಿಂದ ಇಂದಿನವರೆಗೂ ಈ ಪ್ರಯೋಗವು ಬಳಕೆಗೆ ಬಂದು ಇತ್ತೀಚಿನ ಲೇಖಕರೆಲ್ಲಾ ಜಾನಪದ ಸಾಹಿತ್ಯವೆಂದೆ ಬಳಸುತ್ತಿದ್ದಾರೆ ಎನ್ನುತ್ತಾರೆ''.

ಪ್ರಸ್ತುತ ಅಧ್ಯಯನದಲ್ಲಿ ಜನಪದ ಸಾಹಿತ್ಯ ಪ್ರಕಾರಗಳಾದ ಜನಪದ ಗೀತೆ, ಜನಪದ ಕಥೆ, ಜನಪದ ಗಾದೆ, ಜನಪದ ಒಗಟು ಮತ್ತು ಜನಪದ ಒಡಪುಗಳಲ್ಲಿ ಹಣತೆಗೆ ಸಂಬಂಧಿಸಿದ ನಿಲುವುಗಳನ್ನು ವಿಶ್ಲೇಷಿಸಲಾಗುತ್ತಿದ್ದು. ಜನಪದರಲ್ಲಿ ಹಣತೆಯ ಸಂಸ್ಕೃತಿ ಮಹತ್ವವುಳ್ಳದ್ದಾಗಿದ್ದು, ನಂಬಿಕೆ, ಆಚರಣೆ, ಸಂಪ್ರದಾಯಗಳ ಜೊತೆಗೆ

ಬದುಕಿನೊಂದಿಗೆ ಲೀನವಾಗಿದ್ದು ಸಾಹಿತ್ಯದ ಮೂಲಕ (ಜನಪದರು) ಹೇಗೆ ನಿರೂಪಿಸಲಾಗಿದೆ ಎಂಬುದನ್ನು ವಿವರಿಸಲಾಗಿದೆ.

**೩.೧. ಜನಪದ ಗೀತೆ**

''ಸಾಹಿತ್ಯ ವಿಲ್ಲದ ಜೀವನವಿಲ್ಲ, ಜೀವನದ ತಿರುಳಿನಲ್ಲಿ ಕೀಳು ಮೇಲೆಂಬುದಿಲ್ಲ. ಎಲ್ಲಾ ಜೀವನವೂ ಅದ್ಭುತವಾದ ರಸಾಯನವು, ಅದನ್ನು ಉಣ್ಣದಿದ್ದವರಿಲ್ಲ. ಶಬ್ದ ಮಾತ್ರವೆಲ್ಲಾ ಕಾವ್ಯವೆಂದೂ ಜೀವ ಮಾತ್ರವೆಲ್ಲ ಕವಿಯೆಂದೂ ಒಬ್ಬ ಜ್ಞಾನಿಯು ಹೇಳಿದ್ದಾನೆ. ಆದರೆ ಜೀವನು ಆತ್ಮನಿದ್ದೂ ಅದರ ಅರಿವಿಲ್ಲದುದರಿಂದ ಪರಿವೆಯಿಲ್ಲದುದರಿಂದ ತೊಳಲಿ ಬಳಲುವಂತೆ, ಜೀವನವೊಂದು ಕಾವ್ಯ, ನಾಟಕ, ಎಂಬ ಅನುಭವವಿಲ್ಲದೆ ಸಂಸಾರವನ್ನು ಅಸಾರವತ್ತಾಗಿ ಕಾಣುತ್ತಲಿದ್ದಾನೆ. ಜನಪದ ಸಾಹಿತ್ಯ ಅಂತಃ ಸ್ಫೂರ್ತಿಯು ಈ ಶ್ರದ್ಧೆಯಲ್ಲಿದೆ. ಅದರ ದೃಷ್ಟಿಯಲ್ಲಿ ಜೀವನವೇ ಕಾವ್ಯ ಎಂದು ಬೇಂದ್ರೆಯವರು ಹೇಳಿದ್ದಾರೆ''.[೧]

ಈ ಹಿಂದೆ ಇಡೀ ಜಗತ್ತಿನಾದ್ಯಂತ ಇದ್ದದ್ದು ಜನಪದ ಸಾಹಿತ್ಯವೊಂದೆ. ರವೀಂದ್ರ ನಾಥ ಠಾಕೂರರು ಜನಪದ ಸಾಹಿತ್ಯದ ಬಗ್ಗೆ ಹೇಳುವಾಗ ಎಲ್ಲ ಕಾವ್ಯಗಳಂತೆ ಜನಪದ ಗೀತೆಗಳ ಗುಣಗಳಲ್ಲಿ ಬೇರೆ ಬೇರೆ ಮಟ್ಟಗಳಿವೆ. ಪೌರಾಣಿಕ ನದಿ ಮಂದಾಕಿನಿಯಂತೆ ನಿಜವಾದ ಕವಿ ಪ್ರತಿಭೆಯಿಂದ ಹೊರಹೊಮ್ಮುವ ಜೀವವಾಹಿನಿ ಅಪ್ರಾಪ್ಯ ಲೋಕದಲ್ಲಿ ಉಗಮಗೊಳ್ಳುತ್ತವೆ, ಎಂದಿದ್ದಾರೆ. ಹಾಗೆ, "ಭೂತಕಾಲದ ಅಜ್ಞಾತ ನಿರಕ್ಷರಕುಕ್ಷಿ ರಚಿಸಿರುವ, ಬಹುಕಾಲದಿಂದ ಮೌಖಿಕ, ಸಂಪ್ರದಾಯದಲ್ಲಿಳಿದು ಬಂದಿರುವ, ಮಧುರವೂ ರಾಗಾತ್ಮಕವೂ ಆದ ಹಾಡೇ ಭಾವಗೀತೆ ಎಂದು ಕ್ರಾಪೆಯವರು ಅದರ ಲಕ್ಷಣವನ್ನೂ ತಿಳಿಸುತ್ತಾರೆ.[೨]

ಓದು ಬರಹ ಬಾರದ, ಬೆಳಗಿನಿಂದ ಇರುಳಿನವರೆಗೆ ಮನೆ ಮಾರು ಹೊಲ ಗದ್ದೆಗಳಲ್ಲಿ ದುಡಿಯುವ, ನಿಸರ್ಗದೊಡನೆ ಲೀನವಾಗಿ ಬದುಕನ್ನು ಬೆಸೆದು ಕೊಂಡಿರುವ ಸಾಮಾನ್ಯ ಜನರು ಸಾಧಾರಣವಾಗಿ ಭಾವನಾ ಜೀವಿಗಳು. ವಿಚಾರಗಳ ಹಿಡಿತವಿಲ್ಲದಿದ್ದರೂ ಬಹುಬೇಗ ಉದ್ವೇಗಕ್ಕೊಳಗಾಗಿ ರಚನೆ ಮಾಡಿದ್ದಾರೆ ಎಂದು ಹೇಳಲಾಗದು (ಸಾಹಿತ್ಯವನ್ನು). ಯಾಕೆಂದರೆ ಅವರು ತಮ್ಮ ಬದುಕಿನ ಅನುಭವಗಳಿಂದಾದ ಮುಗ್ಧವಾದ ಹಾಗೂ ಮುಕ್ತ ಜೀವನವನ್ನು ಸಾಹಿತ್ಯದಲ್ಲಿ ಪ್ರಕಟಿಸುತ್ತಾರೆ. ಈ ಹಿನ್ನೆಲೆಯಲ್ಲಿ ಜನಪದ ಸಾಹಿತ್ಯದ ಪ್ರಕಾರಗಳಲ್ಲಿ ಮುಖ್ಯವಾದದ್ದು ಗೀತೆಯ ಭಾಗವಾಗಿದೆ.

ಅನಕ್ಷರಸ್ಥ ಜನ ಸಮೂಹದ ನಡುವೆ ವಾಕ್ಸಂಪ್ರದಾಯದ ಮೂಲಕ ಹರಿದು ಬಂದಿರುವ ಒಂದು ಗುಂಪಿನ ಕಾವ್ಯ ಮತ್ತು ಸಂಗೀತಗಳ ಸಮಾವೇಶದಿಂದಾದುದು ಜನಪದ ಗೀತೆ. ಇವರ ಮನೋಭಾವ ತೀವ್ರ ಮಾನವೀಯ ರಾಗ ಮತ್ತು ಪದ ರಚನೆಯ ಸುಮಧುರ ಬಂಧವೇ ಇದರ ಲಕ್ಷಣ. ಇವರ ಹೃದಯದಲ್ಲಿ ಭಾವಾಂತರಂಗವೇ ಕಾವ್ಯದ ಹೊನಲಾಗಿ ಹರಿಯುತ್ತದೆ. ಈ ಹೊನಲಿನಲ್ಲಿ ವ್ಯಕ್ತಿತ್ವಾಲಯವಾಗುತ್ತದೆ. ಜನಪದ ಗೀತೆ ಯಾವುದನ್ನೇ ವಿವರಿಸಲಿ ಅದನ್ನು ನೇರವಾಗಿ ಹೇಳುತ್ತದೆ.

ಜನಪದ ಗೀತೆಗಳು ಅಥವಾ ಹಾಡುಗಳು ಹೇಗೆ ಮತ್ತು ಯಾವಾಗ ಉಗಮಗೊಂಡಿರಬಹುದು ಎಂಬುದನ್ನು ದಾಖಲಿಸಲು ಸಾಧ್ಯವಿಲ್ಲ. ವಿದ್ವಾಂಸರು ಹೇಳುವ ಹಾಗೆ ಹಾಡುಗಳು ಮಾತಿಗಿಂತ ಮುಂಚೆಯೇ ಹುಟ್ಟಿರಬೇಕು.

ನಂತರ ಅದು ಮಾತುಗಳಾಗಿ ಹೊರಹೊಮ್ಮಿರಬಹುದೆಂದು ವಿವರಿಸುತ್ತಾರೆ. ಮಾತುಗಳು ಭಾವಗಳ ರೂಪದಲ್ಲಿದ್ದು ಅವರ ಆಲೋಚನೆ ವಿಚಾರಧಾರೆಗಳು ಸಂಯಮಕ್ಕೊಳಗೊಳ್ಳುವ ವಿಷಯವಾಗಿ, ಭಾವವು ಅದಮ್ಯವಾಗಿದ್ದು ಹಾಡು ಮಾತು ಒಟ್ಟಿಗೆ ಸಮ್ಮಿಳಿತಗೊಂಡಿರಬೇಕು ಎನ್ನುತ್ತಾರೆ.

ಜನಪದ ಗೀತೆಗಳು ಬಾಯಿಂದ ಬಾಯಿಗೆ ಅಥವಾ ಪರಂಪರೆಯಿಂದ ಪರಂಪರೆಗೆ ಹರಿದು ಬಂದವುಗಳು. ಇವುಗಳ ರೂಪ ರಚನೆ ಕುರಿತು ಯಾವುದೇ ವಿನ್ಯಾಸ ಅವರಲ್ಲಿ ಇರಲಿಲ್ಲ. ಇದು ಒಂದು ಗುಂಪಿನ ಸಾಮಾನ್ಯ ಸದಸ್ಯರು ಭಾಗವಹಿಸುವ ಕಲೆಯಾಗಿದೆ. ಇಲ್ಲಿ ಎಲ್ಲರೂ ಬಲ್ಲವರೇ. ಸಾಮಾನ್ಯವಾಗಿ ಜನಪದ ಗೀತೆಗಳನ್ನು ಒಬ್ಬ ಹಾಡಿದ್ದು ಕಡಿಮೆ. ಹಾಡಿನ ಜೊತೆಗೆ ಮುಮ್ಮೇಳ, ಹಿಮ್ಮೇಳಗಳ ಜೊತೆಗೆ ರಾಗ, ವಾಧ್ಯಗಳ ಪರಿಕರಗಳು ಇರುತ್ತವೆ. ಹಾಗಾಗಿ ಇದು ಸಮೂಹದೊಳಗೆ ಸೃಷ್ಟಿಗೊಂಡ ಪ್ರಕಾರ ಹಾಗೇ ಜನಪದ ಗೀತೆಗಳ ಮೂಲ ರಚನಾಕಾರ ಯಾರು? ಎಂದು ಹೇಳಲು ಸಾಧ್ಯವಿಲ್ಲ. ಜನಪದ ಸಾಹಿತ್ಯವು ಆಡು ಮುಟ್ಟದ ವಸ್ತುವಿಲ್ಲ, ರಟ್ಟುಮಾಡುವ ಬದುಕಿಲ್ಲ, ಸಂಸಾರ, ಪ್ರಕೃತಿಯ ಎಲ್ಲಾ ಮುಖಗಳನ್ನು ಸ್ಪರ್ಶಿಸಿ ರಚನೆಗೊಂಡಿದೆ.

ಉದಾ:- ಪೂಜೆ, ಸಂಭ್ರಮ, ದ್ವೇಷ, ಪ್ರೀತಿ, ಪ್ರೇಮ, ಅನುರಾಗ, ಮುನಿಸು, ನಿಸರ್ಗ, ಅತ್ತೆ, ಮಾವ, ಸೊಸೆ, ತಾಯಿ, ಅಣ್ಣ, ಅಪ್ಪ, ಅಣ್ಣ-ತಂಗಿ, ಬಸಿರು, ಬಯಕೆ, ಗೋಳು, ಗೆಣತಿ, ಗೆಳತಿ, ತೌರು ಹೀಗೆ ನೂರಾರು ಸಂಗತಿಗಳನ್ನು ತಮ್ಮ ಬದುಕಿನೊಂದಿಗೆ ಬೆಸೆದುಕೊಂಡು ಅದಕ್ಕೆ ಹಾಡಿನ ರೂಪ ಕಟ್ಟಿಕೊಡುವ ಚಾಣಾಕ್ಷತೆಯನ್ನು ಹೊಂದಿವರು ನಮ್ಮ ಜನಪದರು.

ನಮ್ಮ ಜನಪದರಲ್ಲಿ ಯಾವುದೇ ಶುಭ ಕಾರ್ಯವಾಗಲಿ, ಶಾಸ್ತ್ರವೇ ಆಗಲಿ, ದೇವರ ಕಾರ್ಯವಾಗಲಿ, ಮೊದಲು ಪ್ರಾರ್ಥನಾ ಗೀತೆಗಳಿಂದ ಆರಂಭಿಸುತ್ತಾರೆ. ಇದಕ್ಕೆ ನಿದರ್ಶನವೆಂದರೆ, ಜನಪದ ಬೆಳಗು ಹುಟ್ಟುವುದು ಪ್ರಾರ್ಥನೆಯೊಂದಿಗೆ, ನಿದರ್ಶನವೆಂದರೆ, ಜನಪದರ ಬೆಳಗು ಹುಟ್ಟುವುದು ಪ್ರಾರ್ಥನೆಯೊಂದಿಗೆ, ಏಳುತ್ತಲೇ ಭೂಮಿ ತಾಯಿಗೆ ಪ್ರಾರ್ಧಿಸಿ ಏಳುತ್ತಾರೆ. ಹಾಗೆ ಮಲಗುವುದು ಹಾಡು ಹೇಳುವ ಮೂಲಕ (ಲಾಲಿ ಹಾಡುಗಳು). ಹಾಗಾಗಿ ಆರಂಭ, ಅಂತ್ಯ ಎರಡೂ ಹಾಡುಗಳಿಂದಲೇ ಮುಕ್ತಾಯವಾಗುತ್ತದೆ. ಬಹುತೇಕ ಜನಪದ ಗೀತೆಗಳಲ್ಲಿ ಕ್ರಿಯಾತ್ಮಕತೆಯನ್ನು ಕಾಣಬಹುದು. ಹಾಗಾಗಿ ಗೀತೆಗಳಲ್ಲಿ ಕ್ರಿಯಾತ್ಮಕತೆಯನ್ನು ಕಾಣಬಹುದು. ಹಾಗಾಗಿ ಗೀತೆಗಳಲ್ಲಿ ಅನೇಕ ವಿಷಯಕ್ಕೆ ಸಂಬಂಧಿಸಿದಂತೆ ಪದ್ಯಗಳು ರಚನೆಗೊಂಡಿವೆ.

ಗೀತೆಗಳನ್ನು ಧಾರ್ಮಿಕ,ಭಾವಗೀತಾತ್ಮಕ, ಕಾಯಕ, ಕ್ರೀಡಾ, ಹಾಸ್ಯ, ನಾಟ್ಯ, ಶಿಶು, ಪ್ರೇಮ, ಶೋಕ ಗೀತೆಗಳೆಂದು ಸಿ.ಪಿ.ಕೆ. ವಿಂಗಡಿಸಿದರೆ, ಕೆಲವು ವಿದ್ವಾಂಸರು ಇವುಗಳಲ್ಲಿ ಗಂಡಸರ ಹಾಡುಗಳು ಹೆಂಗಸರ ಹಾಡುಗಳು ಎಂದು ವಿಂಗಡಿಸಿದ್ದಾರೆ. ಹೀಗೆ ಅನೇಕ ವಿದ್ವಾಂಸರು ಅವರ ಅಧ್ಯಯನಕ್ಕೆ ತಕ್ಕಂತೆ ವಿಭಾಗ ಕ್ರಮವನ್ನು ಅನುಸರಿಸಿದ್ದಾರೆ. ಈ ಗೀತೆಗಳಲ್ಲಿ ಛಂದೋ ರೂಪಗಳಲ್ಲಿ ವೈವಿಧ್ಯವಿರುವುದಿಲ್ಲ. ಇಲ್ಲಿ ತ್ರಿಪದಿ, ಚೌಪದಿ, ರಗಳೆ, ಮೊದಲಾದವುಗಳು ಬಳಕೆಗೊಂಡಿವೆ. ಪ್ರಾಸಗಳಿಗಿಂತ ಅನುಪ್ರಾಸಗಳು ಬಳಕೆಯಾಗಿವೆ. ಸಾಹಿತ್ಯವು ಗ್ರಾಮ್ಯ ಭಾಷೆಯಲ್ಲಿದ್ದರೂ ಅಶ್ಲೀಲವಲ್ಲ, ಅಶುದ್ಧವಲ್ಲ, ಅನಾಗರೀಕವಲ್ಲದ್ದು. ಅಂತೆಯೇ ಜನಪದ ಗೀತೆಗಳು ಜನಪದರ ಸಾಮಾಜಿಕ, ಐತಿಹಾಸಿಕ, ರಾಜಕೀಯ, ಪೌರಾಣಿಕ, ಸಾಂಸ್ಕೃತಿಕವಾದ ಎಲ್ಲಾ ಸ್ತರಗಳನ್ನ ಮುಟ್ಟಿ ಅವುಗಳನ್ನು ಕಾಳಜಿಯಿಂದ ನೋಡಬಹುದಾಗಿದೆ. ಹಾಗಾಗಿ ಪ್ರಸ್ತುತ ಅಧ್ಯಯನಕ್ಕೆ ಗೀತೆಗಳ ಪಾಲು ಇದೆ.

ಈಗಾಗಲೇ ತಿಳಿದಿರುವಂತೆ ''ಹಣತೆ'' ಜನಪದರ ಪ್ರಧಾನ ಕೇಂದ್ರ ಬಿಂದುವಾಗಿದೆ. ಈ ಕೇಂದ್ರ ಬಿಂದುವನ್ನು ಗೀತೆಗಳಲ್ಲಿ ಸಮೀಕರಿಸಿ ಅಧ್ಯಯನಕ್ಕೆ ಒಳಪಡಿಸಿಕೊಳ್ಳಲಾಗಿದೆ. ಜನಪದರಲ್ಲಿರುವ ಅನೇಕ ಸಂಪ್ರದಾಯಗಳಲ್ಲಿ ಹಣತೆ ಸಂಪ್ರದಾಯವೂ ಒಂದು. ಈ ಸಂಪ್ರದಾಯಕ್ಕೆ ಸಂಬಂಧಿಸಿದಂತೆ ಕೆಲವು ಗೀತೆಗಳನ್ನು ಸಂಗ್ರಹಿಸಲಾಗಿದೆ. ಗೀತೆಗಳಲ್ಲಿ ಹಣತೆ ಅಥವಾ ದೀಪದ ಗೀತೆಗಳನ್ನು ೩ ಭಾಗಗಳನ್ನಾಗಿ ಮಾಡಿಕೊಳ್ಳಲಾಗಿದೆ.

* ಜ್ಯೋತಿ ಪದ್ಯಗಳು,
* ಆರತಿ ಪದ್ಯಗಳು,
* ಕಥನ ಕಾವ್ಯಗಳು,

ಎಂದು ಹಣತೆಗೆ ಸಂಬಂಧಿಸಿದಂತೆ ಗೀತೆ, ಕಾವ್ಯ, ಮಹಾಕಾವ್ಯದ ಹಿನ್ನೆಲೆಯಲ್ಲಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಅವುಗಳನ್ನು ಈ ಕೆಳಕಂಡಂತೆ ಸಂಗ್ರಹಿಸಲಾಗಿದೆ.

**ಹಣತೆಗೆ ಸಂಬಂಧಿಸಿದ ಗೀತೆಗಳು**

ಕತ್ತಲಾದ ಮನೆಗೆ ಎತ್ತಮ್ಮ ಜ್ಯೋತಿಯ
ಮುತ್ತೀನಾ ಹಣತಿಗೆ ಹವಳದ | ಬತ್ತಿಯನಾಕಿ
ನಾವು ಹತ್ತು ಬೆಳ್ಳೊಡ್ಡಿ ಕೈ ಮುಗಿದೇವು ||

ಬಾಗಿಲು ತೆಗೆದ ಕೈಗೆ ಭಾಗ್ಯದ ಮಳೆ ಬಂದು
ದೀಪಕೊಂಡವರಿಗೆ ದೊರೆ ಪದವಿ | ದೊರೆಯಲಿ
ದೀಪ ದೇವರ ಕುರುಣಿಸಲಿ ||

ಯಾರು ಆದರೂ ಹೆತ್ತ ತಾಯಂತೆ ಆದರೋ
ಸಾವಿರ ಸೌದೆ ಒಲೆಯಲ್ಲಿ | ಉರಿದಾರೋ
ದೀವಿಗೆಯಂತೆ ಬೆಳಕುಂಟೆ ||

ಬೆಳಕು ಬಾಳುತಿರಲಿ ಬಾಳು ಬೆಳಕಾಗಿರಲಿ
ಹೂವು ಬೆಳಗಾಗ ತೆರನಂತೆ | ಬಾಳಿರಲಿ
ಬೆಳಕಿಗರಳುವ ಹೂವಾಗಿ ||

ಹಾಂಗೆಂಬಾ ಸಂಟ್ಟೀ ಕೇಳ್ಯಾರೇ ತಾಯಮ್ಮ
ಕೈಯಲ್ಲಿ ಗಿಂಡೀ ಹಿಡಿದೀಪ,
ಕೈಯಲ್ಲಿ ಗಿಂಡೀ ಹಿಡಿದೀಪ ತಕ್ಕೊಂಡು
ಮುಮ್ಮಾಳಿಗೆ ಕಥವಾ ಪಿಡಿದ್ಹೋಗೀ
ಜ್ಯೋತೆಮ್ಮಗೆಣ್ಣೀ ಎರೆದಾರೋ ||

ಉಪ್ಪರಿಗೆಯೊ ಕೋಣೆಯ್ಯಲಿನಾರಿಯರೆಲ್ಲಾ
ಸುತ್ತ ದೀವಿಗೆಯಿರಿಸಿ ||
ಪೆಟ್ಟಿಯ ಹಾಸಿಗೆ ರತ್ನದ ತೆಲದಿಂಬು
ಹೋಗಿ ನಾರಿಯರು ಹಸೆಯ ಬರೆದರು ||

ಉಪ್ಪರಿಗೆಯಾ ಕಂಬಕ್ಕೆ ಹಚ್ಚಿರಿಸಿ ದೀವಿಗೆಯೆ
ಕೃಷ್ಣಗೆ ಗದ್ದಿಗೆಯ ಕಳಿರ್ಹಿಸೆ | ನಮ್ಮನೆಯ
ಲಕ್ಷ್ಮೀಯ ಕೇಳಲಿಕೆ ಬರುತ್ತಾರೆ. ||

ಮಳಿಗೆಯ ಕಂಬಕ್ಕೆ ತೂಗಿ ಕೈ ದೀವಿಗೆಯ
ಸೂರ್ಯ ಗದ್ದಿಗೆಯ ಕುಳಿರ್ಹಾಸಿ | ನಮ್ಮನೆಯಾ
ಮಹಾದೇವಿಯ ಕೇಳ ಬರುತ್ತಾರೆ. ||

ಪಟ್ಟಾವಳಿಯ ಸೀರೆ ನಾರಿಪಿಡಿದೇ ಉಟ್ಟು
ಮುತ್ತು ಮಾಣಿಕದಾ ಬೆಳಕಿನಲಿ
ಮುತ್ತಿನಾ ಕಂಠತಿರುಗಿಸುತ ಬರೆದಳು ||

ಕತ್ತಲೆ ಗಿಡಪಾಲು ಸುತ್ತ ಮಾವಿನ ಪಾಲು
ಎತ್ತೆತ್ತಲು ಹಾಡು ಮರದನಿ | ಕೊಟ್ಟಾವು
ದೀಪದ ದಾರಿ ನೇರಾಗಿ ||

ಅಕ್ಕ ಜತನಾವೆ ಅಕ್ಕಮ್ಮ ಜತನಾವೆ
ಸಾಲು ದೀವಿಗೆ ಜತನಾವೆ ||
ಸಾಲು ದೀವಿಗೆ ಜತನಾವೆ ಗಂಗಮ್ಮನ
ನಂಬಿಸಿ ಮನೆಗೆ ಕರೆತನ್ನಿ ||

ತುಪ್ಪಾದ ದೀವಿಗೆ ಚಪ್ಪರದ ಹೊಗಯೆಂದು
ಸಣ್ಣ ದೀವಿಗೆಯಾ ಬೆಳಕಲಿ | ಮಾಡಿಸಿದ
ಹೊನ್ನ ತೆಂದಿದಿರೆ ಮಗಳಿಗೆ ||

ಎಣ್ಣೆ ದೀವಿಗೆ ಕಣ್ಣಿಗೆ ಹೊಗೆಯೆಂದು
ಸಣ್ಣ ದೀವಿಗೆಯ ಬೆಳಕಿಲಿ | ಮಾಡಿಸಿದ
ನಾಣ್ಯ ತಂದಿದಿರೆ ಮಗಳಿಗೆ ||

ಕೃಷ್ಣ ರುಕ್ಮಿಣಿ ಸಹ ಅರಮನೆಗೆ ಬರುವಾಗ
ಸರರು ಸೇಸೆಯನೆ ತಳಿದರು | ದೇವಕಿ
ಎದುರು ದೀಪವನೆ ಹಿಡಿಬಾರೆ ||

ಹೊತ್ತು ಮುಳುಗುವ್ಯಾಳೆದೊಳಗೆ
ದೀಪಹಚ್ಚೋವ್ಯಾಳದೊಳಗೆ
ಅಣ್ಣ ಕರಿಯಾಕ ಬಂದನ ನಾರಿ ||

ಪಟ್ಟೆ ಸೀರೆ ಬೆಳಕು ಮುತ್ತಿನಾಡ್ಯಾಣ ಬೆಳಕು
ಕೃಷ್ಣ ಮಹಾಲಕ್ಷ್ಮಿ ನಡೆದಂತಾ ಬಂದ | ಬೆಳಕು
ತುಂಬಿತು ತಮ್ಮ ಮನೆಯಲ್ಲಿ ||

ಏನ ಬಗಿ ಬಯಲಾಕ ಬಿದ್ದಿ ಬಾಳಂದಿನಕಾ
ಹುಣಿವಿ ಚಂದ್ರ ಮೂಡಿಧಾಂಗ | ಮರೆತೇಕಾ
ಕಣ್ಣೀಗಿ ದೀಪ ಹಚ್ಚಿಧಾಂಗ ನಿನ್ನ ||

ಅಣ್ಣನಾಗಿಯು ಹನ್ನೆರಡು ಗಾವುದ
ಅಣ್ಣನ ಗಿರಿ ನಿನಗಿರಿಗೆ ಬರಲಾರೆ | ಉರುವೋಕ, ಕೈಲಿ
ಎಣ್ಣೆ ದೀವಿಗೆ ಕೇಳಿವೇನೆ ||

ರಂಗಾಕೆ ಹರೆ ಒಂದೊ ರಾಯರೇನು ಮಾಡ್ಯೂರೆ
ರನ್ನ ದೀವಿಗೆ ಬೆಳೆಕಲ್ಲಿ | ಬೈರುವ
ಲಿಂಗಾಕೆ ಜರಿಯಾ ಬಿಸ್ಯಾರು ||

ರಾಯಾಶಿ ವಲ್ಲಭ ಎಲೆಯ ಪೂಜೆ ಕರುಣೆ
ಯಾಕಪ್ಪ ನಮ್ಮೇಲೆ ಮನ ಮುನಸು | ಮಂಗಳ್ವಾರದ
ದೀಪ ನಮ್ಮಿಂದ ತಡವಾದೋ ||

ಬಾಲಗೋಪಾಲ ನಿನ್ನ ಮಗ
ಲೋಲನೇನೆ ಗೋಪಮ್ಮ
ದೀಪದ ಕುಡಿಯಂಗೆ
ದೀವಿಗೆಯಂಗೆ ಉರುದಾನೇ ಗೋಪಮ್ಮ ಬಾಲಗೋಪಾಲ ||

ಅಪ್ಪನ ಗಿರಿಯ ಇಪ್ಪತ್ತೆ ಗಾವುದ
ಅಪ್ಪ ನಿನಗಿರಿಗೆ ಬರಲಾರೆ
ತುಪ್ಪಾದ ದೇವಿಗೆ ಕಳಿಸೇನು ||

ಅಪ್ಪ ಹನುಮಂತನ ಒಪ್ಪದ ಮಗಳೆ ನಾನು

ತುಪ್ಪದ ದೀಪ ಜ್ಯೋತಿಯಾಗಿ | ನಡೆಸೇನೆಂದು

ಅಪ್ಪ ಹನುಮಂತನ ಅನುಸರಿಸಿ ||

ತೂಗು ದೀವಿಗೆ ತೂಗುತಾರಲ್ಲೋ

ಸ್ವಾಮಿ ನಿನ್ನ ಗುಡಿಯ ಮುಂದೆ

ಭಗಂವಂತರಾಡುತರಲ್ಲೋ

**ದೀಪ ಹಚ್ಚುವಾಗ ಹೇಳುವ ಹಾಡು**

ಅನಂತ ಕಲ್ಯಾಣಗುಣ ಪರಿಪೂರ್ಣ, ಜ್ಞಾನಾನಂದ ಪರಿಪೂರ್ಣ

ಯೋಗನಂದ ಪರಿಪೂರ್ಣ, ನಮೊಸ್ತೂ, ನೀವು ಕೊಟ್ಟಂಥಾದ್ದು

ನಿಮಿತ್ತ ಮಾತ್ರಕ್ಕೆ ನಮ್ಮನ್ನಿಟ್ಟಿದ್ದೀರಿ

ತೈಲದಲ್ಲಿ ಬತ್ತಿಯಲ್ಲಿ ಲಕ್ಷ್ಮೀ ದೇವಿಯ ಸನ್ನಿಧಾನ

ಬಿಳುಪು ವಾಯುದೇವರ ಸನ್ನಿಧಾನ

ಕಪ್ಪು ರುದ್ರ ದೇವರ ಸನ್ನಿಧಾನ

ಇಂಥ ಸ್ವಾಮಿ ನಾರಾಯಣ ಮೂರ್ತಿಗಳಿಗೆ

ದೀಪ ಹಚ್ಚಿದ್ರೆ ಬೆಳಕು

ದೀಪ ಹಚ್ಚದೇ ಇದ್ರ ಕತ್ಲೆ ಎಂಬುದಕ್ಕಿಲ್ಲ

ನಮ್ಮ ಹೃದಯದಲ್ಲಿ ಅಜ್ಞಾನದ ಅಂಧಕಾರ ತುಂಬಿದ್ದೀರಿ

ಅಜ್ಞಾನ ಅಂಧಕಾರ ಬಿಡಿಸಿ ಜ್ಞಾನ ಭಕ್ತಿ ವೈರಾಗ್ಯ ಕೊಟ್ಟ

ತಾರತಮ್ಯದ ಜ್ಞಾನ ತಿಳಿದು ಮಾಡಿದಂಥ ಸೇವೆ

ಮುಟ್ಟಿಸಿದಂತ ದೀಪ ಶ್ರೀ ಲಕ್ಷ್ಮಿ ನಾರಾಯಣ ಮೂರ್ತಿಗಳು

ಚರಣಾದವಿಂದಕ್ಕೆ ಅರ್ಪಿತ.

**ದೀಪವ ಬೆಳಗುವೆನು**

೧. ದೀಪವ ಬೆಳಗುವೆನು ದೇವಾ ನಿಮಗೆ

ದೀಪವ ಬೆಳಗುವೆನು ||ಪ||

ದೀಪವ ಬೆಳಗುವೆ ಲೇಪರಹಿತ ಜ್ಞಾನಿ
ಶ್ರೀಪತೆ ನೀ ಪರಿಗ್ರಹಿಸಯ್ಯ ||ಅ.ಪ||

ದೇಹವೆ ಆರತಿಯ ಗುಣಗಳ ಸ
ಮೋಹವೆ ಮೂರು ಬತ್ತಿಗಳು
ಊಹಿಸೆ ಕರುಣೆಗಳೇ ಸ್ನೇಹ ಘೃತ ಜ್ಞಾನ
ಸೋಹಂ ಭಾವಾಗ್ನೀಲಿ ಮೋಹವರೆದೆದು ಹಚ್ಚಿ

ಚಿನ್ನದಾರತಿ ಒಳಗೇ ಬತ್ತಿಗಳ ಮೂ
ರನ್ನಿಲಿಸುವೆ ನೋಂಪಿಗೆ
ಎನ್ನಂಥ ಗೋಘೃತವನ್ನು ಎರೆದು ಹಚ್ಚಿ
ಇನ್ನು ನರೆಕದಿಂದೆನ್ನನುದ್ದರಿಸು ಎಂದು

ಸೂರ್ಯ ಚಂದ್ರಾದಿಗಳು ಬೆಳಗು ಹಾಗೆ
ತೋರ್ಪೆನು ದೀಪವನು
ಅರಿಯ ಶ್ರೀ ರಾಮದಾಸರ್ಯ
ಕಾರ್ಯಕ್ಕೆ ಕಾರಣ ತೋರ್ಪನು ಧೈರ್ಯದಿ

**ಜ್ಯೋತಿ ಪದಗಳು**

ಬೆಳಗಾವು ಹೆಚ್ಚಾಲಿ ಬಂದಾನ ತಗ್ಗಾಲಿ
ಕೊಳಗದಲಿ ಹೊನ್ನ ಅಳೆಯಲಿ | ತವರ್ಮನೆಯ
ನಡುಮನೆ ಜ್ಯೋತಿ ಉರಿಯಲಿ ||

ತೌರು ಮನೆಯ ಜ್ಯೋತಿ ತಣ್ಣಾಗಿ ಉರಿಯವ್ವ
ತಣ್ಣೀರಾಗಿ ಮಿಂದು ಮಡಿಯುಟ್ಟು | ಬತ್ತೀನಿ
ತಣ್ಣಾಗಿ ಉರಿಯೇ ಜಗ ಜ್ಯೋತಿ ||

ಯಾರ ಇದ್ದರು ನನ್ನ ತಾಯವ್ವನ್ಹೋಲರ
ಸಾವಿರ ಕೊಳ್ಳಿ ಇದ್ದರೆ ತಾಯವ್ವನ್ಹೋಲರ
ಜ್ಯೋತಿ ನಿನ್ನಾರಾ ಹೋಲಾರ ||

ಹೊತ್ತು ಮುಳುಗಿತು ಮತ್ತೊಂದು ಜಾವಕೆ
ಹಚ್ಚಿದಾರ್‍ಯಾರೆ ಜಗಜ್ಯೋತಿ | ನೀಲಮ್ಮ
ಹಚ್ಚೆರೆಡು ಕೈಯ ಮುಗಿದಾಳೆ ||

ಹತ್ತಾಬಾರದ ಗಿರಿಯ ಹತ್ತಿದ ಬೈರುವ
ಹತ್ತಿ ನೋಡಿದ ಬೀದಿರೆಯಾ ಬೆಟ್ಟದ | ಮೇಲೆ
ಬಾವಿಲಿ ಜ್ಯೋತಿ ಉರಿಯೋದ ||

ತುಪ್ಪದ ದೀವಿಗೆ ಇಪತ್ತು ಉರಿದಾವಲ್ಲೆ
ಅಪ್ಪ ಬೈರವ್ನ ಗಿರಿಯಲ್ಲಿ | ಉರಿದಾವಲ್ಲೆ
ಇಪ್ಪತ್ತೆ ಕಾಲ ಜಗಜ್ಯೋತಿ ||

ಖಂಡುಗ ಅಕ್ಕಿಪೆರ ದುಂಡು ಮಲ್ಲಿಗೆ ಸರ
ಕಂಡಿರೆ ಬೈರವನ ಒಲುಮೇಯ | ಚೇಳೂರು
ಬೀದೀಲಿ ಜ್ಯೋತಿ ಉರಿಯೋದ ||

ಜ್ಯೋತಿ ತೋಳ ನೀತಿ ನೋಡಾನ ಬನ್ನಿ
ಜ್ಯೋತಿಗೆ ಎಣ್ಣೆ, ಎರೆಯೋಳ | ಮಾಳನ್ನು
ಮೇಲೆ ನೋಟಕೆ ಶಿವಬಂದ ||

ಕೈಯಣ್ಣೆ ಜ್ಯೋತಿ ಕಣ್ಣೇಕೆ ಕತ್ತಲು
ಹೊಳ್ಳೆಣ್ಣೆ ಜ್ಯೋತಿ ಮುಖ ಸಿರಿ | ಕಬ್ಬಾಳಮ್ಮ
ನಿಮಗೆ ನಿಮ್ಮಂತೆ ಸಿರಿ ಕೊಡಬೇಕು ||

ಆಚಾರಕರಸಾಗು ನೀತಿಗೆ ಪ್ರಭುವಾಗು
ಮಾತಿನಲಿ ಚೂಢಾಮಣಿಯಾಗು | ನನಕಂದ
ಜ್ಯೋತಿಯಾಗು ಜಗವೆಲ್ಲ ||

ಆರಗದಿಂದ ಬಂದಾವೆ ಆರು ಸಾವಿರ ಹಣತೆ
ಬತ್ತಿಸಾಲಿನ ದಣಿ ಸಾಲು | ಜಗಜ್ಯೋತಿ
ಸತ್ಯದಿಂದುರಿಯೇ ಸಮಗಾಗಿ ||

ಮಾಳೂರಲಿಂದ ಬಂದಾವೆ ಮೂರು ಸಾವಿರ ಹಣತೆ
ಬತ್ತಿ ಸಾಲಿನ ಕೊಂದಣಿ ಸಾಲು | ಜಗಜ್ಯೋತಿ
ಆಯ ದಿಂದುರಿಯೋ ನಮಗಾಗಿ ||

ಮಣ್ಣಲಿ ಹುಟ್ಟೋಳೆ ಮಣ್ಣಲಿ ಬೆಳಿಯೋಳೆ
ಮಣ್ಣಲಿ ಕಣ್ಣಾ ಬಿಡುವೋಳೆ | ಜಗಜ್ಯೋತಿ
ಚೊಕ್ಕದಿಂದುರಿಯೋ ನಮಗಾಗಿ ||

ಎಣ್ಣೇಲಿ ಹುಟ್ಟೋಳೆ ಮಣ್ಣಲಿ ಬೆಳೆಯೋಳೆ
ಎಣ್ಣೇಲಿ ಕಣ್ಣಾ ಬಿಡುವೋಳೆ | ಜಗಜ್ಯೋತಿ
ಒಪ್ಪಾದಿಂದುರಿಯೇ ನಮಗಾಗಿ ||

ಕಲ್ಲಲಿ ಹುಟ್ಟೋಳೆ ಕಲ್ಲಲಿ ಬೆಳಿಯೋಳೆ
ಕಲ್ಲಲಿ ಕಣ್ಣಾ ಬಿಡುವೋಳೆ | ಜಗಜ್ಯೋತಿ
ವೈನಾದಿಂದುರಿಯೇ ನಮಗಾಗಿ ||

ಬೆಳ್ಳಿಲುಟ್ಟೋಳೆ ಬೆಳ್ಳೀಲಿ ಬೆಳಿಯೋಳೆ
ಬೆಳ್ಳೀಲಿ ಕಣ್ಣಾ ಬಿಡುವೋಳೆ | ಜಗಜ್ಯೋತಿ
ಸತ್ಯದಿಂದುರಿಯೇ ನಮಗಾಗಿ ||

ಸಾಲೆಯನುಟಕೊಂಡು ಸೆರಮುತ್ತ ಕೆಟುಕೊಂಡು
ಮಾಳಿಗೆಯೊಳಗೆ ಸುಳಿವಾರೆ | ತಾಯಮ್ಮ
ಜ್ಯೋತಿಗೆಣ್ಣೆ ಎರಿಬನ್ನಿ ||

ಬಾಲನ್ನು ಕರಕೊಂಡು ಬಾಗಿಲಲಿ ನಿಂದೋರೆ ತಾಯಮ್ಮ
ಸತ್ಯುಳ್ಳರ ಜ್ಯೋತಿಯ ಕರೆಕೊಳ್ಳಿ ||

ನೀ ತರಳರ ಜ್ಯೋತಿ ನಡೆಮುಂದೆ ನಡೆದಾರೆ
ನಿನ್ನಿಂದೆ ನಾವು ಬಿರೆಂತೀವಿ | ಜಗಜ್ಯೋತಿ
ನೀ ಹೋದ ಕಾರ್ಯ ಜಯ ಜಯ ||

ಹೇಗೆಂಬ ಸುದ್ದಿಕೇಳ್ದಾರೆ ತಾಯಮ್ಮ
ಕೋಣೆ ಕದಗಳೆ ಸಿಡಿದೋಗಿ ಪಿಡಿದೋಗಿ ||
ಕೆಯ್ಯಾರ ಮಿಳ್ಳಿ ಶಿವದೀಪನಿಡಕೊಂಡು
ಜ್ಯೋತಿಗೆ ಎಣ್ಣೆ ಎರಿಬನ್ನಿ ||

ಸಣ್ಣೋರು ನಾವು ದೊಡ್ಡೋರ ಮನೆಗೆ ಬಂದೀವಿ
ಜ್ಯೋತಿಯ ಕಾಣಿಕೆ ಕೊಡಬನ್ನಿ ||
ಜ್ಯೋತಿಯ ಕಾಣಿಕೆ ಸರ್‍ರಾನೆ ಕೊಟ್ಟಾರೆ
ನಗುನಗಂತ ನಾವು ಅಂಗಳ ಇಳಿದೇವು ||

ಎಣ್ಣೆ ಅನ್ನುಂಡು ಸಣ್ಣಾ ಜೋತರ ಸುತ್ತಿ
ಬಣ್ಣಾದ ಜ್ಯೋತಿ ಬಲಗೈಲೀ ||
ಬಣ್ಣಾದ ಜ್ಯೋತಿ ಬಲಗೈಲೀ ತಕ್ಕಂಡು
ಎಣ್ಣೇ ಎಣ್ಣುವರಾ ಅರಮಾನೇ
ಬಣ್ಣಾದ ಜ್ಯೋತಿ ನಡೆಮುಂದೆ ||

ಅಂದುಳ್ಳ ಜ್ಯೋತಿ ನಡೆಮುಂದೇ
ಅಂದುಳ್ಳ ಜ್ಯೋತಿ ನಡೆಮುಂದೆ | ನಡೆದಾರೆ
ನಿನ್ನಿಂದೇ ನಾವು ಬರುತ್ತೇವೇ ||

ಶ್ರೀ ಬಂದು ಶ್ರೀಯೇ ಬಾಗಿಲಲಿ ನಿಂದಾವೆ |
ದೀವಿಗೆ ಒಳವೀಕೆ ಕರೆಕೊಳ್ಳೀ ||
ದೀವಿಗೆ ಒಳವೀಕೆ ಕರಕೊಳ್ಳಿ ತಾಯಮ್ಮ |
ಜ್ಯೋತಿ ಕಾಣಿಕೆಯೇ ಬರಬೇಕು. ||

ಕಲ್ಲೊಳು ಹೊಟ್ಟೋಳೆ ಮಣ್ಣೊಳು ಬೆಳೆಯೋಳೆ
ಕಲ್ಲೊಳಗೆ ಕಣ್ಣಾ ಬಿಡುವೋಳೆ||೨||
ಕಲ್ಲೊಳಗೆ ಕಣ್ಣಾ ಬಿಡುವೋಳೆ ಜ್ಯೋತಮ್ಮ ತಾಯೆ
ಸತ್ಯಾದಲ್ಲುರಿಯೆ ಜಗಜ್ಯೋತಿ | ತಾಯಮ್ಮ
ಹಿಂದ್ಹೋಗಿ ಮುಂದೆ ಬರಬೇಕು||೨||

ಮಣ್ಣೊಳು ಹೊಟ್ಟೋಳೆ ಮಣ್ಣೊಳು ಬೆಳೆಯೋಳೆ
ಮಣ್ಣೊಳಗೆ ಕಣ್ಣಾ ಬಿಡುವೋಳೆ||೨||
ಮಣ್ಣೊಳಗೆ ಕಣ್ಣಾ ಬಿಡುವೋಳೇ ಜ್ಯೋತ್ಯಮ್ಮ ತಾಯೆ
ಸತ್ಯಾದಲ್ಲುರಿಯೆ ಜಗಜ್ಯೋತಿ ತಾಯಮ್ಮ
ಹಿಂದ್ಹೋಗಿ ಮುಂದೆ ಬರಬೇಕು.||೨||

ನೀರೊಳಗೆ ಹುಟ್ಟೋಳೆ ನೀರೊಳಗೆ ಬೆಳೆಯೋಳೆ
ನೀರೊಳಗೆ ಕಣ್ಣಾ ಬಿಡುವೋಳೆ||೨||
ನೀರೊಳಿಗೆ ಕಣ್ಣಾ ಬೀಡುವೋಳೆ ಜ್ಯೋತಮ್ಮ | ತಾಯೆ
ಸತ್ಯಾದಲ್ಲುರಿಯೆ ಜಗಜ್ಯೋತಿ ತಾಯಮ್ಮ
ಹಿಂದ್ಹೋಗಿ ಮುಂದೆ ಬರಬೇಕು||೨||

ಹುಲ್ಲೊಳಗೆ ಹುಟ್ಟೋಳೆ ಹುಲ್ಲೊಳಗೆ ಬೆಳೆಯೋಳೆ
ಹುಲ್ಲೊಳಗೆ ಕಣ್ಣಾ ಬಿಡವೋಳೆ||೨||
ಹುಲ್ಲೊಳಗೆ ಕಣ್ಣಾ ಬಿಡವೋಳೆ ಜ್ಯೋತಮ್ಮ ತಾಯೆ
ಸತ್ಯಾದಲ್ಲುರಿಯೆ ಜಗಜ್ಯೋತಿ||೨||
ಸತ್ಯಾದಲ್ಲುರಿಯೆ, ಜಗಜ್ಯೋತಿ ತಾಯಮ್ಮ
ಹಿಂದ್ಹೋಗಿ ಮುಂದೆ ಬರಬೇಕು||೨||

ಎಣ್ಣೇಲಿ ಹುಟ್ಟೋಳೆ ಬತ್ತೀಲಿ ಬೆಳೆಯೋಳೆ
ಎಣ್ಣೇಲಿ ಕಣ್ಣಾ ಬಿಡುವೋಳೆ||೨||
ಎಣ್ಣೇಲಿ ಕಣ್ಣಾ ಬಿಡುವೋಳೆ ಜ್ಯೋತಮ್ಮ ತಾಯೆ
ಸತ್ಯಾದಲ್ಲುರಿಯೆ ಜಗಜ್ಯೋತಿ ತಾಯಮ್ಮ
ಮುಂದ್ಹೋಗಿ ಹಿಂದೆ ಬರಬೇಕು||೨||

ಮದಮ್ಮಾಳಿಗೆ ಕದವೆ ಸಿಡಿದಾವೂ||೨||
ಮುಮ್ಮಾಳಿಗೆ ಕದವೆ ಸಿಡಿದೋಗಿ ಪಿಡಿದೋಗಿ
ಕೈಯಲರ ಮಿಳ್ಕೆ ಶಿವ ದೀಪಾ||೨||
ಕೈಯಲ ಮಿಳ್ಕೆ ಶಿವ ದೀಪ ಹಿಡಕೊಂಡು
ಜ್ಯೋತಮ್ಮ ಗೆಣ್ಣೆ ಎರೆಬನ್ನಿ||೨||
ಸಾರೆಣ್ಣೆ ಕೊಡವ ಬಾಯ್ಬಚ್ಚಿ||೨||
ಸಾರೆಣ್ಮೆ ಕೊಡವ ಬಾಯ್ಬಚ್ಚಿ ಎಣ್ಣೆಯ ಬಗಸಿ
ಜ್ಯೋತಮ್ಮ ಗೆಣ್ಣೆ ಎರೆಬನ್ನಿ||೨||

ರಸ ಬಾಳೆ ಹಣ್ಣಾ ಸುಲು ಕೊಟ್ಟು ಮಿಲ ಕೊಟ್ಟು
ಜ್ಯೋತಮ್ಮಗೆಣೆ ಎರೆಬನ್ನಿ||೨||
ಒಂದೊಂದು ತೊಟ್ಟೆಣ್ಣೆ ಕಂದನ ನೆತ್ತಿಗಿರಲಿ
ಜ್ಯೋತಿಗೂ ಸೇರೆಣ್ಣೆ ಎರೆಬನ್ನಿ||೨||
ಎಣ್ಣೆ ಎರೆರಮ್ಮ ಪುಣ್ಯಾವೊ ಪಡೆರಮ್ಮ

ದೀಪ ನಚ್ಚಲಿ ದೀಪಗಳನಾಕಿವಿ||೨||
ದೀಪೋಳಿಗೆಂದು ಹೊರಟಿವಿ||೨||

ಗಂಧ ಪೂಜೆವರ ಮನೆಗಾಗಿಬಾಗಿಲ ಮುಂದೆ
ಬಂಗಾರದ ಜ್ಯೋತಿ ನಡೆ ಮುಂದೆ||೨||
ಬಂಗಾರದ ಜ್ಯೋತಿ ನಡೆ ಮುಂದೆ ನಡೆದಾರೆ
ನಿಮ್ಮಿಂದೆ ನಾವು ಬರುತ್ತೇವೆ||೨||

ನರಟೂರಿನಿಂದಾ ಬಂದು ಮೂವತ್ತು ಸಾವಿರ ಹಣತೆ
ಎಣ್ಣೆ ಸಾಲವನ್ನು ಬತ್ತಿ ಸಾಲದು||೨||
ಎಣ್ಣೆ ಸಾಲವನ್ನು ಬತ್ತಿ ಸಾಲದು ದೇವ್ರಿಗೆ
ನೋಡಿದ ದೃಷ್ಟಿ ಪರಿಹಾರ||೨||
ಸುವಿಕೂ ಸಂಗಯ್ಯ ಸುವಿರೊ ಲಿಂಗಯ್ಯ
ಸೊಬಂದಲ್ಲಿ ಬಾರೋ ಬಸವಯ್ಯ||೨||
ಆಯುಳ್ಳ ಜ್ಯೋತಿ ಬಂದು ಅಂಗಳದಿಲ್ಲಿ ನಿಂದಾವೆ
ಹೆತ್ತವನ್ವ ಸಿರಿ ದೇವ್ರಿಗೆ||೨||

ಆಯೋಳು ಜ್ಯೋತಿಬಂದು ಅಂಗಳದಲಿ ನಿಂದಾವೆ
ಹೆತ್ತವ್ವ ಸಿರಿಯ ಜಿಗುಲಿಗೆ||೨||
ಬಾಗಿಲು ತೆಗ್ಸಿರಮ್ಮ ಬಾಗ್ಯುಳ್ಳ ಲಗಸಮ್ಮೊ
ಜ್ಯೋತಮ್ಮ ನೊಳಗೆ ಕರಕೊಳ್ಳಿ||೨||

ಎಣ್ಣೇಳು ಕೊಡವ ಬಾಯಚ್ಚಿ ತಾಯಮ್ಮೊ
ಕೈಯಲಿಡಿ ಮಿಳ್ಳೆ ಶಿವ ದೀಪೂ||೨||
ಕೈಯಲಿಡಿ ಮಳ್ಳೆ ಶಿವ ದೀಪೂ ಹಿಡಕೊಂಡು
ಜ್ಯೋತಿಗೂ ನೋಡೆಣ್ಣೆ, ಎರಬನ್ನಿ||೨||

ಒಡ್ನು ದಾಟುವುದೇ ತಡವಾದೊ ಜ್ಯೋತಮ್ಮ

ನೀ ತರಳೆ ಮುಂದೆ ಮೊದಲಾದೊ||೨||

ನೀ ತರಳೆ ಮುಂದೆ ಮೊದಲಾದೊ ಜ್ಯೋತಮ್ಮ

ನಿಮ್ಹಿಂದೆ ನಾವು ಬರುತ್ತೀವಿ||೨||

ಒಂದೊಂದು ಸೌಟೆಣೆ ನಿಮ್ಮ ಕಂದನ ನೆತ್ತಿಗಿರಲಿ

ಜ್ಯೋತಗೂ ನೋಡೆಣ್ಣೆ ಎರೆಬನ್ನಿ||೨||

ಜಾಣ ನಮ್ಮಯ್ಯಗೆ ಸುಖ ನಿದ್ರೆ ಪಾಡವೊ

ಜ್ಯೋತಮ ಬಂದಿದ್ದ ಅರಿಯಾರೊ||೨||

ಜ್ಯೋತಮ ಬಂದ್ರೋ ಹನ್ನೆರಡು ಗಳಿಗಾದೊ

ಇನ್ನೆರೆಡುಗಳಿಗೆ ತಡವಾದೊ||೨||

ಜಾನ್ಮೊರ್ಣಂ ಜಗನ್ ಜ್ಯೋತಿ

ನಿರ್ಮಲವಾದ ಮನವೆ ಕರ್ಪೂರದಾರತಿ||೨||

ಅನುದಿನ ಗುರುವಿನ ಒಡಗೂಡಿ ಭಕ್ತಿಯಾ

ಜನನ ಮರಣ ರಹಿತ ಜಂಗಮನೆಗೆ ಬೆಳಗಿರಿ||೨||

ಜಾನ್ಮೊರ್ಣಂ ಜಗನ್ ಜ್ಯೋತಿ

ನಿರ್ವಂಲವಾದ ಮನವೆ ಕರ್ಪೂರ ದಾರತಿ||೨||

ಜ್ಞಾನಿಗಳೊಳ ನಾಡಿರಿ ಶಾಂಬವೆತಿ ಸುಖವು

ತಾನೆ ಸೇರುವುದು||೨||

ಜಾನ್ಮೊರ್ಣಂ ಜಗನ್ ಜ್ಯೋತಿ

ನಿರ್ಮಲವಾದ ಮನವೆ ಕರ್ಪೂರದಾರತಿ||೨||

ಅಷ್ಟ ವರ್ಣವೊ ಸುಲಭ ಮಾನವ ಜನುಮ
ಹುಟ್ಟಿ ಬರುವುದು ದುರ್ಲಭ||೨||
ಜಾನ್ಮೊರ್ಣಂ ಜಗನ್ ಜ್ಯೋತಿ
ನಿರ್ಮಲವಾದ ಮನವೆ ಕರ್ಪೂರದಾರತಿ||೨||

ಕೊಟ್ಟಾನು ಗುರುಯಮಗೆ ಹುಟ್ಟಿದ ಫಲದಿಂದಾ
ಹುಟ್ಟಿದ ಮಗಸಿದ್ನಾ ಹೆಸರಿಟ್ಟು ಬೆಳಗಿರಿ||೨||
ಜಾನ್ಮೊರ್ಣಂಜಗನ್ ಜ್ಯೋತಿ
ನಿರ್ಮಲವಾದ ಮನವೆ ಕರ್ಪೂರದಾರತಿ||೨||

**ದೀಪಾವಳಿ ಹಾಡು**

ಕಾರ್ತ್ಯಣವಿ ಹಬ್ಬಕೆ ಕರಿಲಾಕ ಬರಬ್ಯಾಡ
ಕಾಲಾಬಾಡಿಂಗಿ ಕೊಡಬ್ಯಾಡ |ನನ್ನಣ್ಣ|
ಹೊನ್ನ ದೀವಳಿಗೆ ಮರಬ್ಯಾಡ||
ಅತ್ತಿಗೆಯ ಅರಸೇನ ತಾಯಿ ಕುಮಾರೇನ|
ಮಕ್ಕಳಿಗೆ ಮಾವ ನನಗಣ್ಣ |ಬಂದರ|
ನಿಚ್ಚ ದೀವಳಿಗೆ ಮನಿಯಾಗ||
ಹಾಲು ಹಳ್ಳಾಗಲಿ ಬೆಟ್ಟ ಬೆಳಗಾಗಲಿ
ಬೆಟ್ಟಕ್ಕೆ ಬಿಟ್ಟು ಕರುಗಳು ತಪ್ಪದೇ ಮನೆಗೆ ಬರಲಿ
ದೀಪಾವಳಿ ದೀಪಾವಳಿ ದೀಪಾವಳಿಯೋ
ದೀವಳಿ ಹಬ್ಬಕ್ಕೆ ದ್ಯೇವೆಂದ್ರನ್ಯೆ ಭೋಗ
ಬೆಳೆದು ಬೀಗ್ಯೋಳೋ ಭೂಮಿ ತಾಯಿ ತಾನಂದನೋ

**ಆರತಿ ಪದ್ಯಗಳು**

ಕಲ್ಲವ್ವ ಮಾತಾಯಿ ಮೆಲ್ಲವ್ವ ರಾಜನವ
ಜಲ್ಲ ಜಲ್ಲನೆ ಉದುರವ್ವ | ನಾ ನಿನಗೆ
ಬೆಲ್ಲದಾರತಿಯ ಬೆಳಗೇನು||

ರಂಗ ಬರ್ತಾನೆಂದು ರಂಗೋಲಿ ನಾ ದೊಯ್ದೆ
ರಂಗನ ಹಿಂದೆ ರಮಣಿಯರು |ಬರ್‍ತಾರೆಂದು|
ಮಂಗಳಾರತಿ ನಾ ತಂದೆ||

ಸಕ್ಕರಾತರಿ ಕರಿಯ ದಿನಾ ಮಿತ್ರರೆಲ್ಲಾ ಮಿಡಿಗಳುಟ್ಟು
ಮುತ್ತಿನಾರುತಿ ಎತ್ತ್ಯಾರೇಳಯ್ಯಾ | ಸಿದ್ಧಾರಾಮ |
ಮುತ್ತಿನಾರುತಿ ಎತ್ತ್ಯಾರೇಳಯ್ಯಾ ||

ಆರಾತೀ ಹೊರಟಾವು ಕೀರೂತೀ ಉಳ್ಳೋಳ್ಗೆ
ಕೇರಿ ಕೇರೀಲಿ ಮರೆಯೋಳಿಗೆ | ದೊಡ್ಡಮ್ಮಾಗೆ |
ಆರಾತಿ ದೊಂಟಾವು ಐನೂರು ||

"ಬಳ್ಳಕ್ತಿ ಆರುತಿ" ಬೆಳ್ಳಿಯ ಬಾಯಿಬೀಗ
ಒಪ್ಪಿಕೊಳ್ಳು ನಿನ್ನ ಹರಕೆಯ | ಕೆಂಪರಸಿ |
ಹಳ್ಳವ ದಾಟಿ ಬರಲಾರೆ ||

ಮಂಗಳಾಂಗಿಯರಂಗ ಶೃಂಗಾರವಾಗಿ
ಮಂಗಳಾತ್ಮಕ ಪರಶಿವನ ಕೂಡಿರಿಸಿ | ಮಂಗಳಾಕ್ಷತೆ |
ಆರತಿಯನೆ ಮಾಡುತ್ತ ಮಂಗಳ ಪಾಡಿದರೆ ಮುದಿಂದ

ಮುಂದಕೆ ಮೂರ್ಧೆಜ್ಜೆ ದಯಮಾಡೊ-ಬೈರುವ
ನಿಮ್ಮ ಮಹಾಲಿಂಗಕ್ಕೆ ಆರತಿ | ಬೆಳಿಗ್ಯಾವೆ-ನೀವು
ನಿಮ್ಮ ಮಹಾಲಿಂಗಕ್ಕೆ ಆರತಿ ಬೆಳಿಗ್ಯಾವೆ ||

ಹೈಗುಚ್ಚಿನ ಆರತಿ ತಿರುಕುಚ್ಚಿನ ಆರತಿ
ನೈದಿಲೆ ಸುರುತಾಳೆ ನೆಲಗ್ವೊವೆ | ಬೈರುವಗೆ
ರಂಭೇರು ಆರತಿಯ ಬೆಳಗ್ಯಾರ ||

ಸೊಸೆಯೋರ ಆರತಿ ಎಸಳು ಚೆಂದಲ್ಲೆಂದು
ಹೆಣ್ಮಕ್ಕಳ ಆರತಿ ಮುಂದಾಡಿ | ಬರುವಾಗ
ಮುಂಗಾರು ಮಿಂಚು ಹೊಳೆರಂಗ ||

ಬೇವಿನ ಉಡಿಗೋರು ಬೆಲ್ಲದ ಆರತಿಯೋರು
ತಾಯವ್ವ ನಿಮ್ಮ ಹರಕೆಯಾರು | ಬರುತ್ತಾರೆ
ರಾಯ ಕಂದುರಂರ್ಪೆ ಬಯಲಾಗಿ

**ಕಾವ್ಯ**

''ಕತ್ತಲು ಮಹಾರಾಣಿ ಕಾಣೊ
ಹನ್ನೆಲ್ಡು ಗಂಟೆ ರಾತಿರಿನಲ್ಲಿ
ಪಾಂಚಾಲಿ ಎಂಬ ಕಲ್ಲಾಣಿ ಕುದುರೆ
ಪಂಚ್ಯಕಲ್ಲಣಿ ಎಂಬ ಪಟ್ಟದ ಕುದುರೆ
ಕುದುರೆನಾದರೆ ಏರೀಕಂಡು
ನಂದಾ ದೀಪವ ಹೊಚ್ಚೀಈಡು
ರಾಜಾ ಜಗವಾಖ್ಯಾವೀಗೆ ಹೊಯ್ತಾರೆ.

ತಮ್ಮ ಬೂಮನ್ನೆನ ಆತನ ಪತ್ನಿ ದಂದಮ್ಮೋಹುನ್ನೇದೇವಿ ರಾಗಿ ಸಹಿ ಹಾಕಲು ಬೆಳಕಿಲ್ಲವೆಂದಾಗ ಗಂಡ ಹೇಳುತ್ತಾನೆ.

ಕೇಳು ಕೇಳೆ ಗಂದಾಮೋಹ್ನಿ
ನನಗೆ ನೀನು ತಕ್ಕಾದ ಪತ್ನಿ
ನಿನ್ನ ಪಾಪತಿರಾತೆ ದರುಮಾನಾ ನನೋಡಬೇಕು
ಬಂದಾ ಹಳ್ಳೆಣ್ಣೆ ಜ್ಯೇಕಮ್ಮನ ಹೊಚ್ಚಿಗೋಳೆ
ಒಂದಾ ಜ್ಯೋತಮ್ಮುನ ಹೊಚ್ಚಿಕೊಡು
ರಿಯಾ ಕಾಳಿಂಗನ ಕರಿಯೇ ಮಡುದಿ
ಆ ಸರುಪನ ಸಿಂಬಿಯ ಮಾಡೀಕೊಂಡು
ನಿನ್ನಾ ನೆಡುವಲ ನೆತ್ತಿಲಮ್ಮ ಹೆಟ್ಟಿಗಾಳೆ

ಆಹಾ ಸರುಪಾನ ಸಿಂಬಿಯ ಮಾಲೆ

ಹಳ್ಳೆಣ್ಣೆ ಜ್ಯೋತಿ ಈಟ್ಟುಗಂಡು

ಅವ್ವೋ ಮುಂದಕೆ ಬೆಳಕೇ ಬೀಳುವೋದು

ಅಮ್ಮಾ ರಾಗಿ ಸಸಿ ನೀವು ನಡೀರಮ್ಮೋ

ಬೂಮಾಸೇನಾ ರಾಜಾ ಆಗ್ನೆಮಾಡಿ

''ಕತ್ತಲು ಮಾರಾಜಾ ಅಂತಾ ಹೇಳಿ

ಹೆಂಗೆ ನಾಮಾಂಕಿತ ಬಿದ್ದೀತಯ್ಯಾ

ಇವರು ತ್ರಾಯಿನಂಬುವೋರು

ಬಂತಿ ದೇವಿನಂಬುವೋರು

ಒಳ್ಳೆ ಆಯ್ತುವಾರುದ ದಿನಾ

ಬಂತಿ ದೇವಿ ಗರುಬಾ ಸೇರಿ

ಇವನಾ ಹುಟ್ಟೀದನಕುಸತ್ರಾ

ಹನ್ನೆಲ್ಡು ಗಂಟೆ ರಾತಿರಿನಲ್ಲಿ

ಬರೀತಿದ್ದ ಜ್ಯೋತಿ ನೋಡು

ಅವು ಊಳ್ಳೀವಾದವಯ್ಯೊ

ಅದಕ್ಕೆ ಕತ್ತಲು ಮಹಾರಾಜನಂದು

ಅವರಿಗೆ ಸಾಮೂಹಿಕ ಬಿದ್ದೀತಯ್ಯೋ

ಕತ್ತಲ ರಾಜನಿಗೆ ಮರಣ ಪ್ರಾಪ್ತ ವಾಗುತ್ತದೆ ಸ್ತ್ರೋವ ಶ್ರವ ಇಟ್ಟುಕೊಂಡು ದುಃಖ ಹಸ್ತ ಕಮ್ಮ ಬೂಮಸೈನ ಹೆಳಾಡುತ್ತಲು ಮುಂದಾದಾಗ ಆಕಾಶವಾಣಿ ಯೊಂದು ''ಸ್ತ್ರೋವೀಗೆ ನೀವು ಮದುವೆ ಮಾಡಬೇಕು''ಎಂದು ಬೇಳುತ್ತದೆ.

'ನೀಲಸತಿ' ಎಂಬಾಕೆಯನ್ನು ಹುಡಿಕಿಕಂಡು

''ಆಸಕ್ತ ಹಳುವ ಮುಚಿ ಇಟ್ಟುಬೇರೆ ಗಂಡಮಗುವಾ ತೋರಿಬಿಟ್ಟ

ಈ ಸಕ್ತ ಸ್ತ್ರೋವಿಗೆ ನೋಡು ಮದುವೆ ಕಲ್ಯಾಣ ಮಾಡುತ್ತಾರೊ'

ಹೀಗೆ ಮೊಸದಿಂದ ಲಗ್ನಮಾಡಿದಾಗ ಆಕೆ ಗೋಳಾಡುತ್ತ

''ಸುತ್ತಾ ನಲವತ್ತೆಂದು ಬಾಕ್ಲು

ಅರವತ್ತೆಂದು ಕಿಟಕಿ ನೋಡು

ಮನೆಯ ಬಂದು ಮಾಡಿಕಂಡು
ತನ್ನ ಗಂಡನ ಹಸೇಯ್ಯಾಲೆ
ಪತಿಯಾ ಮ್ಯಾಲೆ ಮಲಗೀದಳಯ್ಯೊ
ಅನ್ನುವಾಗಾ ನಿದ್ರೇ ಬೋಗಾ
ನೀಲಾಸತಿಯೇ ಎಂಬೊ ಹೆಣ್ಣೇ
ಇವಳು ಎಂತಾ ಸತ್ತೀವಂತೆ
ಏಳು ದಿವುಸಾ ತುಂಬುರ ಬಂದು
ಹೆಳಾಗುವ ಹೂಳೂವ ಹೀಲುವ ದೆನು
ನನ್ನಾ ಸಿವುನೇ ಪಾರೂವಾತಿ
ನೀಲಾ ಸತಿಯ ಸಕ್ತಕೆ ಮಚ್ಚಿಯೊ
ಬಳ್ಳೀ ದಗನಾ ಮಾರುಗದಿಂದಾ
ಅಗ್ನೀ ಜ್ವಾಲೆಯ ಬಿಡುವಾ ತಾರೆ
ಆಹಾ ಜ್ವಾಲೆಯ ನನ್ನಾ ದೇವಾ
ಏನಾ ನಾಮ ಅಕ್ಸರವಯ್ಯೋ
ಮೂರು ಲೋಕು ಹುಡುಕಿದರಮ್ಮಾ
ನೀನು ಎಂತು ಸತೀವಂಕೆ
ನಮ್ಮ ಸಹಾವಂತ್ತಿ ಧೇವಿಗಿಂತಾ
ಅವರ ಗಂಡ ಸತಿವಂತರ
ಯಮ ಪರಾಣ ಸೆಳೆಯಾ ವಾಂಗೊ
ಅವನ ಹಿಂಬಲ್ಸಿ ಹೋಗಿ ತಾಯಿ
ಅಂತಾ ಯಮುನೆ ಹೆಣ್ಣಿಗೆ ಸೋತು
........ ......... ..........
ಅಂತಾ ಸತ್ಯ ಸಹಾವಂತ್ತಿದೇವಿ
ಆಕೆಗೆ ಹೆಚ್ಚಿನವರು ನೀನು ತಾಯಿ
ನೀಲಾಸತಿ ಎಂಬೋ ಹೆಣ್ಣೇ''

ಎಂದು ಹೇಳುತ್ತಾ ಕರಿಯ ಕಾಳಿಂಗನಿಂದ ಮತ್ತೆ ಕತ್ತಲ ರಾಜನಿಗೆ ಮರಣವಿದೆ ಎಂದು ತಿಳಿಯುತ್ತೇ. ಬ್ಮೆ ವ್ಯವಸಾಯ ಕೋಣಿ ವರದಡಿಯಲ್ಲಿ ಮಗಿದ ರಾಜನನ್ನು ಕೀಳೆಂಬ ಕಡಿಯಲು ಬುದಾಗ ಬುತ್ತಿ ತರುತ್ತಿದ್ದ ನೀಲಾಸತಿಯ ಪ್ರಾರ್ಥನೆಗೆ ವಿಷ್ಣು ಬಂದು ಕಾಲಿಂಗದಡಿಯದಂತೆ ಹಾಡಿ

''ಸಾತಾ ಕೋವಿ ಕೊರುಸಾ\ತ್ರೇಜಾಗಿ ನೀವು ಬಾಳಿರಮ್ಮ ಎಂದು ಹಾಕುತ್ತಾನೆ.

**ಮಹಾಕಾವ್ಯಗಳು**

**ಮಂಗಳಾರತಿ ಪದ್ಯಗಳು ೧**

ಎರಡು ಬಟ್ಟಲಿ ಎರಡು ಬೆಲ್ಲದಚ್ಚು
ಎರಡೆಲೆ ಮಾವು ಬಲಬಂದು ||೨||
ಎರಡೆಲೆ ಮಾವು ಬಲಬಂದು ಜ್ಯೋತಮ್ಮ ತಾಯಿ
ಎರಡು ದೀವಿಗೆಲಿ ಗುಡಿದುಂಬಿ||೨||
ಎರಡು ದೀವಿಗಿಲಿ ಗುಡಿದುಂಬಿ ಜ್ಯೋತಮ್ಮ ತಾಯಿ
ಹಿಂದ್ಹೋಗಿ ಮುಂದೆ ಬರಬೇಕು||೨||



ಐದು ಬಟ್ಟಲಿ ಐದು ಬೆಲ್ಲದಚ್ಚು
ಐದೆಲೆ ಆಲ ಬಲಬಂದು||೨||
ಐದೆಲೆ ಆಲ ಬಲ ಬಂದು ಜ್ಯೋತಮ್ಮ ತಾಯಿ
ಐದು ದೀವಿಗೆಲಿ ಗುಡಿ ದುಂಬಿ||೨||
ಐದು ದೀವಿಗೆಲಿ ಗುಡಿ ದುಂಬಿ ಜ್ಯೋತಮ್ಮ ತಾಯಿ
ಹಿಂದ್ಹೋಗಿ ಮುಂದೆ ಬರಬೇಕು||೨||
ಹಿಂದ್ಹೋಗಿ ಮುಂದರೆ ಬರಬೇಕು ಜಗಜ್ಯೋತಿ
ಮಕ್ಕಳು ಜೋತೆ ಮನೆ ಜೋತೆ||೨||
ಮಕ್ಕಳು ಜೋತೆ ಮನೆ ಜೋತೆ ಜಗದಾಂಬೆ
ನಾವು ಜೋತೆ ನಮ್ಮ ಮನೆ ಜೋತೆ||೨||

ಒಂದೇ ಒಟ್ಟಲು ಬಂದೆ ಬೆಲ್ಲ ದಚ್ಚು
ಒಂದಲೆ ಹಲಸು ಬಲಬಂದು||೨||

ಒಂದಲೆ ಹಲಸು ಬಲಬಂದು ಜ್ಯೋತಮ್ಮ ತಾಯಿ
ಒಂದೇ ದೀವಿಗೆಲಿ ಗುಡಿ ದುಂಬಿ||೨||
ಒಂದೇ ದೀವಿಗೆಲೆ ಗುಡಿ ದುಂಬಿ ಜ್ಯೋತಮ್ಮ ತಾಯಿ
ಹಿಂದ್ಹೋಗಿ ಮುಂದೆ ಬರಬೇಕು||೨||
ಮೂರು ಒಟ್ಟಲು ಮೂರು ಬೆಲ್ಲ ದಚ್ಚು
ಮೂರೆಲೆ ಲಿಂಬೆ ಬಲ ಬಂದು||೨||
ಮೂರೆಲೆ ಲಿಂಬೆ ಬಲಬಂದು ಜ್ಯೋತಮ್ಮ ತಾಯಿ
ಮೂರು ದೀವಿಗಲಿ ಗುಡಿ ದುಂಬಿ||೨||
ಮೂರು ದೀವಿಗೆಲಿ ಗುಡಿ ದುಂಬಿ ಜ್ಯೋತಮ್ಮ ತಾಯಿ
ಹಿಂದ್ಹೋಗಿ ಮುಂದೆ ಬರಬೇಕು||೨||

ನಾಲ್ಕು ಒಟ್ಟಲು ನಾಲ್ಕ ಬೆಲ್ಲದಚ್ಚು
ನಾಲ್ಕೆಲೆ ದೊಡ್ಲಿ ಬಲಬಂದು||೨||
ನಾಲ್ಕೆಲೆ ದೊಡ್ಲಿ ಬಲಬಂದು ಜ್ಯೋತಮ್ಮ ತಾಯಿ
ನಾಲ್ಕು ದೀವಿಗೆಲಿ ಗಂಡಿ ದುಂಬಿ||೨||
ನಾಲ್ಕು ದೀವಿಗೆಲಿ ಗುಡಿ ದುಂಬಿ ಜ್ಯೋತಮ್ಮ ತಾಯಿ
ಹಿಂದ್ಹೋಗಿ ಮುಂದೆ ಬರಬೇಕು||೨||

**ಮಂಗಳಾರತಿ ೨**

ಮಂಗಳಾರುತಿಯ ಎತ್ತಿದರು
ಮಾದಪ್ಪ ನಿನಗೆ ಪೂರ್ರದಾರತಿಯ ಬೆಳಗಿದರು
ಮಾದಪ್ಪ ನಿನಗೆ ಮಂಗಳಾರತಿಯ ಬೆಳಗಿದರು
ಉಡುವಾಗ ಹುಲಿಗಳ ವರ್ಣ
ಬೆಳೆವಾಗ ಕರಡಿಯ ರೂಪು
ಹುಟ್ಟಿದ ಮೂರೇಳು ದಿನಕೆ ಹುಲಿಯನೇ ಮೂರುತ ಮಾಡಿ
||ಮಂಗಳಾರತಿ||

ಮಾದಪ್ಪ ನಿನಗೆ ಕರ್ಪೂರದ ಆರತಿ ಬೆಳಗಿದರು

ಉತ್ತಾಮಪುರಕೆ ಬಂದು ಉತ್ರಾಜಮ್ಮನ ಇಡದು

ಉತ್ತಾಮಪುರಕ್ಕೆ ಬಂದೂ ಉತ್ರಾಜಮ್ಮನ ಇಡದು

ಎತ್ತತಾಯಿಯ ಪಡೆದೆ ||ಮಂಗಳಾರತಿ||

ಮಾದಪ್ಪ ನಿಮಗೇ ಕರ್ಪೂರದಾರತಿ ಬೆಳಗಿದವೋ

ಸದ್ಗುರುವೇ ನಿಮಗೇ ಮಂಗಳಾರತೀಯ ಬೆಳಗಿದವೋ

ಸುತ್ತೂರು ಮಠಕ್ಕೆ ಬಂದು ಕುಕ್ಕೆಲ್ಲಿ ರಾಗಿ ಬೀಸಿ

ಸಾಲೂರ ಮಠಾದ ಒಳಿಗೆ ಸರಣೂ ಸರಣೆಂಬ ರಾಗ

||ಮಂಗಳಾರತಿ||

ಮಾದಪ್ಪ ನಿಮಗೇ ಕರ್ಪೂರದ ಆರತಿಯ ಬೆಳಗಿದವೋ

ಕುಂತೂರು ಮಠಕ್ಕೆ ಬಂದು ಗುರುಗಳಾ ಮುಂದೆ ನಿಂತು

ಪಂಚೇಳು ದೀಕ್ಷಿತರಾಗಿ ಮುತ್ತಿನ ಜೋಳಿಗೆ ಮುಂದೆ ನಿಂತು

ಪಂಚೇಳು ದೀಕ್ಷಿತರಾಗಿ ಮುತ್ತಿನ ಜೋಳಿಗೆ ಪಡೆದು

||ಮಂಗಳಾರತಿ||

ಮಾದಪ್ಪ ನಿಮ್ಮಗೆ ಕರ್ಪೂರದಾರತಿಯ ಬೆಳಗಿದೆವೋ

ಮುತ್ತಿನ ಜೋಳಿಗೆ ಪಡೆದು ಮುಂಗಾದಾರ ಮಾಡಿ

ಗುರುಗಳಿಗೆ ಸರಣ ಮಾಡಿ

ಏಳು ಮಲೆಗೆ ಹೊರಟರಾಗ ಮಂಗಳರಾತಿಯ ಬೆಳಗಿದರೋ

||ಮಂಗಳಾರತಿ||

ಏಳು ಮಲೆ ಕೈಲಾಸಕೆ ಬಂದು

ಜಾಗ ಒಳ್ಳೆದು ಎಂದು

ಸಾಲಾದ ಒಡ್ಡಿಗೆ ಬಂದೇ

ಏಳು ಮಲೆ ಮಾದೇವ ಸ್ವಾಮಿಗೆ ||ಮಂಗಳಾರತಿ||

ಮಾದಪ್ಪ ನಿಮಗೆ ಕರ್ಪೂರದಾರತಿ ಬೆಳಗಿದೆವೋ

ಜಾಲದ ಒಡ್ಡಿಗೆ ಬಂದು

ಜಾಗ ಒಳ್ಳೇದು ಎಂದು

ಎಡ ಬಾಯಿ ಹೊನ್ನುತ್ತ ಸೇರಿ

ಏಳು ಮಲೇಲಿ ನೆಲೆಗೊಂಡೇ ||ಮಂಗಳಾರತಿ||

ಬೇವಿನ ಕಾಳಮ್ಮನಿಗೆ

ಬೇಡಿದ ವರವನ್ನು ಕೊಟ್ಟು

ಬೆವನಟ್ಟಿ ದುಡವ ನೋಡಿ ||ಮಂಗಳಾರತಿ||

ಬೇವನಟ್ಟಿ ದುಡವ ನೋಡಿ

ಬೇವನಟ್ಟಿ ಹಾಳು ಮಾಡಿ

ನಡಿಯೋರ್ಗೆ ರೋಡ್ ಮಾಡಿ

ಯೋಗದಲ್ಲಿ ನೆಲೆಗೊಂಡೆ ||ಮಂಗಳಾರತಿ||

ಆಲಂಬಾಡಿಗೆ ಹೋಗಿ

ಜುಂಜೇಗೌಡನ ಪಡೆದೆ

ಹಾಲಮಜ್ಜನಕ್ಕೆ ವಕ್ಕಲಪಡದೆ ||ಮಂಗಳಾರತಿ||

ಸೆಟ್ಟಿ ಸರಗೂರಗೇ ಬಂದು

ದುಡುವುಳ್ಳ ಮೂಗಯ್ಯನ ಪಡೆದು

ಎಣ್ಣೆ ಮಜ್ಜನಕ್ಕೆ ವಕ್ಕಲ ಪಡೆದೆ ||ಮಂಗಳಾರತಿ||

ಇಂದಿನ ವಾಗಲದಲ್ಲೀ

ನಂಬಿಕೊಳ್ಳಯ್ಯ ದೇವ

ನಾಳೆ ನಮ್ಮ ವಾಗದಲ್ಲೀ

ನಾಳೆ ಮೇಲೆ ಬನ್ನಿ ಗುರುವೇ ||ಮಂಗಳಾರತಿ||

ಸದ್ಗುರುವೇ ನಿಮಗೆ ||ಮಂಗಳಾರತಿ||

ಸಾಲುಮಠದ ಗುರುಗಳಾದ ಪಾದಕೆ

ಹೂವ ಚೆಲ್ಲಾಡಿ ಬಂದೇವೋ

ವಿದ್ಯಗುರುವಿನ ಮ್ಯಾಲೇ

ಕಮಲ ಚೆಲ್ಲಾಡಿ ಬಂದೇವೋ

ತಂದೆ ತಾಯ್ಗಳ ಮ್ಯಾಲೇ ||ಮಂಗಳಾರತಿ||

ಗುರು ಹಿರಿಯರ ಮ್ಯಾಲೇ

ಹೂವ ಚೆಲ್ಲಾಡಿ ಬಂದೇವೋ

ಸತ್ತಿನ ಶನಿದೇವನ ಮ್ಯಾಲೇ

ತುಳಸಿ ಚೆಲ್ಲಾಡಿ ಬಂದೇವೋ

ಹೊತ್ತಿರುವ ಭೂಮಿ ತಾಯ್ಗೇ ||ಮಂಗಳಾರತಿ||

ನಾವೆಲ್ಲ ಸೇರಿ

ಹರ ನಮಃ ಪಾರ್ವತಿ ಪತಿಮೆ

ಹರ ಮಹದೇವ ಶಂಭೋ

ಬಸವಾದಿ ಪ್ರಮಥರ ಪಾದಕ್ಕ ಜೈ ಪರಾಕ್ ||ಮಂಗಳಾರತಿ||

**ಮಂಗಳಾರತಿ ೩**

**ಜಗತ್ತು ಸೃಷ್ಟಿಯ ಸಾಲು**

ಆದಿ ಒಳಗಲ ಜ್ಯೋತಿಬೀದಿ ಒಳಗಲ ಜ್ಯೋತಿ
ಅಂಗೈಲಿ ಉರಿವಂತ ಜ್ಯೋತಿ
ಮುಂಗೈಲಿ ಉರಿವಂತ ಜ್ಯೋತಿ
ಜ್ಯೋತಿss
ತಿಪ್ಪೆ ಮೇಲೆ ಕಸಿ ಮಡಗಿದ್ರೆ ದೇವಾss
ಭಿನ್ನ ಭೇದವಿಲ್ಲದಂತೆ ಉರಿವಂತ ಪರಂಜ್ಯೋತಿ
ಸುತ್ತವರ ಸಮಾದಿ ಮ್ಯಾಲೆ ಕಸಿ ಮಡಗಿದ್ರೆ ಗುರುವೂ
ಏಕವಾಗಿ ಉರಿವಂತ ಜಗಂಜ್ಯೋತಿss
ಮೂರು ಕೂಟದ ದಾರಿವೊಲಗೆ ಮಡಗಿದ್ರೆ ಸ್ವಾಮಿ
ಭಿನ್ನ ಭೇದವಿಲ್ಲದಂತೆ ಉರಿವಂತ ಪರಂಜ್ಯೋತಿ

ಇಂತಹ ಜ್ಯೋತಿ ತಂದವರು
ನನ್ನ ಜ್ಯೋತಿರ್ಲಿಂಗಯ್ಯನವರು
ಸಿದ್ಧಯ್ಯಾ ಸ್ವಾಮಿ ಬನ್ನಿ
ಮಂಟೇದ ಲಿಂಗಯ್ಯ ನೀವೇ ಬನ್ನಿ
ಗುರುವೆ ಸಿದ್ದು ಸಿದ್ದರುಗೆಲ್ಲ

ನೀವು ಅತಿ ಮುದ್ದು ಘನ ನೀಲಿ
ಸಿದ್ಧಯ್ಯಾ ಸ್ವಾಮಿ ಬನ್ನಿ
ಮಂಟೇದಾ ಲಿಂಗಯ್ಯಾ ನೀವೇ ಬನ್ನಿ
ಇಂತಹ ಜ್ಯೋತಿ ತಂದವರು ಗುರುವು ಜ್ಯೋತಿರ್ಲಿಂಗಪ್ಪ
ಜ್ಯೋತಿರ್ಲಿಂಗಪ್ಪ

ಅಲ್ಲಮಪ್ರಭು
ಮಂಟೇದಲಿಂಗಯ್ಯ
ಕಂಡಾಯ್ದ ಕಜ್ಯೋತಿ
ಇಂಥ ಧರೆಗೆ ದೊಡ್ಡವರ ಮಹಿಮೆ
ಎಷ್ಟು ಕೊಂಡಾಲಪ್ಪ ||ಸಿದ್ದಯ್ಯ||
ಇಂಥ ಭೂಮಿಗೆ ದೊಡ್ಡೋರೆ ಮಹಿಮೆ
ಎಷ್ಟೆಂದು ಹೊಗಳಲಯ್ಯ ||ಸಿದ್ದಯ್ಯ||
ಇಂತಹ ಭೂಮಿ ಪಡೆದವರು
ನನ್ನ ಭೂಲೋಕ ಪಡೆದವರು
ಸೂರ್ಯನ ಪಡೆದವರು

**ಮಂಗಳಾರುತಿ ೪**

ಮಂಗಳ ಮಂಗಳ ಮಂಗಳಾರುತಿ
ಮಂಟೇಸ್ವಾಮಿಗೆ
ನಾವೆತ್ತುವೆವು ಧೂಪದಾರುತಿ
ಸಿದ್ದಪ್ಪಾಜಿಗೆ

ನನ್ನ ಚಿಕ್ಕಲ್ಲೂರಲ್ಲಿ ಪಡೆದು ಮೂಡಿರುವ
ಸಿದ್ದಪ್ಪಾಜಿಗೆ
ನನ್ನ ಬಪ್ಪಗೌಡ್ನ ಪುರದಲ್ಲಿ ವರಗಿರುವ
ಮಂಟೇಸ್ವಾಮಿಗೆ
ನನ್ನ ಕಪ್ಪಡಿ ಕೈಲಾಸದಲ್ಲಿರುವ
ರಾಚಪ್ಪಾಜಿಗೆ
ನನ್ನ ಮುತ್ನಳ್ಳಿ ತೋಪಲ್ಲಸಿ ಮುಟ್ಟಾಗಿರುವ

ದೊಡ್ಡಮ್ಮ ತಾಯಿಗೆ
ನನ್ನ ಆಕಾಶವೇಣಿ ಭೂಮಿತಾಯಿ
ಸೂರ್ಯಚಂದ್ರರಿಗೆ
ನನ್ನ ಸೂರ್ಯದೇವ ಸುಕುಮಾರ
ಶನಿದೇವರಿಗೆ
ನನ್ನ ಚುಂಚನಗಿರಿಲಿ ವರಗಿರಲಿ
ಭೈರುವ ಸ್ವಾಮಿಗೆ
ನನ್ನ ದಕ್ಷಿಣ ಕಾಶೀಲಿ ವರಗಿರುವ
ನಂಡುಂಡಸ್ವಾಮಿಗೆ
ನನ್ನ ಬೆಳ್ಳಿ ಬೆಟ್ಟದಲ್ಲಿ ವರಗಿರುವ
ರಂಗಸ್ವಾಮಿಗೆ
ನನ್ನ ಚಿನ್ನದ ಗಿರೀಲಿ ಮರೆದಿರುವ
ಚಲುವರಾಯ ಸ್ವಾಮಿಗೆ

ನನ್ನ ಕಲ್ಯಾಣ ಕಟ್ಟಾಳುವಂಥ
ಕತೃ ಬಸವಣ್ಣನವರಿಗೆ
ನನ್ನ ಅಕ್ಕನಾಗಮ್ಮ ನೀಲಮ್ಮನ
ಚನ್ನಬಸವಣ್ಣನಿಗೆ
ಸ್ವಾಮಿ ಈರಣ್ಣನ
ಶಿವಪೂಜೋಂದಾಕಾಶ ನೋಕುತ್ತಾವೆ||

ಸ್ವಾಮಿ ಜುಂಜಪ್ಪ ನಿಮ್ಮ
ಶಿವು ಪೂಜೋಂದಾಕಾಶ ಸೊಕುತ್ತಾವೆ||

ಶ್ರೀ ಮದ್ರಾಮಾರಮಣಗೊಂವಿಂದ ಗೋವಿಂದ
ದೊಡ್ಡೋನು ಜುಂಜಪ್ಪ ಅರವಿಂದ ಗೋವಿಂದ ಗೋವಿಂದ
ಜೈನಮಸ್ತುಪಾರ್ವತೀಪತೆ ಹರಹರ ಮಾದೇವ ಶಂಭೋ

ಮಂಗಳಾರತಿ ೫

ಮಲ್ಲಯ್ಯಗೆ ಬೆಳಗುತಿ ನ್ಯಾರುತಿ ಆದರಿಂದ

ಮಲ್ಲಯ್ಯಗೆ ಬೆಳಗುತಿ ನಾರುತಿ ಅದರಿಂದ

ಎತ್ತಿರೋ ಇದ್ದನ್ಯಾ ಮುದದಿಂದ

ಎತ್ತಿರೋ ಇದನ್ನ ಮುಂದದಿಂದ ||ಮು||

ಮಲ್ಲಯ್ಯಗೆ ಬೆಳಗುತಿ ನ್ಯಾರುತಿ ಅದರಿಂದ

ಮಲ್ಲಯ್ಯಗೆ ಬೆಳಗುತಿ ನ್ಯಾರುತಿ ಅದರಿಂದ

ಎತ್ತಿರೋ ಇದನಾ ಮುದದಿಂದ

ಎತ್ತಿರೋ ಇದನಾ ಮುದದಿಂದ||ಹಿ||

ಮುಳಮ್ಮಗ ಬೆಳಗುತಿ ನ್ಯಾರುತಿ ಹಸ್ತದಿಂದ

ಮುಳಮ್ಮಗ ಬೆಳಗುತಿ ನ್ಯಾರುತಿ ಹಸ್ತದಿಂದ

ನಾನು ನಿನಗೆ ಬೆಳಗುತಿನು

ನಾನುನಿಗೆ ಬೆಳಗುತಿನು||ಹಿ||

ಆsss ಕರ್ಪೂರದಾರುತಿ ಉತ್ತವೆ ಮರದಿಂದ

ಆ ಕರ್ಪೂರದಾರುತಿ ಉತ್ತವೆ ಮರದಿಂದ

ಸರ್ವಭೂಷಣ ಶಿಶಂಕರಗೆs

ಸರ್ವಭೂಷಣ ಶಿಶಂಕರಗೆ ಶಿವ ಮಾದೇವಗೆss ಮು

(ವರು)ಆ ವಿಘುದೇವತೆಗೆ ಶರಣರು ಆರುತಿ

ಮಂಗಳಾರುತಿ ವಂದಿರಲು ||ಮು||

ತಂದಿಹರು ||ಹಿ||

(ಇಳವು) ಆsss ಮಂಗಳಾರುತಿ ಬೆಳಗುವ

ಶರಣರಿ ದಾರುತಿಯನ್ನು ಉತ್ತುವದು ||ಮು||

ಮೇಲಿನ ಈ ಎಲ್ಲಾ ಪದ್ಯಗಳನ್ನು (ತ್ರಿಪದಿಗಳನ್ನು) ಗಮನಿಸಿದಾಗ ಜನಪದರು ತಮ್ಮ ಬದುಕಿನಲ್ಲಿ ಒಂದು ಭಾಗವಾಗಿ ಪರಿಗಣಿಸಿದ್ದರು ಎಂಬುದು ಗಮನಾರ್ಹ. ಜನಪದರು ದೀಪವನ್ನು ಬೆಳಗಿಸುವುದು ಯಾವುದರಲ್ಲಿ ಎಂದು ವಿವರಿಸುವಾಗ, ಅವರು ಸಾಧಾರಣವಾದ ಹಣತಿಯಲ್ಲಿ ದೀಪ ಬೆಳಗುವುದಿಲ್ಲ. ಅವರು ''ಮುತ್ತೀನಾ

ಹಣತೆಯಲಿ ಹವಳಾದ ಬತ್ತಿಯನು ಹಾಕಿ'' ತಮ್ಮ ಕತ್ತಲಾದ ಮನೆಗೆ ಜ್ಯೋತಿಯನ್ನು ಬೆಳಗಿಸುವುದರ ಮೂಲಕ ಮನೆಯೊಳಗಿದ್ದ ಅಂಧಕಾರವನ್ನು ಹೋಗಲಾಡಿಸುತ್ತಾರೆ. ಕ್ರಿಯೆಗೆ ಬೆಳಕು ಹರಿಯುವ ಕ್ರಿಯೆಗೆ ಹತ್ತು ಬೆಳ್ಳೊಡ್ಡಿ ನಮಸ್ಕರಿಸುತ್ತಾರೆ, ಪೂಜಿಸುತ್ತಾರೆ. ಇಲ್ಲಿ ಹತ್ತು ಬೆಳ್ಳೊಡ್ಡಿ ಎನ್ನುವುದು ಸಮೂಹವನ್ನು ಸಾಂಕೇತಿಸುವಂಥದ್ದು. ಜನಪದರು ಇಂಥ ಮುತ್ತೀನ ಹಣತೆಯನ್ನು ಕೊಂಡವರಿಗೆ ''ಭಾಗ್ಯಾದ ಮಳೆ ಬರಲಿ, (ಒಂದು ಊರನ್ನು ಸಾಂಕೇತಿಸಿ), ದೊರೆ ಪದವಿ ದೊರೆಯಲಿ, ದೀಪ ದೇವರನ್ನು ಕರುಣಿಸಲಿ ಎಂದು ಹಾರೈಸುತ್ತಾರೆ. ಇಲ್ಲಿದೀಪ ದೇವರನ್ನು ಕರುಣಿಸುವುದು ಎಂದು ಹೇಳುವುದು ಒಂದು ವಿಶಿಷ್ಟವಾದ ತುತ್ತ ತುದಿಯನ್ನು ಹೇಳುತ್ತದೆ. ಅಂದರೆ ಸಾಮಾನ್ಯವಾಗಿ ದೇವರನ್ನು ಎತ್ತರದ ಸ್ಥಾನದಲ್ಲಿ ಪೂಜಿಸುವುದು, ಆರಾಧಿಸುವುದು ತಿಳಿದಿರುವ ವಿಷಯ. ಆದರೆ ಇಲ್ಲಿ ದೀಪವು ದೇವರನ್ನು ಕರುಣಿಸಬೇಕಂತೆ, ದೇವರಿಗಿಂತ ದೀಪವು ಎತ್ತರದ ಮಹತ್ವದ ಸ್ಥಾನವನ್ನು ಪಡೆದುಕೊಂಡಿದೆ.

''ಜನಪದರರದು ತುಂಬು ಜೀವನದ ಬದುಕು. ಶ್ರಮಿಕರಾಗಿ ತಮ್ಮ ಜೀವ ಸವಿಸಿದವರು. ಡಾ.ಬಿ.ವಿ. ವಸಂತ್‌ಕುಮಾರ್‌ವರು ಹೇಳುವಂತೆ ಕತ್ತಲ ನಾಡಿನಲ್ಲಿ ಹೊಟ್ಟೆ ಬತ್ತಿಸಿಕೊಂಡು ಬೆಳಕಾದವರು ತಾವು ನಡೆದು ಬಂದ ಕಷ್ಟವನ್ನು, ಕತ್ತಲ ಸ್ಥಿತಿಯನ್ನು, ಸಾಹಸದ ಕಥೆಯನ್ನು ಹೇಳುತ್ತ ಮನೆಮನೆಗು ಬೆಳಕು ನೀಡಿದವರು ಎನ್ನುತ್ತಾರೆ. ಹಾಗಾಗಿ, ಈ ದೇವರಿಗಿಂತ ಬೆಳಕು ನೀಡುವ ದೀಪ ಅಥವಾ ಪ್ರಣತಿ ಅವರಿಗೆ ದೊಡ್ಡದು. ದೀಪ ದೇವರನ್ನು ಕರುಣಿಸಲಿ ಎಂದು ಹೇಳುವಲ್ಲಿ ಅನುಭಾವದ ವಿಶಿಷ್ಟ ಕಲ್ಪನೆಯಾಗಿದೆ. ಬೆಳಕನ್ನು ಹಂಚುವ, ಜೀವನದ ರೀತಿ ಎಲ್ಲರ, ಕರ್ತವ್ಯವಾಗಬೇಕು ಎಂದು ಕರೆಕೊಡುತ್ತಾರೆ''.[೩]

ಬೆಳಕು ಧೀರ್ಘವಾಗಿ ನಮ್ಮ ಜೀವನದಲ್ಲಿ ಬೆಳಗುತಿರಲಿ ಎನ್ನುತ್ತಾರೆ. ಅಂದರೆ ಮನುಷ್ಯನಿಗಷ್ಟೇ ಬೆಳಕಿನ ಅಗತ್ಯವಿಲ್ಲ. ಜಗತ್ತಿನ ಎಲ್ಲಾ ಜೀವಿಗಳಿಗೂ ಬೆಳಕಿನ ಅವಶ್ಯವಿದೆ. ಬೆಳಕಿಲ್ಲದೆ ಬಾಳಿಲ್ಲ ಎನ್ನುತ್ತಾರೆ. ಈ ಬಾಳಿಗೆ ಬೆಳಕು ಇರುವ ಹಾಗೆ ಬೆಳಕಿಗೂ ಬಾಳಿದೆ ಎನ್ನುತ್ತ, ಆ ಬೆಳಕು ಹೂ ಬೆಳೆಗಾಗ ತೆರೆನಂತೆ ಅಥವಾ ಬಗೆಯಂತೆ ಇರಬೇಕು. ಬೆಳಕು ಬಾಳಿನ ಕಾರ್ಯಕಾರಣ ಸಂಬಂಧವನ್ನು ಗುರುತಿಸುತ್ತಾ ಹೂವಿನ ಪ್ರತಿಮೆಯನ್ನು ನೀಡುತ್ತಾ ಅದರ ಅರಳುವ ಕ್ರಿಯೆಯನ್ನು ಬೆಳಕಿಗೆ, ಬದುಕಿಗೆ ಸಮೀಕರಿಸಿದ್ದಾರೆ.

ಜನಪದರಿಗೆ ಜ್ಯೋತಿ ಕೇವಲ ಜ್ಯೋತಿಯಲ್ಲ ಅವರಿಗೆ ಜ್ಯೋತಮ್ಮ. ಈ ಜ್ಯೋತಮ್ಮನ ಕುರಿತು ಆರಾಧನೇ ಭಯ, ಭಕ್ತಿ, ಭಾವಗಳು ಸದಾ ಇರುತ್ತವೆ. ಹಾಗಾಗಿಯೇ ಭಕ್ತಿಯ ನೆಲೆಯಲ್ಲಿ ಹುಟ್ಟಿದ ಗೀತೆಗಳು ಸಿಕ್ಕುತ್ತವೆ. ಬದುಕಲ್ಲಿ ಅಮ್ಮನ ಪಾತ್ರ ಎಷ್ಟು ಮುಖ್ಯವಾದದ್ದು ಎಂಬುದನ್ನು ಹೇಳುವುದಾದರೆ. ಜನಪದರಲ್ಲಿ 'ತಾಯಿ' ಸಾಮಾನ್ಯ ಮಾತಿಗೆ ಸಿಕ್ಕುವಂತದ್ದಲ್ಲ. ಜಗತ್ತಿನಲ್ಲಿ ಯಾವ ಸಂಬಂಧ ಕಳೆದುಕೊಂಡರು ಮತ್ತೆ ಪಡೆಯಬಹುದು ಆದರೆ ತಾಯಿಯನ್ನು ಕಳೆದು ಕೊಂಡರೆ ಮತ್ತೆ ಸಿಗಲಾರದು ಎಂಬ ನೆಲೆಯಲ್ಲಿ ಆಕೆ ಆ ಮನೆಯ ಒಡತಿಯಾಗಿ, ಸೇವಕಿಯಾಗಿ, ತ್ಯಾಗಮಯಿಯಾಗಿ, ಬದುಕುತ್ತಾಳೆ. ತನ್ನ ಕುಟುಂಬಕ್ಕಾಗಿ ಶ್ರಮಿಸುತ್ತಾಳೆ. ಇಂಥ ತಾಯಿಯ ಕುರಿತು ಗರತಿಯೊಬ್ಬಳು ಯಾರು ಆದರೂ ಹೆತ್ತ ತಾಯಿಯಂತೆ ಆಗುತ್ತಾರೆ? ಆಕೆ ಸಾವಿರ ಸೌದೆಯ ಬೆಳಕಿದ್ದರು ದೀವಿಗೆಯ ಬೆಳಕಿಗಿಂತ ಶ್ರೇಷ್ಠವಾಗಲು ಸಾಧ್ಯನಾ? ತನ್ನ ತಾಯಿ ದೀವಿಗೆಯ ಬೆಳಕಿದ್ದ ಹಾಗೆ ಎಂದು ಹೇಳುವಲ್ಲಿ ತಾಯಿ ಮಹತ್ವತೆಯನ್ನು ಸಾರುತ್ತಾಳೆ. ಹೆಣ್ಣು ಮಕ್ಕಳು ತನ್ನ ತಾಯಿಯನ್ನು ಬಿಟ್ಟರೆ ಮತ್ತಾರ ಹತ್ತಿರವು ತನ್ನ ನೋವನ್ನು

ಹೇಳಲಾರರು. ಯಾಕೆಂದರೆ ತಾಯಿ ಸಾಂತ್ವಾನದ ಅಕ್ಷಯ ನಿಧಿ ಇದ್ದಾಹಾಗೆ. ಈ ನಿಧಿಯಲ್ಲಿ ಬಿಟ್ಟರೆ ಬೇರಲ್ಲು ಸಮಾಧಾನ ಸಿಕ್ಕದು. ಹಾಗಾಗಿ ಗರತಿಗೆ ತೌರಮನೆ ಗರಿಕೆ ಚಿಗುರಿದಂತೆ ಚಿಗುರಬೇಕು, ಕೊಳಗದಲ್ಲಿ ಚಿನ್ನವನ್ನು ಅಳಿಯುವಂತ ಶ್ರೀಮಂತಿಕೆ ಬರಬೇಕು. ಎಲ್ಲಕ್ಕಿಂತ ಮುಖ್ಯವಾಗಿ ತೌರಮನೆ ಜ್ಯೋತಿಯಾದ ತನ್ನ ತಾಯಿ ಶಾಂತಿಯಿಂದ ನೆಮ್ಮದಿಯಿಂದ ಇರುವಂತಾಗಬೇಕು ಮತ್ತು ಆಕೆಯ ಬದುಕಲ್ಲಿ ಬೆಳಕು ಶಾಶ್ವತವಾಗಿ ನೆಲೆಸಲಿ ಎಂದು ಹರಸುತ್ತಾಳೆ.

ಮಲೆನಾಡಿನ ಭಾಗದಲ್ಲಿದೀಪ ಕೊಡುವುದೇ ಒಂದು ಆಚರಣೆಯಾಗಿದ್ದು ಈ ಆಚರಣೆ ದೀಪಾವಳಿ ಹಬ್ಬದಂದು ಕಂಡು ಬರುವಂಥದ್ದು. ಅಲ್ಲಿನ ಯುವಕರೆಲ್ಲ ಸೇರಿ ಮೂರುದಿನ ರಾತ್ರಿಯಂದು ಮನೆಮನೆಗೂ ಹೋಗಿ ಹಾಡಿ ದೀಪ ಹಚ್ಚಿ ಬರುವ ಸಂಪ್ರದಾಯವಿದೆ. ಈ ಸಂಪ್ರದಾಯ ಆಚರಿಸುವಾಗ ಅಂಟಿಗೆ ಪಂಟಿಗೆ ಪದಗಳನ್ನು ಹಾಡಿಕೊಂಡು ಹೋಗುತ್ತಾರೆ. ಅಂಥ ಪದಗಳೆಂದರೆ,

ಕತ್ತಲ ಸಮಯಕ್ಕೆ ಸುತ್ತುಳ್ಳಾ ಜ್ಯೋತಮ್ಮ

ಮತ್ತೇಳು ಲೋಕೇ ಬೆಳಕಾದೊ

ಮತ್ತೇಳು ಲೋಕೇ ಬೆಳಕಾದೊ ಮಾನವರಿಗೆ

ಅಡಿಗೆ ಊಟಗಳೇ ಹಸನಾರೂ.

ಎಂದು ಹಾಡುತ್ತಾ ಮನೆ ಮನೆಗೂ ಹೋಗುತ್ತಾರೆ. ಬೆಳಕನ್ನು ಹಂಚುವ ಒಂದು ಸಂಪ್ರದಾಯ ಅನುಭಾವದ ತುತ್ತತುದಿಯನ್ನು ತಲುಪಿ ಜಗತ್ತಿಗೆ ಜ್ಯೋತಿಯ ಅನಂತತೆಯ ಬಗ್ಗೆ ಸಾರುತ್ತಾರೆ.

ಜ್ಯೋತಿ ಮೂರತೀ ನೀನಾದೆ ಜ್ಯೋತಮ್ಮ

ಕೊಡು ನುಡಿಯಾ ನಮಗೇ ಪದನಾವಾ

ಎಂದು ಹಾಡುತ್ತಾರೆ. ಹೀಗೆ ಜನಪದ ಸಾಹಿತ್ಯದ ಒಂದು ಭಾಗವೇ ಆಗಿರುವ ಅಂಟಿಗೆ ಪಂಟಿಗೆ ಪದಗಳು ತನ್ನದೇ ಆದ ಮಹತ್ವ ಪಡೆದುಕೊಂಡಿವೆ. ಇದು ಗೀತೆಗಳಲ್ಲಿ ಕಂಡು ಬರುವ ಸಾರವಾದರೆ, ದೀಪಕ್ಕೆ ಸಂಬಂಧಿಸಿದಂತೆ ಕಾವ್ಯಗಳು, ಮಹಾಕಾವ್ಯಗಳು ಸಿಕ್ಕವುದಿಲ್ಲ. ಆದರೆ ಕಾವ್ಯಗಳ ಕಥೆಯ ಭಾಗಗಳಾಗಿ ಒಂದೊಂದುತುಣಕುಗಳು ಅಲ್ಲಲ್ಲಿ ಸಿಕ್ಕುತ್ತವೆ. ಕಾವ್ಯದಲ್ಲಿ ಕತ್ತಲು ಮಹಾರಾಜ ಎಂಬ ಕಥೆಯು ಬೆಳಕು ಕತ್ತಲಿನ ಮಹತ್ವವನ್ನು ವಿವರಿಸುವಂಥದ್ದಾಗಿದೆ.

ಕತ್ತಲು ಮಹಾರಾಜನೆಂಬ ಹೆಸರು ಬಂದಿದ್ದು ಆತ ಸರಿ ರಾತ್ರಿ ಹನ್ನೆರಡು ಗಂಟೆಯಲ್ಲಿ ಹುಟ್ಟಿದ್ದರಿಂದ. ಅವನು ಬೆಳೆದು ದೊಡ್ಡವನಾದ ಮೇಲೆ ಅವನಿಗೆ ಮಧ್ಯ ವಯಸ್ಸಿನಲ್ಲಿ ಮರಣ ಸಂಭವಿಸುತ್ತದೆ. ಆ ಸಂದರ್ಭದಲ್ಲಿ ಅವನಿಗೆ ಮದುವೆ ಮಾಡಬೇಕೆಂದು ತೀರ್ಮಾನಿಸಿ ಸತ್ತ ಹೆಣದ ಜೊತೆ ಮದುವೆ ಮಾಡುತ್ತಾರೆ. ಆಕೆಯ ಭಕ್ತಿಯಿಂದ ಅವನು ಮತ್ತೆ ಜೀವ ಪಡೆಯುತ್ತಾನೆ. ಹೀಗೆ ಕಥಾ ಭಾಗ ಮುಂದುವರೆಯುತ್ತದೆ. ಇಂಥದ್ದೇ ಮತ್ತೊಂದು ಕಥೆಯೆಂದರೆ ಕಾಳಿಂಗರಾಯನ ಕಾವ್ಯವಾಗಿದ್ದು ಅದರಲ್ಲೂ ರಾಜಕುಮಾರ ಮರಣ ಹೊಂದುತ್ತಾನೆ. ಅವನ ಶವಕ್ಕೆ ಮದುವೆ

ಮಾಡಲು ಹೆಣ್ಣು ಹುಡುಕುತ್ತಾರೆ. ಮನೆ ತುಂಬ ಮಕ್ಕಳಿದ್ದ ಬಡ ಬ್ರಾಹ್ಮಣನೊಬ್ಬ ಹೆಣ್ಣು ಕೊಡಲು ಮುಂದೆ ಬಂದು, ಶವದೊಂದಿಗೆ ಬಾಲಕಿಯ ಮದುವೆ ಮಾಡುತ್ತಾನೆ. ಸ್ಮಶಾನದಲ್ಲಿ ಅಂತ್ಯಕ್ರಿಯೆಯಾಗುವ ಸಮಯದಲ್ಲಿ ಭಾರಿ ಬಿರುಗಾಳಿ ಮಳೇ ಬರುತ್ತದೆ. ಬಾಲಕಿಯನ್ನು ಶವದೊಡನೆ ಬಿಟ್ಟು ಎಲ್ಲರೂ ನಗರಕ್ಕೆ ಹೊರಟು ಹೋಗುತ್ತಾರೆ. ಆ ಬಾಲಕಿಗೆ ಅಂದು ಭೀಮೇಶ್ವರಿ ವ್ರತದ ದಿನವೆಂಬ ಅರಿವಾಗುತ್ತದೆ. ಮರಳಿನಲ್ಲೇ ಹಣತೆ ಮಾಡಿ, ನೀರನ್ನು ಎಣ್ಣೆಯಂತೆ ಹಾಕಿ ದೀಪ ಹಚ್ಚುತ್ತಾಳೆ. ಅವಳು ಭೀಮೇಶ್ವರನ ವ್ರತ ಮಾಡಿದಳು. ಆ ವ್ರತದ ಫಲದಿಂದ ಸತ್ತ ಗಂಡ ಬದುಕಿದನು. ಹೀಗೆ ಕಾವ್ಯ ಅಂತ್ಯಗೊಳ್ಳುತ್ತದೆ.

ಈ ಮೇಲಿನದ್ದು ಕಾವ್ಯಗಳ ಪಾತ್ರವಾದರೆ, ಮಹಾಕಾವ್ಯದಲ್ಲಿ ಹಾಡುವ ಗಾಯಕರು ಸ್ತುತಿಸುವಾಗ ಜ್ಯೋತಿಯನ್ನು ನೆನೆದು ಹಾಡುವ ಸಂಪ್ರದಾಯವಿದೆ. ಅಂತಹ ಕಾವ್ಯಗಳೆಂದರೆ ಮಲೆ ಮಾದೇಶ್ವರನ ಕಾವ್ಯ, ಮಂಟೇಸ್ವಾಮಿ ಕಾವ್ಯ, ಮೈಲಾರಲಿಂಗನ ಕಾವ್ಯವಾಗಿದೆ. ಗಾಯಕರು ಹಾಡುವಾಗ ಜ್ಯೋತಿ ಪದ್ಯ ಮತ್ತು ಮಂಗಳಾರತಿಯನ್ನು ಹಾಡುವ ಮುಖಾಂತರ ಇಡೀ ಕಾವ್ಯಕ್ಕೆ ಮಂಗಳ ಹಾಡುತ್ತಾರೆ.

ಒಟ್ಟಾರೆ ಜ್ಯೋತಿ ಎಂಬುದು ಬೆಳಕಿನ ಸತ್ಯವಿದ್ದಹಾಗೆ. ಈ ಸತ್ಯವನ್ನು ಹಿಡಿದುಕೊಂಡೇ ಅವರು ತಮ್ಮ ಬದುಕನ್ನು ಸಾಗಿಸಿದವರು. ಜ್ಯೋತಿ ಉರಿದ ಮನೆ ನೀತಿ ಹೆಚ್ಚು ಎಂಬಂತೆ ಬಾಳಿದವರು.

**೩.೨ ಜನಪದ ಕಥೆ**

ಹಾಡು ಬಾರದಿದ್ದವರು ಸಿಕ್ಕಾರು: ಕತೆ ಬಾರದವರು ಒಬ್ಬರೂ ಸಿಕ್ಕಲಿಲ್ಲ ಎಂದು ಡಾ.ಚಂದ್ರಶೇಖರ ಕಂಬಾರರು ಒಂದು ಕಡೆ ಹೇಳುತ್ತಾರೆ. ಬಾಳಿನ ನೋವನ್ನೇ ಮರೆಸುವ ಕಥೆಗಳು ಹುಟ್ಟಿದ್ದು ಜನಪದರಿಂದ. ಇದೊಂದು ಪ್ರಜ್ಞಾಪೂರ್ವಕ ಮನರಂಜನಾ ಕಲೆಯಾಗಿದೆ. ವಯಸ್ಸುಗಳ ಪರಿಮಿತಿಗಳಿಲ್ಲದೆ, ಅಂತರಗಳಿಲ್ಲದೆ ಎಲ್ಲರನ್ನು ಕೂಡಿಸಿ ಕೇಂದ್ರೀಕರಿಸುವ ಕುತೂಹಲ ಕೆರಳಿಸುವ ಸಾಧನವಾಗಿದೆ. ಇಂಥ ಕಥೆಗಳನ್ನು ಗುರುತಿಸುವಾಗ ಅಜ್ಜಿಯನ್ನು ಮಾಪನ ಮಾಡಲಾಗುತ್ತದೆ. ಯಾಕೆಂದರೆ 'ಕಥೆ' ಎನ್ನುವ ಪರಿಕಲ್ಪನೆಯನ್ನು ಕಟ್ಟಿಕೊಟ್ಟವಳು ಈ ಅಜ್ಜಿ, ಹಾಗಾಗಿಯೇ ಅವಳಿಗೆ ಕಥೆಗಳೆಂದರೆ,

ಕಥೆಗೆ ಕಥೆ ಕಾರಣ
ಮುದುಕೀ ಹೂರಣ
ತಿಂದೇನ, ತಿಪ್ಪಿಗೆ ಚೆಲ್ಲಿದೆ?
ತಿಪ್ಪಿಗೆ ಚೆಲ್ಲಿದೆ!
ತಿಪ್ಪೇನ್ ಕೊಟ್ಟಿತು?
ಖತಾ ಕೊಟ್ಟಿತು.....
..................

ಎಂದು ಹೇಳುವ ಪ್ರಶ್ನೋತ್ತರ ರೂಪದಲ್ಲಿ (ಕಥೆಗಳು) ಆರಂಭವಾಗುತ್ತವೆ. ಅಜ್ಜಿಯ ಕಥನ ಕಲೆಗೆ ಪೀಠಿಕೆಯಂತಿರುವ ಪ್ರಶ್ನೋತ್ತರಗಳಲ್ಲಿ ಜನಪದ ಕಥೆಗೆ, ಕಥೆಯೇ ಕಾರಣ. ಇದರ ವಸ್ತುವು ಕಲ್ಪಿತ, ಸತ್ಯವೆಂದು ತಿಳಿಸುವ ಕಾರಣವಿಲ್ಲ. ಇದರಲ್ಲಿ ತಿರುಳುಳ್ಳದ್ದನ್ನು ಸ್ವೀಕರಿಸಿ ಬೇಡವಾದದ್ದನ್ನು ತಿಪ್ಪೆಗೆ ಚೆಲ್ಲಿ, ಎಂದರೂ ಮತ್ತೆ ನಿಮಗೆ ರುಚಿಸದ ಆ ಕಥಾಭಾಗವೂ ಎಲ್ಲೋ ಮತ್ತೊಂದೆಡೆಗೆ ಉಪಯುಕ್ತವಾಗುತ್ತದೆ ಎಂಬ ಮೇಲಿನ ಸಂವಾದದ ಹಿನ್ನೆಲೆಯಲ್ಲಿ ಕಥೆಗಳ ನೆಲೆಯನ್ನು ತಿಳಿಯಬಹುದಾಗಿದೆ.

ಸರ್ವರಲ್ಲಿ ಬೇಧವಿಲ್ಲದ ಒಂದೇ ರೀತಿಯಾಗಿ ತೃಪ್ತಿ ಪಡಿಸುವ ಸಾಧ್ಯತೆಗಳು ಕಥೆಗಳಿಗಿವೆ. ಕಥೆಯು ಮಾನವನಲ್ಲಿ ಸಹಜವಾಗಿರುವ ಪ್ರವೃತ್ತಿಯಾಗಿದೆ. ವ್ಯಕ್ತಿ ಕಥೆಯನ್ನು ಅಥವಾ ಈ ಕಲೆಯನ್ನು ಹೇಗೆ ಬಿಂಬಿಸುತ್ತಾನೆ ಎನ್ನುವುದರ ಮೇಲೆ ಜನರ ಸಮೂಹದ ಆಸಕ್ತಿ ತಲೆ ದೋರುತ್ತದೆ. ಕಥೆಗಳನ್ನು ಅಜ್ಜಿಗಿಂತ ಬೇರೆಯಾರು ಅಷ್ಟೊಂದು ರಸವೊತ್ತಾಗಿ ಸೃಷ್ಟಿಸಲು ಸಾಧ್ಯವಿಲ್ಲವೇನೋ ಹಾಗಾಗಿಯೇ ಕಥೆಗಳಿಗೆ ಅಜ್ಜಿ ಕಥೆಗಳು, ಕಟ್ಟು ಕಥೆಗಳು ಎಂದು ಹೆಸರಿಸಲಾಗಿದೆ. ಅನೇಕ ಮಂದಿ ಆಸಕ್ತಿಯಿಂದ ಕೇಳುವುದರಿಂದ ಇದಕ್ಕೆ ಹೂಂ ಗುಟ್ಟುವ ಕಥೆ ಎಂತಲೂ ಹೇಳುತ್ತಾರೆ. ತಲೆಮಾರಿನಿಂದ ತಲೆಮಾರಿಗೆ ವಾಗ್ರೂಪದಲ್ಲಿ ಬಂದಂಥ ಕಥಾ ನಿರೂಪಣೆಯನ್ನು ಜನಪದ ಕಥೆ ಎಂದು ಹೇಳುಬಹುದು. ಇದರ ಲಕ್ಷಣ ಸ್ವಚ್ಛಂದ ಕಲ್ಪನೆಯಾಗಿದ್ದು ಕಥೆಗಳನ್ನು ಕೇಳುವುದರಿಂದ ಮನರಂಜನೆಯ ಜೊತೆಗೆ ಸಾಹಸ, ಸ್ಫೂರ್ತಿಯು, ಜ್ಞಾನಾರ್ಜನೆಯೂ, ಆಗಬಹುದು. ಕಥೆಗಾರ ಜಾಣನಾದ್ದರಿಂದ ಅವನಿಗೆ ಶ್ರೋತೃಗಳ ಅಭಿರುಚಿಗೆ, ಮನೋಧರ್ಮಕ್ಕೆ ತಕ್ಕಂತೆ ಆಸಕ್ತಿ ಬೆಳೆಸುವ ನಿಟ್ಟಿನಲ್ಲಿ ನಿರೂಪಣೆಯನ್ನು ಕೊಂಡೊಯ್ಯುತ್ತಾನೆ. ಈ ಕಥನ ಕಲೆ ವ್ಯಷ್ಟಿಯಿಂದ ಸೃಷ್ಟಿಗೊಂಡಿಲ್ಲ, ಸಮಷ್ಟಿಯಿಂದ ರಚನೆಗೊಂಡಿದೆ. ಸೃಷ್ಟಿಕರ್ತರು ಕೆಲವರೇ ಆದರೂ ನಿರೂಪಕರು ಹಲವಾರರು ಹಾಗೆ ಈಡೀ ಸಮೂಹವೇ ಕಥಾನಕಾರರಿಂದ ಕೂಡಿರುವಂಥದ್ದಾಗಿದೆ.

ಮೌಖಿಕ ಸಂಪ್ರದಾಯದ ಹಿನ್ನೆಲೆಯಲ್ಲಿ ರಚನೆಗೊಂಡ ಕಥೆಗಳು ತಮ್ಮ ಪ್ರಾಚೀನತೆಯನ್ನು ಹೀಗೆ ಅಭಿವ್ಯಕ್ತಿಸುತ್ತದೆ. (ಹಳೆಯದ್ದಾಗಿರಬೇಕು ಅಂದರೆ ಪ್ರಾಚೀನದಲ್ಲಿ)

ಪಂಡಿತರುಂ ವಿವಿಧಕಳಾ

ಮಂಡಿತರುಂ ಕೇಳತಕ್ಕೆ ಕೃತಿಯಂ ಕ್ಷಿತಿಯೊಳ್

ಕಂಡವರ್ ಕೇಡೆ ಗೊರವರ

ದುಂಡುಚಿಯೇ ಬೀದಿವಜೆಯೆ ಬೀರನ ಕತೆಯೇ?

ಎಂದಿದೆ. ''ಬೀರನ ಕಥೆಯಲ್ಲಾಗಲಿ, ಗೊರವರ ದುಂಡುಚಿಯಲ್ಲಾಗಲಿ ಸಾಮರಸ್ಯವಿಲ್ಲ. ಅವುಗಳೆಲ್ಲೆಲ್ಲ ನಮ್ಮ ಜನತೆಯ ರಸಿಕತೆ, ಸುಸಂಸ್ಕೃತ ಮನೋಭಾವ, ನೀತಿಯ ಕಲ್ಪನೆ, ಜೀವನ ದೃಷ್ಟಿಗಳು ಅಭಿವ್ಯಕ್ತಿಹೊಂದಿವೆ. ಹಲವು ಜನರಲ್ಲಿ ಅಜ್ಜಿಯ ಕಥೆಗೆ ಕಾಲಿಲ್ಲ; ಮನುಷ್ಯನಿಗೆ ಬಾಲಿಲ್ಲ, ಎನ್ನುವ ಜನಜನಿತ ನುಡಿಯಾಗಿ ರೂಢಿಯಲ್ಲಿದೆ ಎಂದು ಮಿರ್ಜಿ ಅಣ್ಣಾರಾಯ ಹೇಳಿದ್ದಾರೆ''.

ಈ ಓನ್ನೆಲೆಯಲ್ಲಿ ಶೈಲಿ ಹಳೆಯದಾದರೂ. ಕಥೆಯನ್ನು ಒಂದೊಂದು ದೇಶದಲ್ಲಿ ಒಂದೊಂದು ಹೆಸರಿನಿಂದ ಕರೆಯುವುದರಿಂದ ಆಯಾ ದೇಶದ ಐತಿಹಾಸಿಕ ಭೌಗೋಳಿಕ ಲಕ್ಷಣಗಳನ್ನು ಆಧರಿಸಿ, ಆಲೋಚಿಸಿ ಅವುಗಳನ್ನು

ಬಿಂಬಿಸುವ ಹೆಸರು ಯಾವ ಭಾಷೆಯಲ್ಲೂ ಸಿಕ್ಕಿಲ್ಲ. ಜರ್ಮನಿ ಭಾಷೆಯಲ್ಲಿ ಮಾರ್ಷೆನ್ ಎಂದು, ಇದನ್ನು ಕಥೆ ಅಥವಾ ಮನೆಗತೆ ಎಂದು ಕರೆಯಲಾಗಿದೆ. ಜಗತ್ತಿನ ಜನಪದ ಹಾಗೂ ಶಿಷ್ಟ ಪದದ ಕಥೆಗಳನ್ನೆಲ್ಲ ಒಳಗೊಳ್ಳುವಂಥ ಪದ 'ಮನೆಗತೆ'. ಇದು ಸೀಮಿತ ಅರ್ಥವುಳ್ಳ ಕೆಲವು ಮೌಖಿಕ ಸಂಪ್ರದಾಯದ ಕಾಲ್ಪನಿಕ ಕಥೆಗಳಿಗೆ ಈ ಮಾತಿನ ಅನ್ವಯ ಉಚಿತವಾಗಲಾರದು ''ಮರ್ಷನ್‌ಗೆ ಸಂವಾದಿಯಾಗಿ ಕಿಮೀರತ್'' ಎಂಬ ಪದ ಬಳಸಬಹುದೆಂದು ಸ್ಮಿತ್ ಥಾಂಸನ್ ಅಭಿಪ್ರಾಯಪಡುತ್ತಾರೆ. (ತಿಮಿರೆ-Chimera) ಕಿಮಿರೆ ಎಂದರೆ, ಸಿಂಹದ ತಲೆಯೂ ಆಡಿನ ಹೊಟ್ಟೆಯ ಹಾವಿನ ಗೋಲವುಳ್ಳ ಒಂದು ರಾಕ್ಷಸ ಪ್ರಾಣಿ, ಇಂಥ ವಿಚಿತ್ರ ಕಥೆಗಳನ್ನು ಕೇಳಿ ಈ ಹೆಸರನ್ನು ಸೂಚಿಸಿರಬಹುದು.[೪]

ಕಥೆಗಳು ''ಆಲದ ಬೀಜ ಗಾಳಿಯಲ್ಲಿ ತೂರಿಕೊಂಡು, ಮೈಲಿ, ಮೈಲಿಗಳಾಚೆಯ ಪ್ರದೇಶದಲ್ಲಿ ಚದುರಿಬಿದ್ದು,ಸಸಿಯಾಗಿ ಹುಟ್ಟಿ ಮರವಾಗಿ ಬೆಳೆದರೆ ಅದರ ಮಾತೃಸ್ಥಾನ ಯಾವುದು? ಅದರ ವಿಕಾಸದ ಪ್ರಸಾರಗಳು ಹೇಗಾಯಿತು ಎಂದು ಖಚಿತವಾಗಿ ಹೇಳುವುದು ಕಷ್ಟವಾಗುತ್ತದೆ. ಈ ಕುರಿತ ಅಧ್ಯಯನವನ್ನು ಮೊದಲಿಗೆ ನಡೆಸಿದವರು ಗ್ರೀಮ್‌ಸಹೋದರರು ಎಂಬುದು ಚರ್ಚಿತವಾಗಿರುವ ವಿಷಯ. ಹಾಗೆ ಜಾನಪದವನ್ನು ಶಾಸ್ತ್ರೀಯವಾಗಿ ಸೂಕ್ಷ್ಮವಾಗಿ ವಿಭಜಿಸಿದ ರಾಲ್ಫ್‌ಸ್ಟೀಲ್ ಬಾಗ್ಸ್ ಎಂಬ ವಿದ್ವಾಂಸ ಕಥೆಗಳನ್ನು ಸಾಹಿತ್ಯಿಕ ವರ್ಗಕ್ಕೆ ಸೇರಿಸುತ್ತಾನೆ. ಈ ಹಿನ್ನೆಲೆಯಲ್ಲಿ ಕಟ್ಟಿಕೊಡಲಾದ ರಚನಾ ಕ್ರಮದಲ್ಲಿ ಅನೇಕ ವಿದ್ವಾಂಸರು ಕಥೆಗಳನ್ನು ಸಂಗ್ರಹಿಸಿ ಅಧ್ಯಯನ ಕೈಗೊಂಡಿದ್ದಾರೆ.

ಕಥನ ಕಲೆ ಮಾನವನ ಇತಿಹಾಸದಷ್ಟೇ ಹಳೆಯದಾಗಿದ್ದು ದೇಶದಿಂದ ದೇಶಕ್ಕೆ, ಸಂಸ್ಕೃತಿಯಿಂದ ಸಂಸ್ಕೃತಿಗೆ, ಯುಗದಿಂದ ಯುಗಕ್ಕೆ ನಿರರ್ಗಳವಾಗಿ ಸಾಗರವಾಗುತ್ತ ಸಾಗುತ್ತಲೇ ಇದೆ. ಕಥೆಗಳನ್ನು ಆಯಾ ದೇಶದ ಸಾಮಾಜಿಕ, ರಾಜಕೀಯ, ಆರ್ಥಿಕ, ಸಾಂಸ್ಕೃತಿಕ ಲಕ್ಷಣಗಳನ್ನು ಆಧಾರವಾಗಿಟ್ಟುಕೊಂಡು ವಿಂಗಡನ ಕ್ರಮವನ್ನು ಅನೇಕ ವಿದ್ವಾಂಸರು ಆರಂಭಿಸಿದರು. ಬಾಯಿಂದ ಬಾಯಿಗೆ ಹರಿದು ಬಂದ ಈ ಕಥೆಗಳ ಮೂಲ ಅರಿಯದಿದ್ದರೂ ಜನಪದರಿಗೆ ಅವುಗಳನ್ನು ಕುಂತಲ್ಲೇ ಕತೆ ಕಟ್ಟುವ ಸಾಮರ್ಥ್ಯವಿತ್ತು. ಒಟ್ಟಾರೆ ಈ ಕಥನ ಕ್ರಿಯೆಗೆ ಅಜ್ಜಿಯಿಂದ ಆರಂಭವಾಗಿ ಸುತ್ತ ನೆರೆದಿರುವವರನ್ನು ಕೇಂದ್ರೀಕರಿಸಿ ಕಥೆಗೆ ಹೂರಣವನ್ನು ತುಂಬುತ್ತಿದ್ದರು.

ಕಥೆಗಳಲ್ಲಿ ಅತಿಮಾನುಷ ವಿರೋಧಿಗಳು, ರಮ್ಯಕಥೆಗಳು, ಹಾಸ್ಯ ಕಥೆಗಳು, ಪ್ರಾಣಿ ಕಥೆಗಳು, ಬುದ್ಧಿವಂತಿಕೆ ಕಥೆಗಳು, ಒಗಟಿನ ಕಥೆಗಳು, ಸಂಕೀರ್ಣ ಕಥೆಗಳು, ಸರಳ ಕಥೆಗಳು, ಕಾಲ್ಪನಿಕ ಕಥೆಗಳು, ಇತರೆ ಕಥೆಗಳು ಎಂದು ವಿಂಗಡಿಸಿದ್ದಾರೆ. ಕಥೆಗಳ ಗಣನೀಯ ಸಂಗ್ರಹ ಆಧಾರದ ಮೇಲೆ ಅಧ್ಯಯನಕ್ಕೆ ಅನುಕೂಲವಾಗಿಸಿಕೊಳ್ಳಲು ವಿದ್ವಾಂಸರು ವಿಂಗಡಿಸಿಕೊಂಡಿದ್ದಾರೆ.

ಜನಪದ ಸಾಹಿತ್ಯ ಪ್ರಕಾರದಲ್ಲಿ ಕಥಾ ಪ್ರಕಾರ ಜನಪ್ರಿಯ ಸಾಹಿತ್ಯವಾಗಿದ್ದು, ಜನಪ್ರಿಯತೆಗೆ ಅವುಗಳ ಗುಣಗಳೇ ಕಾರಣವಾಗಿರಬಹುದು. ಕಥಾ ಕ್ಷೇತ್ರದಲ್ಲಿ ಪ್ರಾದೇಶಿಕತೆ, ರಾಷ್ಟ್ರೀಯತೆ, ಮೊದಲಾದ ಸಂಕುಚಿತ ಮನೋಭಾವಗಳು ಬೆಳೆದು ಬಂದಿಲ್ಲ. ಕಾಲ, ದೇಶದ ಬೇಧವಿಲ್ಲದೆ ಎಲ್ಲ ಕಥೆಗಳಲ್ಲಿಯೂ ಕಾಣುವಂಥ ಹಳ್ಳ, ಬಾವಿ, ಕೆರೆ, ಕೋಟೆ, ಕೊತ್ತಲಗಳು ಇತ್ಯಾದಿ ವಿಷಯಗಳು ಕಾಣಬಹುದಾಗಿದೆ. ನಾಡಿನ ಒಂದೊಂದು ಪ್ರಾದೇಶಿಕ ರಚನಾ ವಿನ್ಯಾಸದಲ್ಲಿ ಹಳ್ಳಿಗಳು ಕಥೆಯ ಪಾತ್ರಗಳಾಗಿ ಮುಖ್ಯವಾಗುತ್ತದೆ. ಹಾಗಾಗಿ ಜನಪದ ಕಥೆಗಳಲ್ಲಿ ಕಥೆಗಳು ಸೀಮಿತವಾಗಿ

ಇರುವುದಿಲ್ಲ. ಮಿತಿಗೆ ಒಳಪಡದ ಕಥೆಗಳಲ್ಲಿ ಭಾಷೆಯನ್ನು ಬಿಟ್ಟರೆ ಎಲ್ಲಿಂದ ಎಲ್ಲಿಗೆ ಹೋದರು ಒಂದೇ ರೀತಿಯ ಗುಣಾಂಶಗಳು ಕಂಡುಬರುತ್ತದೆ.

ಎಲ್ಲ ಕಥೆಗಳಲ್ಲಿ ನಾಯಕರು ದೈಹಿಕ ಬಲ ಪರಾಕ್ರಮಗಳಿಂದ, ಬುದ್ಧಿವಂತಿಕೆಯಿಂದ ಅಥವಾ ಅತಿಮಾನುಷ ಶಕ್ತಿಗಳ ಸಹಾಯದಿಂದ ಅಸಾಧಾರಣ ಬಲದಂಥ ಪರೀಕ್ಷೆಗಳನ್ನು ಜಯಸಿದರೆ, ಕಥಾ ನಾಯಕಿಯರು ಪಾತಿವ್ರತ್ಯ ಬಲದಿಂದ ಎಂತಹ ಕಠಿಣ ಪರೀಕ್ಷೆಗಳನ್ನಾದರು ಎದುರಿಸಿ ಬರುತ್ತಾರೆ. ಈ ಮೇಲಿನ ಎಲ್ಲ ಅಂಶಗಳನ್ನು ಆಧಾರವಾಗಿಟ್ಟುಕೊಂಡು ಪ್ರಸ್ತುತ ಕಥಾ ಭಾಗವನ್ನು ಅಧ್ಯಯನಕ್ಕೆ ತೆಗೆದುಕೊಳ್ಳಲಾಗಿದೆ. ಆರಂಭಕ್ಕೆ ಮುನ್ನ ಕೆಲವು ಹಣತೆಗೆ ಸಂಬಂಧಿಸಿದ ಕಥಾ ಸಂಗ್ರಹವನ್ನು ನೋಡಬಹುದಾಗಿದೆ.

**ನಾಕ್ಲೋಕ ನಾಕು ದೀಪ**

ಒಂದೂರಾಗೆ ಹೊಸ್ದಾಗಿ ಮದುವೆಯಾದ ಅಳಿಯಂದ್ರು ಇಬ್ರು ಸೇದೊ ಬಾವಿತಾಕೆ ಕೂಡಿದ್ರು. ಹೆಚ್ಗಟ್ಲೆ ಉಂಡು ಬಂದಿದ್ರು. ಬೀಡಿ ಸೇತ್ತಾ ಕೂತಿದ್ರು. ಒಬ್ಬ ಆ ಊರ ಗೌಡನ ಅಳಿಯ. ಸ್ವಲ್ಪ ಧೀಮಾಕಿನೋನು ಇನ್ನೊಬ್ಬ ಕಡು ಬಡವ್ನ ಅಳಿಯ. ಒಳ್ಳೇವ್ನು. ಬುದ್ಧಿವಂತ.

ಊರ ಗೌಡ ಅನುಕೂಲ್ವಾಗಿ ಇದ್ದೋನು. ಅಳಿಯನಿಗೆ ಬೇಕಾದ್ದು ಬೇಡಾದ್ದೆಲ್ಲ ಅವರ ಮನೇಲಿ ಅಟ್ಟಿಕ್ಕೋರು. ಆದ್ರೆ ಈ ಬಡವನ ಅಳಿಯನಿಗೆ ತನ್ನ ಮಾವ್ನ ಮನೆ ಅಂಬಲಿ ತುಂಬೆ ಸೊಪ್ಪೆ ದೊಡ್ಡು. ಇಬ್ರು ಅದು ಇದು ಮಾತಾಡ್ತಾ ಊಟದ ಮಾತ್ಗೆ ಬಂದ್ರು. ಈ ಗೌಡರ ಅಳಿಯ ಬಡವನ ಅಳಿಯನೆದ್ರಿಗೆ ನಮ್ಮತ್ತೆ ಮನೇಲಿ ಅದು ಮಾಡಿದ್ರು ಇದು ಮಾಡಿದ್ರು, ನಾನು ಅದನ್ನುಂಡೆ ಇದನ್ನುಂಡೇಂತ ಕೊಚ್ಗೆಂತಾನ. ಅಷ್ಟೂ ಸಾಲ್ದೂಂತ

"ನಿಮ್ಮತ್ತೆ ಮನೇಲಿ ಏನೂಟ?" ಅಂತ ಕೇಳ್ತಾನೆ

ಇಲ್ಲಿ ತನಕ ಸುಮ್ನೆ ಕೇಳ್ತಾಯಿದ್ದ ಈ ಬಡವನ ಅಳಿಯ

''ಅದೇನೂಟಾಂತ ಹೇಳ್ಲಿ ಬಿಡಯ್ಯ, ಲೋಕೆಲ್ಲ ಕಂಡು ಉಂಡಿರೋದು ಅದು. ನಮ್ಮತ್ತೆ ಮನೇಲಿಮಾಡಿದ ಊಟಾಂದ್ರೆ ಅದು ನನ್ ಜೀವ್ ಮಾನ್ದಲ್ಲೆ ಉಂಡಿರ್ಲಿಲ್ಲ ನೋಡು. ಅದ್ರ ಹೆಸರಾದ್ರು ನಿನ್ಗೆ ಗೊತ್ತೇನಯ್ಯ :

ನಾಕ್ಲೋಕ ನೂಕ್‌ದೀಪ

ಏಳು ಸುತ್ತಿನ ಇಡ್ಲಿ

ಚಂದ್ರುಗಿರಿ ಕಾಯ್ಹಾಲು

ಉಣ್ತಾಇದ್ರೆ ಇನ್ನೂ ವಸಿ ಉಣ್ಣಾನಾ ಅನ್ನೋ ಹಂಗಾಗದು" ಅಂತಾನೆ ಲೊಟ್ಟೆ ಹೊಡಿತ. ಇದೇನೂ ಈ ಗೌಡರ ಅಳಿಯಂಗೆ ಅರ್ಥಾಗ್ಲಿಲ್ಲ. ಕೇಳಿದ್ರೆ ಅವಮಾನಾಂತ ಸುಮ್ನಾದ.

ಈ ಬಡವನ ಅಳಿಯ ಹಂಗೇಳಿದ್ರ ಅರ್ಥ ಏನಪಾಂದ್ರೆ-ಮನೆಯೊಳಗೆ ಕೂತು ಮೇಲೆ ನೋಡಿದ್ರೆ ಆಕಾಶಕಾಣೋ ಮುರುಕು ಮನೇನ 'ನಾಕ್ಲೋಕ' ನಾಲ್ಕು ಲೋಕ ಎಂದೂ, ಸೀಮೆ ಎಣ್ಣೆಗೂ ಗತಿಯಿಲ್ದ ಅತ್ತೆ ಮನೆಯೋರು, ಅಳಿಯ ಊಟಮಾಡೂವರ್ಗು ಬತ್ತಿ ಎತ್ತುತ್ತ ದೀಪ ಉರಿಸೋದನ್ನ-'ನೂಕ್ ದೀಪ' ಎಂದೂ ಆರಕದ ಅಕ್ಕಿಯಿಂದ

ಮಾಡಿದ ಮುದ್ದೆಯನ್ನು -'ಏಳ್‌ಸುತ್ತಿನ ಇಡ್ಲಿ' ಎಂದೂ, (ಆರಕದ ಅಕ್ಕಿಯನ್ನು ಏಳು ಸಾರಿ ನೀರಿನಲ್ಲಿ ತೊಳೆದು ಅಡಿಗೆ ಮಾಡುತ್ತಾರೆ.) ಹುರುಳಿ ಕಾಳಿನಿಂದ ಮಾಡಿದ ಸಾರನ್ನು 'ಚಂದ್ರಗಿರಿಕಾಯ್ಹಾಲು' ಅನ್ನೊದನ್ನ ಹಂಗ್ ಒಗಟ್ಮಾಡಿ ಹೇಳಿದ್ವ.

**ದೀಪವಿತ್ತು, ಬೆಂಕಿ ಇಲ್ಲ**

ಹಲಸಿನ ಹಣ್ಣು ನಂಜು ಅಂತ ಹೇಳಿ ಹಾಲಕ್ಕಿ ಒಕ್ಕಲಿಗರು ಅದನ್ನು ತಿನ್ನುತ್ತಿರಲಿಲ್ಲ. ಒಂದು ಸಲ ಮಳೆ ಸರಿಯಾಗಿ ಆಗದೆ ಬರಗಾಲ ಬಂತು. ಹಾಲಕ್ಕಿ ಒಕ್ಕಲಿಗರ ಗಂಡಸರು ಒಂದು ದಿನ ಬೇಟೆಯಾಡಲಿಕ್ಕೆ ರಣಗೊಳಿ ಬೈಲಿನ ಹೂವಿನ ಹಿತ್ತಲಿನ ಕಡೆಗೆ ಹೋದರು.

ಆ ದಿವಸ ಹೊಲ (ಬೇರೆ) ಆಗಲಿಲ್ಲ, ಬೇಟೆ ಸಿಗಲಿಲ್ಲ, ಹಲಸಿನ ಮರದಲ್ಲಿ ಹಣ್ಣಾಗಿತ್ತು ಅದನ್ನು ಪ್ರಧಾನ ಗೌಡನು ನೋಡಿದನು. 'ಹಸಿವಾಗಿ ಪ್ರಾಣಹೋಗುತ್ತಿದೆ. ಹೇಗಾದರೂ ಪ್ರಾಣ ಉಳಿಸಿಕೊಳ್ಳಬೇಕು. ಪ್ರಾಣ ಉಳಿಸಿ ಕೊಳ್ಳಲಿಕ್ಕೆ ಇದನ್ನಾದರೂ ತಿಂದುಕೊಳ್ಳೋಣ' ಅಂತ ಹೇಳಿದನು

ಹಲಸಿನ ಹಣ್ಣನು ಕೊಯ್ದರು. ಹಸಿವೆಯಿಂದ ಕಂಗಾಲಾದ ಅವರು ಅದನ್ನು ಗಪಗಪನೆ ತಿಂದು ಪ್ರಧಾನ ಗೌಡನು, 'ಅಯ್ಯೋ ನಾಮ್ ವಂದ್‌ತಪ್ ಮಾಡ್ ಬಿಟ್ಟರಲೊ ಬಾವಾ ಅಂದನು ಉಳಿದವರು ಹಾಂಗಾದ್ರೆ ಏನು?' ಅಂತ ಕೇಳಿದರು

ಪ್ರಧಾನ ಗೌಡ ಹೇಳಿದನು, 'ತಿನಳಾರ್ದೆ ಇದ್ದ ಹಣ್ಣ ಅಂತೂ ನಾಮು ತಿಂದ್ರು, ನಮ್ಮ ಪಿರ್ತಿರಾಜರಿಗೂ ಕೊಡ್ದೆ ನಾಮ್ ತಿಂದ್ರು, ಈಕಾರೆ ನಮ್ದು ಯೆರೆಡ್ ತಪ್ಪಾಯ್ತು. ಈ ಸೊಲೆನೆ ಇಟ್ ರುಚಿತು ಅಂದ್ ಮೇಲೆ ಈ ಬೇರೆಗುಂಜುಯೆಲ್ಲಾ ಯೆಟ್ ರುಚಿತ್ತೊ ಬಾವಾ! ನಾಮು ನಮ್ಮ ರಾಜ್ನ ಮುಂದ್ ತಕಂಡ್ ಹೋಗ್ ಇಡ್ವನಿ' ಅಂದನು.

ಬುಟ್ಟಿಯಲ್ಲಿ ಬೇಳೆ ಗುಂಜನ್ನು ಹಾಕಿಕೊಂಡು ಗೌಡರು ತಮ್ಮ ಚಂದಾವರ ರಾಜ್ಯ ರಾಜನ ಮುಂದೆ ತಕ್ಕೊಂಡು ಹೋಗಿ ಇಟ್ಟರು.

ರಾಜನು, 'ಪ್ರಧಾನ ಗೌಡರೆ, ಇದೇನು?' ಅಂತ ಕೇಳಿದನು 'ಇದು ಹಳಶನ ಹಣ್ಣ ಗುಂಜು. ಬೇಲಿ ಸೂಲಿ ನಾಮು ತಿಂದ್ರು. ನಿಮಗೆ ತೆಲಿಸದೆ ನಾಮು ತಿಂದ್ರು, ನಮ್ಮದು ತಪ್ಪಾಯ್ತು, ಸೊಲೆನೆ ಇಟ್ ರುಚಿ ಇತ್ತು. ಬೇಲೆ ಗುಂಜು ಎಟ್ ರುಚಿತ್ತೊ ದೇವ್ರೆ ಬಳ್ಳ.' ಅಂತ ಹೇಳಿ ಕೈಮುಗಿದರು. ಬೇಳೆ ಗುಂಜಿನ ಮೇಲೆ ನೊಣಗಳು ಬಂದು ಮುತ್ತಿದವು.

ರಾಜನಿಗೆ ಸಿಟ್ಟು ಬಂತು, ಅವನಿಗೆ ಹದಿನೈದು ದಿನ ಕಾರಾಗ್ರಹವಾಸದ ಶಿಕ್ಷೆಯನ್ನು ವಿಧಿಸಿದನು. ಅಡಿಗೆ ಮಾಡಲಿಕ್ಕೆ ಅವರಿಗೆ ಅಕ್ಕಿ ಬೇಳೆ ಮುಂತಾದ ಎಲ್ಲ ಸಾಮಾನುಗಳನ್ನೂ ರಾಜನು ಕೊಡಿಸಿದನು. ನೀರು, ಸೌದೆ ಸಹ ಕೂಡಿಸಿದ್ದನು. ಕಂದೀಲನ್ನು ಹಚ್ಚಿಸಿ ದೀಪದ ಲೆಕ್ಕಕ್ಕೆ ಕೊಟ್ಟಿದ್ದನು.

ಎಂಟನೆ ದಿವಸ ಹೆಬ್ಬಾರ ಎಂಬ ವೈದ್ಯನನ್ನು ಅವರ ಆರೋಗ್ಯ ಪರೀಕ್ಷೆಗಾಗಿ ಕಾರಾಗೃಹಕ್ಕೆ ಕಳಿಸಿದನು. ಹೆಬ್ಬಾರನು ಹೋಗಿ, 'ಪ್ರಧಾನ ಗೌಡರೇ,' ಕುಟ್ಲ ಗೌಡರೇ, ಅಂತ ಕರೆದನು. ಒಬ್ಬರಿಗೂ ಎದ್ದು ನಿಲ್ಲುವ ತಾಕತ್ತಿರಲಿಲ್ಲ.

ಎಂಟು ದಿನ ಅಡಿಗೆ ಮಾಡಿರಲೇ ಇಲ್ಲ; ಅವರು 'ದೀಪವಿತ್ತು, ಬೆಂಕಿಳ್ಳ, ಅಡ್ಗಿ ಸಾಮಾನಿದ್ರೂ ಅಡ್ಗಿ ಮಾಡ್ಕನಿಳ್ಳ, ನಮ್ಗೆಳ್ಳ ಉಪಾಸ' ಅಂದರು ಅವರು ರಾಜನು ಇದನ್ನು ತಿಳಿದು ಅವರ ಹೆಡ್ಡತನಕ್ಕೆ ನಕ್ಕು ಅವರಿಗೆ ಭೂಮಿ ಉಂಬಳಿ ಕೊಟ್ಟನು.

**ದೀಪದ ಮಲ್ಲಿ**

ಒಬ್ಬರಾಜನ್ಗೆ ಒಬ್ಳೆ ಮಗ್ಳು, ಮೂರ್ ಕಂಡ್ಗ ವೂ ಆಸಿ, ಮೂರ್ ಕಂಡ್ಗವೂ ಒಚ್ಚೆ ಪಿರೂತಿಯಿಂದ ಸಾಕಿದ್ದ. ನಗ್ನ ಮಾಡುಕೆ ಗಂಡ್ ಉಡುಕ್ತಿದ್ದ.

ಇನ್ನೊಂದ್ ಪಟ್ನದಾಗೆ ಒಬ್ಬ ರಾಜನ್ಗೆ ಒಬ್ನೇ ಮಗ, ಒಬ್ಬ ಮಗಳಿದ್ರು, ಮಗನ್ಗೆ ಮಗ ಮಾಡುಕೆ ಈ ರಾಜ್ನೂ ಎಣ್ ಉಡುಕ್ತಿದ್ದ.

ಇಬ್ರು ರಾಜ್ರು ಕಡೇವ್ರೂ ಎಣ್‌ಗೆ ಗಂಡು, ಗಂಡ್ಗೆ ಎಣ್ಣು ಉಡುಕೆ ಅಂತ ಚಿತ್ರಪಟ ತಕ್ಕಂಡು ವೊಂಟ್ರು, ಅಲ್ಲೊಂದ್ ತೊರೆ, ತುಂಬಿ ಅರಿತಿತ್ತು. ಸಂದೆ ಆಯ್ತು, ತೊರೆ ಇಳಿಲಿ, ಬೆಳ್ಕರಿತ್ಲೆ ವೋಗ್ಮಾ ಅಂತ ತೊರೆ ಆಕಡೆ ಈಕಡೆ ಗುಡಾರ ಅಕ್ಕಂದು ತಂಕ್ಕಂದ್ರು.

ಬೆಳ್ಕರಿತು, ಮುಖ ತೊಳಿಕೆ ಅಂತ ಏಡ್ ಕಡೇವ್ರೂ ತೊರೆತಾಕೆ ಬಂದಾಗ ಒಬ್ಬರಿಗೊಬ್ಬರು ಇಚಾರಿಸ್ಕಂಡ್ರು, 'ನಮ್ಗೊಂದ್ ಗಂಡ್ ಬೇಕಿತ್ತು' ಅಂತ ಇವರಂದ್ರು 'ನಮ್ಗೊಂದ್ ಎಣ್ ಬೇಕಿತ್ತು' ಅಂತ ಅವರಂದ್ರು, ಚಿತ್ರ ಪಟ ನೋಡಿದ್ರು. ಸಮಾದಾನ ಆಯ್ತು. ಎಣ್ಣಿನ್ಕಡೇರು ''ನಾಮು ಮೂರ್ ಕಂಡ್ಗ ವೂ ಆಸಿ, ಮೂರ್ ಕಂಡ್ಗವೂ ಒಚ್ಚೆ ಸಾಕ್ತಿಮಿ ಇದ್ಕಿಂತ ಚಂದಗಿ ಮಡಿಕತಿಮಿ ಅಂತಂದ್ರೆ ಎಣ್ ಕೊಡ್ತಿಮಿ'' ಅಂದ್ರು, ಅದ್ಕೆ ಗಂಡಿನ್ಕಡೇರು ''ನೀಮು ಮೂರ್ ಕಂಡ್ಗ ವೂ ಆಕಿದ್ರೆ ನಾಮು ಆರ್ ಕಂಡ್ಗ ವೂ ಆಕ್ತಿಮಿ'' ಅಂದ್ರು. ಒಪ್ಪಂದ ಆಯ್ತು.

ಮಳೆರಾಯ ಚಳೇವ್ ಕೊಟ್ಟ. ಗಾಳಿರಾಯ ದೂಳ್ ಕೊಡವಿದ. ಆಕಾಸ್ದಸ್ಟು ಚಪ್ಪರ ಆಕಿ, ಬೂಮ್ತಾಯ್ನಸ್ಟ ಆಸೆ ಬರ್ಸಿ ಐಬೋಗದಿಂದ ನಗ್ನ ಮಾಡಿದ್ರು. ಗಂಡನ್ಮನ್ಗೆ ರಾಜಕುಮಾರಿ ಬಂದ್ಳು.

ಗಂಡ ಎಂಡ್ತಿರು ವೈನಾಗಿದ್ರು. ಆರ್ ಕಂಡ್ಗ ಮಲ್ಗೆ ವೂ ಆಸ್ಕಂಡು, ಆರ್ ಕಂಡ್ಗ ಮಲ್ಗೆ ವೂ ಒಚ್ಕಂಡೇ ಸುಕ್ವಾಗಿ ಕಾಲ ಕಳಿತಿದ್ರು. ಇಂಗೇ ಇರ್ಬೇಕಾರೆ ರಾಜ್‌ಕುಮಾರಿ ಕನಸ್ನಲ್ಲಿ ಇದಿಯಮ್ಮ ಬಂದು ''ಇಸ್ಟ್ ಐಸಿರಿ ಅದಲ್ಲ ನಿಂಗೆ, ಯಾರ್ರೂ ಇಲ್ಲದ್ದು, ಮೂರ್ ಕಂಡ್ಗ ಸಾಮೆ ವೊಟ್ಟ ತಿನ್ನುರಾರು?'' ಅಂತೇಳಿ ಮಲ್ಗೆ ವೂ ಮ್ಯಾಲಿ ಮಲಿಕತಿದ್ದವ್ಳು ನಗ್ನಮುಳ್ ಮ್ಯಾಲೆ ಮಲಿಕಬೇಕಾಯ್ತು. ಇದಿಯಮ್ಮ ಬರುದು, ಮಲ್ಗೆ ವೂ ತಗಿದು, ನಗ್ನಮುಳ್ ಆಸುದು, ಮಾಯಾಗುದು ಯಾರ್ರೂ ಕಾಣ್ತಿರ್ನಿಲ್ಲ. ರಾಜ್ ಕುಮಾರ್ಗೆ ಮಾತ್ರ ಕಾಣ್ತಿತ್ತು. ರಾಜ್ ಕುಮಾರಿಗೆ ದಿನಾ ಇದೆ ಕೊರ್ಗು. ಕೊರ್ಗಿ ಕೊರ್ಗಿ ನಮ್ದು ನಮ್ದು ಒಂದ್ ಬೆಳ್ ಗಾತ್ರ ಆಗ್ಬುಟ್ಳು. ಇದಿಯಮ್ಮ ಬಂದೋಗುದ, ನಗ್ನಮುಳ್ಳ ಆಸೂದ ಇವ್ಳು ಯಾರ್ರೂ ಯೇಳ್ನಿಲ್ಲ. ತನ್ನ ಆಣೆ ಬಾರಾವು, ಇಂಗಾಗ್ಬುಡ್ತಲ್ಲ ಅಂತ ತಾನೇ ಕೊರಗ್ತಿದ್ಳು.

ಗಂಡನ್ಗೆ ಚೋಜ್ಗ, ಎಡ್ತಿಯಾಕೆ ನಮೀತಾ ಅವ್ಳೆ ಅಂತ. ಒಂದಪ ಕೇಳ್ದ: ''ಅಲ್ಲ ಉಣ್ಣುದ್ ಉಣ್ತೆಯಾ, ತಿನ್ನೊದ್ ತಿನ್ತಿಯಾ. ತೌರ್ಗಿಂತ ಚಂದಾಗಿ ಮಡಿಕಂದಿಮಿ. ಅಂಗಿದ್ರು ನಮ್ದು ನಮ್ದು ನರನಾಳೆ ಕಡ್ಡಿ ಅಂಗಾಗ್ತಿದ್ದಿಯಲ್ಲ? ಯಾಕೆ?'' ಅತ್ತೆ ಮಾವ ದಾದಿರೂ ಇಂಗೇ ಕೇಳಿದ್ರು. ಇದಿಯಮ್ಮನೇ ಕೊಡಬಾರ್ದ ಕಸ್ಟ

ಕೊಡ್ತಿರ್ಬೇಕಾರೆ ನರಮನಸರ್ಗೇಳಿ ಏನ್ ಬತ್ತದೆ, ಸತ್ತೋಗುದೇ ವಾಸಿ ಅಂತ, ಕೊಂಡ್‌ಕೆಂಡ ಆಗ್ನೇಬೇಕು ಅಂತ ಅಟಯಿಡಿದ್ಳು.

ಇನ್ನೇನ್ ಮಾಡಾರು ಇವ್ಳು ಏಳ್ದಂಗೇ ಮಾಡಿದ್ರು. ಒಸ ಸೀರೆ ತಂದು ಉಡಿಸಿದ್ರು. ಆರ್‌ಸ್ನ ಕುಂಕ್ಮ ಅಚ್ಚಿದ್ರು. ಮಲ್ಗೆ ವೂ ಮುಡಿಸಿದ್ರು. ಸಿರಿಗಂದದ ಸೌದೆ ತಂತು ರಾಸಿ ಮಾಡಿದ್ರು. ಇವ್ಳ ಸೌದೆ ಮದ್ಯೆಕೆ ಕೂರ್ಸಿ ಬೆಂಕಿ ಇಟ್ಬುಟ್ರು. ಆಗ ಯಾರ್ಗೂ ಕಾಣ್ದಂಗೆ ಒಂದೇ ಚೋಜ್ಗ ನಡ್ದೋಯ್ತು. ಸೌದೆ ಒಳಿಕೆ ರಾಜ್‌ಕುಮಾರಿ ಕೂರ್ಸಿದ್ದಾಗ ಗಾಳಿ ಬಂದು ಯಾರ್ಗೂ ಕಾಣ್ದಂಗೆ ಮ್ಯಾಕೆ ಆರಿಸ್ಕೊಂಡೋಗಿ ಕಾಡಲ್ಲಿ ಬುಡ್ತು. 'ಅಯ್ಯೋ ದೇವ್ರೇ ಕೊಂಡ್ ಕೆಂಡ ಆಗ್ಮಾಂದ್ರೆ ಆಗ್ನಿಲ್ವಲ್ಲ' ಅಂತ ದುಕ್ಕ ಪಟ್ಟು.

ಗಾಳಿ ಬುಟ್‌ಮ್ಯಾಕೆ ಸುತ್ತ ನೋಡಿದ್ಳು. ಕಾಡು, ಅಲ್ಲೊಂದು ಗವಿ, ವುಲಿಯೋ ಸಿಮ್ಮವೋ ತಿಂದಾಕ್ಬುಡ್ಲಿ, ಅಂಗಾರ ಸತ್ತೋಗ್ಮ ಅಂತ ಗವಿ ವೊಳಕ್ಕೋದ್ಳು. ನೋಡ್ತಾಳೆ, ಗವಿಲಿ ವುಲಿ ಸಿಮ್ಮ ಇಲ್ಲ. ಮೂರ್ ಕಂಡ್ಗಸಾಮೆ ವೊಟ್ಟಿದೆ. ವೊನ್ನೆ, ಮಡ್ಕೆ ಅವೆ! ಇದಿಯಮ್ಮ "ಮೂರ್ ಕಂಡ್ಗ ಸಾಮೆ ವೊಟ್ಟು ತಿನ್ನೋರ್ ಯಾರು?" ಅಂತ ಕನ್ಸಲ್ಲಿಯೇಳ್ತಿದ್ದು ಇದ್ಯೇನೋ ಅನ್ಕಂಡ್ಳು. ಇನ್ನೇನ್ ಮಾಡಾಳು? ಸಾಮೆ ವೊಟ್ನೇ ಕುಟ್ಟಿ ಇಟ್ಮಾಡ್ಕಂಡುತಿನ್ತಾ ಕಾಲಕಳಿತಿದ್ಳು, ಮೂರ್ ನಾಕ್ ವರ್ಸ ಇಂಗೇ ರಳ್ದೋಯ್ತು. ಸಾಮೆ ವೊಟ್ಟೆಲ್ಲಾ ತೀರೋಯ್ತು.

ಒಂದಿನ "ತಾಳು, ಮೂರ್ನಾಕ್ ವರ್ಸ ಆಯ್ತು ನರ್ಮನುಸರ ಮುಕನೇ ನೋಡ್ನಿಲ್ಲ. ಈಗಾನ ನೋಡ್ಮ" ಅಂತ ಗವಿಯಿಂದ ವೊರಕ್ಕೆ ಬಂದು ಬೆಟ್ಟ ಅತ್ತಿದಳು. ಬೆಟ್ಟದ ಕೆಳ್ಗೆ ಬಂಜಾಳರು ಸೌದೆ ಕಡಿತಿದ್ರು. 'ಇವ್ರ ಜೊತ್ಗೋದ್ರೆ ಯಾವ್ದಾರ ಊರ್ಗೆ ಸೇರ್ಕಬೈದು' ಅಂತ ಅನ್ಕಂಡು ಬೆಟ್ಟದಿಂದ ಇಳಿದ್ಳು. ಬಂಜಾಳ್ರು ಸೌದೆ ಕಡ್ಕಂಡು ಮಾರುಕೆ ಬೆಂಗಳೂರಂತ ಪೇಟೆ ಕಡ್ಗೆ ವೊಂಟ್ರು. ಬಂಜಾಳ್ರು ವೋತಾ ಅವ್ರೆ. ಅವರ್ಗೆ ಕಾಣ್ದಂಗೆ ಇವ್ಳೂ ಬತ್ತ ಅವ್ಳೆ.

ಇಂಗೇ ವೋತಿರ್ಬೇಕಾರೆ ಕಾಡಲ್ಲಿ ಸಂದೆ ಆಗೋಯ್ತು. ಒಂದ್ ಮರ್ದ ಕೆಳ್ಗೆ ತಂಕ್ಕಂದ್ರು. ಇವ್ಳು ಬಂಜಾಳರ್ಗೆ ಕಾಣ್ದಂಗೆ ಒಂದು ಗೀಡಿದ್ದಾವು ಮಲಿ ಕಂಡ್ಳು. ಆಗ ಅವಳ್ ತಾಕೆ ಒಂದುಲಿ ಬರೊದ್ ಕಾಣಿಸ್ತು. ಅದಾರೆ ತಿನ್ಕಲಿ ಅಂತ ಸುಮ್ಕೆ ಇದ್ಳು. ಉಲಿ ಬತ್ತು. ಈಯಮ್ಮ್ನ ಮೂಸ್‌ನೋಡಿ ಮುಂದ್‌ಕೋಯ್ತು. 'ಉಲೀನೂ ತಿನ್ದೆ ವೊಯ್ತಲ್ಲ' ಅನ್ಕಂಡ್ಳು ಸ್ಯಾಕಾಡಿದಳ್ಳು, ಇವಳ ಮಾತು ಬಂಜಾಳರ್ಗೆ ಕೇಳಿಸ್ತು. ಎದ್ದು ನೋಡ್ತಾರೆ. ಅವಳ್ಕಡೆಯಿಂದ್ಲೇ ಒಂದುಲಿ ವೋತಾ ಅದೆ. ಎದರಿ ಅಪ್ಪಳ್ಕೋದ್ರು. ಆಗವ್ರು "ಎಂತಾ ಸತ್ಯವಂತೇ, ನಿನ್ನಿಂದ ವುಳಿ ನಮ್ಗೂ ಬುಟ್ತು. ನಿಂಗೇನ್ ಕಸ್ಟ. ಯಾಕ್ ಸ್ಯಾಕಾಡ್ತೆ, ನೀನ್ಯಾರು?" ಎಂದು ಕೇಳಿದ್ರು "ನಂಗೇನೂ ಕಸ್ಟ ಇಲ್ರಪ್ಪಾ, ಯಾರ್ ಮನ್ಗಾರ ಸೇರ್ಸಿ. ಕೆಲ್ಸ ಮಾಡ್ಕಂಡಿರ್ತೀನಿ. ಒಂದ್ ತುತ್ತು ಇಟ್ಟು ಒಂದು ಸುತ್ತು ಬಟ್ಟೆ ಕೊಟ್ರೆಸಾಕು. ಅಸ್ಟ್ ಮಾಡಿ ಪುಣ್ಯ ಕಟ್ಕಳಿ" ಅಂತ ಕೇಳ್ಕಂಡ್ಳು, ಆಗ್ಲಿ ಅಂತ ಅವ್ರು ಕರ್ಕಂಡೋದ್ರು.

ಅಲ್ಲೊಂದು ಬೆಂಗಳೂರಂತ ಪಟ್ನ. ಬಂಜಾಳ್ರು ಸೌದೆ ಆಕ್ತಿದ್ದ ಆರ್ಮನ್ಗೋಗಿ, "ಅಮ್ಮ ಇವ್ಳ ಕೂಲಿಗಿರಿಸ್ಕಳಿ" ಅಂತ ಯಜ್ಮಾನಿನ ಕೇಳ್ಕಂಡ್ರು. ಆಗ್ಲಿ ಅಂತ ಇರಿಸ್ಕಂಡ್ರು. ಬಂಜಾಳ್ರು ವೊಂಟೋದ್ರು. ಅರಮಲ್ಲಿ ಇವ್ಳುಯೇಳ್ದ ಕೆಲ್ಸನೆಲ್ಲ ಮಾಡ್ಕಂಡಿದ್ಳು. ಒಂದಲ್ಲ ಒಂದಿನ ಯಜಮಾನ್ತಿ ಮಗ ರೊಚ್ಚಿ ಇಡೀತು. ಅರ್ಮನೆ ತೋರ್ಸಿ ಸುಮ್ನಿರ್ಸು ಅಂದ್ರು. ಇವ್ಳು ಮಗ ಎತ್ಕಂಡು ಅದು ಇದು ತೋರಿಸ್ತದ್ಳು. ಅಲ್ಲೊಂದು ನವಿಲಕ್ಕಿ ಮಗುನ ಕತ್ತಿನಾರನ ಎತ್ಕಂಡು

ಬಾಯಿಗಾಕತು. ಯಜಮಾನ್ತಿತಾಕೆ ಬಂದು ಇಂಗಿಂಗಾಯ್ತು ಅಂದ್ಳು. ಯಜಮಾನ್ತಿ ನಂಬ್ಳಿಲ್ಲ. ''ಕಳ್ಳಮುಂಡೇ ಸುಳ್ಳೇಳ್ತಿಯಾ ನೀನೇ ಅವಿಸ್ಕಂದಿದ್ದೀ. ತಂದ್ಕೊಡು'' ಅಂತ ಸಿಕ್ಸೆ ಕೊಟ್ರು. ''ದೇವ್ರಾಣ್ಗೂ ನವಿಲಕ್ಕಿ ನುಂಗ್ಕತು'' ಅಂದ್ಳು. ಕೇಳ್ಳಿಲ್ಲ. ಸಣ್ಣ ಪುಟ್ಟ ಸಿಕ್ಸೆ ಕಂಟ್ರೆ ಬಗ್ಗಲ್ಲ ಅಂತ ಯಜಮಾನ್ತಿ ದೊಡ್ಡ ಸಿಕ್ಸೆ ಕೊಟ್ಳು. ಇವಳ ತಲೆ ಬೋಳ್ಸಿ, ತಲೆ ಮ್ಯಾಲೆ ಸಗಣಿ ಆಕ್ಸಿ, ಅದರಮ್ಯಾಗೆ ದೀಪ ಮಡಿಗ್ಸಿ ಎಣ್ಣೆ ಆಕ್ಸಿ ದೀಪ ಹಚ್ಚಿಸಿದ್ಳು. ಬೆಳಿಗ್ಗೊಇತ್ ಮನೆಗೆಲ್ಸ ಮಾಡುದು, ನಾತ್ರಿವೊತ್ತೆಲ್ಲ ಕೇಳಿದ್ದಾತೆಲ್ಲ ದೀಪ ಒತ್ಕೊಂಡು ನಿಂತ್ಕಳದು. ಎಲ್ಲೂ ದೀಪದ ಮಲ್ಲಿ, ದೀಪದ ಮಲ್ಲಿ ಅಂತ ಕರಿತಿದ್ರು. ಇಂಗೇ ಕಾಲ ಕಳಿತಿತ್ತು.

ಒಂದಲ್ಲ ಒಂದಿನ ಯಜಮಾನ್ತಿ ಅಣ್ಣ ಬಂದ. ಇವ್ನೇದಿಪದ ಮಲ್ಲಿ ಗಂಡ. ಆದ್ರೆ ಅವನ್ಗೆ ಗೊತ್ತಿಲ್ಲ. ಬಂದವ್ನು ತಂಗಿ ಮಲ್ಲಿ ಊಟ ಮಾಡ್ಕಂಡು ಎಲೆ ಅಡ್ಕೆ ಆಕೋರೆ ಕುತ್ತಂಡ, ಯಜಮಾನ್ತಿ ಅಣ್ಣ ಎಲೆ ಆಕೋತಾಕೆ ಬೆಳ್ಕು ಮಾಡು ಅಂತ ದೀಪದ ಮಲ್ಲಿ ಕಳಿಸಿದ್ಳು. ದೀಪದ ಮಲ್ಲಿಗೆ ಮಲ್ಲಿಗೆ ಅವ್ನು ಗಂಡ ಅಂತ ಗೊತ್ತಾಗೋಯ್ತು, ದುಕ್ಕ ನುಂಕಂಡು ಸುಮ್ಕೆ ದೀಪವೊತ್ಕಂಡು ನಿಂತ್ಕಂಡ್ಳು, ಅವನು ದೀಪದ ಮಲ್ಲಿ ನೋಡಿದ್ರೂ ಎಡ್ತಿ ಅಂತ ಗುರ್ತುಯಿಡಿನಿಲ್ಲ. ಎಡ್ತಿ ಕೊಂಡ್‌ಕೆಂಡ ಆಗ್ಬುಟ್ಟಿ ಅಂತ್ಲೇ ನಂಬ್ಕಂಡಿದ್ದ, ತಪ್ಪು ಮಾಡಿದ್ಕೆ ಸಿಕ್ಸೆ ಅನುಭವಿಸ್ತಿರೋ ಆಳು ಅನ್ಕಂಡು ''ದೀಪದ ಮಲ್ಲಿ ಒಂದು ಕತೆಯೇಳು'' ಅಂದ

''ನಂಗೆ ಎಂತ ಕತೆ ಬಂದುದು ಮಾಸಾಮಿ, ಬರಕಿಲ್ಲ''

''ಎಂತದಾರ್ ಒಂದ ಯೇಳ್ಲೇ ಬೇಕು''

''ಮಾಸಾಮಿ, ಮುಂದೆ ಬರೂದ್ ಯೇಳ್ಲೇ. ಇಂದೆ ಆದ್ದ ಯೇಳ್ಲೊ?''

''ಮುಂದೆ ಬೂದ್ ಯಾರ್ ಕಂಡವ್ರೇ, ಇಂದೆ ಆದ್ದೇ ಯೇಳು''

''ಬೂ ಕಸ್ಟದ ಕತೆ''

''ಆಗ್ಲಿ ಯೇಳು''

ದೀಪದ ಮಲ್ಲಿ ತಾನು ಉಟ್ಟಿ ಬೆಳೆದ್ದು, ನಗ್ನ ಆದ್ದು, ಇದಿಯಮ್ಮ ಕನಸ್ನಲ್ಲಿ ಕಾಣಿಸ್ಕಂಡು ನಗ್ನಮುಳ್ಳು ಆಕಿ ಸಿಕ್ಸೆ ಕೊಟ್ಬುದ್ದು, ಕಸ್ಟ ತಡಿನಾರ್ದೆ ಕೊಂಡ್‌ಕೆಂಡ ಆಗ್ಮಾಂತ ಸಿರಿಗಂದದ ಸೌದೆವೊಳ್ಗೆ ಕೂತ್ಕಂಡುದು. ಗಾಳಿ ಮಾಯಮಾಡಿ ಕಾಡಲ್ಲಿ ಬುಟ್ಟಿದ್ದು, ಸಾಮೆ ವೊಟ್ಟು ತಿಂದು ಬದುಕಿದ್ದು. ಬಂಜಾಳ್‌ರೊಂದ್ಗೆ ಬಂದು ಅರ್ಮಲ್ಲಿ ಸೇರ್ಕಂಡದ್ದು, ಮಗು ಆಡಿಸ್ತಿದ್ದಾಗ ನವಿಲಕ್ಕಿ ಮುತ್ತಿನಾರ ನುಂಗಿದ್ದು, ಕಳ್ಳಮುಂಡೆ ಅಂತ ಬೈಯಿಸ್ಕಂಡು, ಸಿಕ್ಸೆ ಪಡ್ಡು ದೀಪದ ಮಲ್ಲಿ ಆಗಿರುದು ಎಲ್ಲ ಕತೇನೂ ದುಕ್ಕ ಮಾಡ್ಕಂಡು ರಾಜ್ ಕುಮಾರನ್ಗೆ ಯೇಳಿದ್ಳು, ಕತೆ ಕೇಳಿದ್‌ಮ್ಯಾಕೆ ಎಡ್ತಿ ಅಂತ ಕುರುವು ಕಂಡು ಅವ್ನ ತಲೆಮ್ಯಾಗಳ ದೀಪ ತಗ್ದು,ತನ್ನ ಎಡ್ತಿಗೆ ಇಂಗೆ ಸಿಕ್ಸೆ ಕೊಟ್ಟುದ್ಕೆ ತಂಗಿ ಬಾವನ್ಗೆ ಬೈದ. ಅವ್ರೆಲ್ಲ ಗೊತ್ತಾಗ್ನಿಲ್ಲ ಅಂತ ಕಾಲ್ಕಟ್ಕಂಡ್ರೂ ನಿಲ್ದೆ ಎಡ್ತಿ ಕರ್ಕಂಡು ಕುದ್ರೆ ಮ್ಯಾಲೆ ಕೂರಿಸಕಂಡು ತನ್ನ ಪಟ್ನಣಕ್ಕೆ ವೋದ. ರಾಜ್‌ಕುಮಾರಿ ಕೊಂಡ್‌ಕೆಂಡ ಆಗ್ದೆ ಬದ್ಕಿರುದು ಕಂಡು ಎಲ್ಲ ಬೋ ಸಂತೋಸ ಆಯ್ತು.

ಆಮೇಲೆ ಗಂಡ ಎಡ್ತಿರು ಸುಕ್ವಾಗಿದ್ರು.

## ಯರಂಡಿಕಾ ಚೀರಾಕ್ ಕೀ ಕೈಯೆಣ್ಣೆ ದೀಪದ ಕತೆ

ಒಂದೂರಲಿ ಒಂದ್ರಾಜ ಇರ್ತಾನೆ. ಆ ರಾಜ ಹೇಳ್ತಾನೆ ಮಂತ್ರಿಗೆ, ಮನೇಲಿ ಒಂದು ದೊಡ್ಡ ಫಂಕ್ಷನ್ ಇಡನ. ಫಂಕ್ಷನ್ ದಿವ್ಸ ಒಂದು ಎರಡು ಸಾವ್ರ ದೀಪ ಕಚ್ಬೇಕು. ಅದು ಎಲ್ಲ ತುಪ್ಪದ ದೀಪ ಆಗಿರ್ಬೇಕು. ಈ ಎರಡು ಸಾವಿರ ದೀಪದ ಮಧ್ಯ ಒಂದು ಯರಂಡಿಕಾ ಚೀಕಾರ್ ಕಚ್ಬೇಕು. ಯಾರು ಅದ್ರ ವಾಸ್ನೇಲಿ ಕೈಯೆಣ್ಣೆ ದೀಪ ಅಂತ ಕಂಡಿಡಿತಾರೊ ಅವ್ರುನ್ನೆ ನಾನು ಲಗ್ನ ಆಗ್ತೀನಿ ಅಂತ ಹೇಳ್ತನೆ. ಅವತ್ತು ಇಡೀ ಊರ್ನಲಿ ಒಂದು ನರಪಿಳ್ಳೇನೂ ಉಳ್ಕಬಾರ್ದು. ಎಲ್ಲ ಊಟಕ್ಕೆ ಬರ್ಬೇಕು. ಬ್ಯಳಿಗ್ಗೆ ಆರ್ಘಂಟೆತಂಕ ಇಲ್ಲೆ ಇದ್ದು ಖುಷಿ ಮಾಡ್ಕಂದಿರ್ಬೇಕು ಅಂತ ಸಾರ್ಸು. ಯಾರಾದ್ರು ಉಳ್ಕಂದ್ರೆ ಶಿಕ್ಷೆ ಆತಿತೆ ಅಂತಲೂ ಸಾರ್ಸು ಅಂತ ಹೇಳ್ತನೆ. ಮಂತ್ರಿ ಅಂಗೆ ಸಾರಿಸ್ತಾನೆ. ಆಊರ್ನಲೆಯ ಒಬ್ಬ ಸಾವ್ಕಾರ ಇರ್ತಾನೆ. ಅವುನ್ಗೆ ಒಬ್ಳು ಮಗಿರ್ತಾಳೆ. ಒಂಥರ ಅಂಹಕಾರ ಅವ್ಳಿಗೆ. ಯೇ ಯಾರೋಗ್ತರೆ ಅಲ್ಗೆ ಅಂತ, ರಾಜನ ಮನೇದು ಅಜ್ಜೆ ಊಟಕೋಗನ. ಆ ಮಟ್ಟಿನ ದಂಡ ಕೊಡಕಾಗಲ್ಲ, ಎಲ್ಲ ನಡೀರಿ ಊಟ್ಕೆ, ರಾತ್ರೆಲ್ಲ ಅಲ್ಲೆ ಇದ್ದು ಬರನ ಅಂತ ಹೋಗ್ತರೆ, ಇಡೀ ಊರಿನ ಜನೆಲ್ಲ ಸೇರಿತೆ.

ಅಮೇಲೆ ಊಟಗೀಟ ಆಯ್ತು. ರಾಜಂದು ಅಪ್ಪಣೆ ಆಯ್ತು. ಯಾರು ಹೋಗ್ಬಾರ್ದು, ಬ್ಯಳ್ಗೆ ಆರ್ಗಂಟೆ ತನಕ. ಎಲ್ಲ ಇರ್ಬೇಕು, ಬ್ಯಳಿಗ್ಗೆ ಹೋಗಿ ಅಂತ, ಎಲ್ಲ ಖಿಷಿ ಮಾಡ್ತರೆ, ಆಡ್ತರೆ. ಡ್ಯಾನ್ಸ್‌ಮಾಡ್ತರೆ, ಕುಣಿತಾರೆ, ದೀಪದ ಬೆಳಕು ಅನ್ನದು ಮಿಂಚ್ತ ಇತ್ತಲ, ಎಲ್ಲರ್ಗೂ ಖುಷಿ. ಇವ್ಳೇನ್ಮಾಡ್ತಳೆ, ಒಂದ್ತೂರು ಊಟ ಮಾಡಿ ಒಂದು ಮೂಲೇಲಿ ಮುಖ ಉರಿಸ್ಗಂಡು ಕೂತ್ಗಬಿಟ್ಲು. ಆಮೇಲೆ ಈ ರೀಜ ಮಂತ್ರಿ ಅವ್ಳ ಮೇಲೆ ನಿಗಾ, ಅವ್ಳು ಯಾಕೆ ಮುಖ ಉರಿಸ್ಗಂಡು ಮೂಲೇಲಿ ಕುಂತವ್ಳೆ, ಏನು ಕಡಿಮೆ ಇಯ್ತೆ. ಏನ್ ಮಿಸ್ಟೀಕ್ ಇಯ್ತೆ ಅನ್ಕತರೆ, ಬ್ಯಳ್ಕರಿತು ಎಲ್ಲ ಹೊಂಟ್ರು. ಈ ರಾಜ ಹೋಗಿ ಬಾಗ್ಲಲಿ ನಿಂತ್ಗಂದ. ಇವ್ಳು ಮುಖ ಉರಿಸ್ಗಂಡು ಹೊಂಟ್ಲು. ರಾಜ ನಿಲ್ಲಿಸ್ದ. ರಾತ್ರೆಲ್ಲ ಮುಖ ಉರಿಸ್ಗಂಡು ಕೂತಿದ್ದಲ್ಲಾ ಯಾಕೆ. ಏನ್ ಮಿಸ್ಟೀಕ್ ಆತು. ಏನು ಕಡಿಮೆ ಇತ್ತು ಅಂತ ಕೇಳ್ದ. ಆಮೇಲೆ ಇವ್ಳೇಳ್ತಾಳೆ. ನೀವು ಎಷ್ಟು ದರ್ಬಾರ ಇದ್ರೆ ಏನು. ಅಷ್ಟು ದೀಪದಲ್ಲಿ ಒಂದು ಕೈಯೆಣ್ಣೆ ದೀಪ ಇತ್ತು. ಅದ್ರ ವಾಸ್ನೆ ತಟ್ಕನಕೆ ನಂಗೆ ಆಗಲ್ಲ ಅದ್ರುಂದ ನಾನು ಅಂಗೆ ಕೂತಿದ್ದೆ. ಬಿಡಿ ದಾರಿಯ ಅಂತ ಹೋದ್ಲು. ಆ ಹೋಗ ಸಿಟ್ನಲಿ ಒಂದು ಚಪ್ಲಿಯ ಬಿಟ್ಹೋದ್ಲು. ರಾಜ ಆಳ್ಗೆ ಕರ್ಸಿ ಆ ಚಪ್ಲಿ ತಗಂಡೋಗಿ ಅವ್ಳು ಮನೆಯ ಅಡ್ರಸ್ ಕಂಡಿಡ್ಕಂಬನ್ನಿ ಅಂದ. ಇವ್ರು ಹುಡಿಕ್ಕಂಡೋದ್ರು. ನೋಡಿ ಈ ಕಾಲಿನ ಮೆಟ್ಟು ಯಾರ್ದು ಅಂತ ಕೇಳಿದ್ರು. ಆಮೇಲೆ ನಂದೆ ಅಂತ ಇಸ್ಕಂದ್ಲು. ಇವ್ರು ಆ ಗುರ್ತ ತಂದು ಹೇಳಿದ್ರು ರಾಜಂಗೆ.

ಆಮೇಲೆ ಇವ್ರೆಲ್ಲ ಹೋದ್ರು. ಇವ್ಳ ಮನೆಗೆ. ಹುಡ್ಗಿ ತಂದೆಗೆ ಕೇಳಿದ್ರು, ಆಮೇಲೆ ಮದ್ವೆಮಾಡಿ ಕೊಡಿ ಅಂತ. ಮದ್ವೆ ಮಾಡಿ ಕೊಡ್ತೀವಿ, ಮದ್ವೆ ಮಾಡಿ ಕೊಟ್ರೂವೆ, ಬೆಳಿಗ್ಗೆ ಆರು ಗಂಟೆಯಿಂದ ಸಂಜೆ ಐದು ಗಂಟೆತನಕ ನಿಮ್ಮಲ್ಲಿರ್ತಾಳೆ. ಸಂಜೆ ಐದು ಗಂಟೆಯಿಂದ ಬೆಳಿಗ್ಗೆ ಆರ್ಗಂಟೆತನಕ ನಮ್ಮಲ್ಲಿರ್ತಾಳೆ ಅಂಗಾದ್ರೆ ಕೊಡ್ತೀವಿ. ಇಲ್ಲ ಅಂದ್ರೆ ಇಲ್ಲ ಅಂದ್ರು. ಆಮೇಲೆ ಆಗ್ಲಿ ಅಂತ ಒಪ್ಗಂದ್ರು. ಮದ್ವೆಗಿದ್ವೆ ಎಲ್ಲ ಆಯ್ತು. ಮದ್ಲಿಗಿತ್ತಿ ಬಂದ್ಲು ಮನಿಗೆ. ಇನ್ನ ಸಂಜೆ ಐದ್ಗಂಟೆ ಆಯ್ತುಲ ಹೊಂಟ್ಲು, ಗಂಡನ ಮನಿಂದ ತಾಯಿ ಮನೆಗೆ. ಇದೆ ಥರ ಒಂದೊರ್ಷ ಕಳೀತು, ಸಂಜೆ ಹೋಗದು, ಬೆಳಿಗ್ಗೆ ಬರದು, ಇದೆ ಆತು, ಇವ್ಳು ಇದೇನಿರಬಹುದು ಅಂತ, ಒಂದ್ಗುರುಗಳ ಹತ್ರ ಹೋದ. ಗುರುಗಳೆ ನನ್ನೆಂಡ್ತಿ ಸಂಜೆ ಹೋಗ್ತಳೆ, ಬೆಳಿಗ್ಗೆ ಬರ್ತಳೆ, ಇದೇನಿದು ಅಂತ ಕೇತ್ತನೆ.

ಆಗ ಗುರುಗಳು ಹೇಳ್ತರೆ, ಅವ್ಳು ಏಳು ವರ್ಷದ ಮಗಿನಿಂದಲೆ ಅಚ್ಚಗನ್ಕೇರು ದೇವಗ-ನ್ಕೇರ ಸಭೆಗೆ ಸೇರವ್ಳೆ. ಅದು ಇಂದ್ರಂದು, ಆಸ್ಥಾನದಲ್ಲೆ ದಿನಾಲು ಹಾಡು, ಡ್ಯಾನ್ಸು ಎಲ್ಲ ಮಾಡ್ತರೆ. ಅಲ್ಲಿಗೋಕ್ತಾಳೆ. ಅದ್ಕೇನೆ ಸಾಯಂಕಾಲ ಅಲ್ಲಿಗೋಗ್ತಳೆ ಅಂತ ಹೇಳಿದ್ರು. ಅವ್ಳು ನನ್ಗೆ ಸಿಗ್ಬೇಕಾದ್ರೆ ಏನ್ಮಾಡ್ಬೇಕು ಅಂತಾನೆ, ಏನು ಇಲ್ಲ ಒಂದು ಕಣ್ಕಪ್ಪು ಕೊಡ್ತಿನಿ ನಿಂಗೆ, ಅದ್ನ ನಿನ್ನ ಕಣ್ಗೆ ಹಚ್ಕೊ. ಅವ್ಳು ಹೋಗ್ತಳಲ್ಲ, ಅವ್ಳ ಹಿಂದ್ಗಡೇನೆ ಹೋಗು. ಅವ್ಳಿಗೆ ನೀನು ಕಾಣಾಕಿಲ್ಲ. ನಿನ್ಗೆ ಅವ್ಳು ಕಾಣ್ತಾಳೆ. ಅವ್ಳು ಸಂಜೆ ಐದ್ಗಂಟೆಗೆ ಅವ್ಳ ತಾಯಿ ಮನೆತವ ಮಲ್ಗೆ ಅಂಟಯ್ತೆ. ಅಲ್ಲಿ ಸ್ನಾನ ಮಾಡಕೋಗ್ತಳೆ. ಅಲ್ಲಿ ನೀನು ಹೋಗಿ ಸ್ನಾನ ಮಾಡು. ಆಮೇಲೆ ಅಷ್ಟೊತ್ಗೆ ತಕತ್ ಬರ್ತೀತೆ. ಅವ್ಳು ಹತ್ತಿ ಕೂತ್ಗತಾಳೆ. ನೀನು ಹೋಗಿ ಕೂತ್ಕೊ. ನೀನು ಅವರ್ಗೆ ಕಾಣಾಕಿಲ್ಲ, ಅವ್ರೆಲ್ಲ ನಿನ್ಗೆ ಕಾಣ್ತಾರೆ. ಎಲ್ಲ ನೋಡ್ಕೊ, ಅದೆಲ್ಲ ನೋಡ್ಕಂದು ಬಂದು ಮನೇಲಿ ಮನಿಕೊ, ಅಷ್ಟೊತ್ಗೆ ಅವ್ಳು ಬರ್ತಾಳೆ. ಆಗ ನೀನು ಹೇಳು. ಎಂಥಾ ಒಳ್ಳೆ ಕನಸು ಬಿದ್ದಿತ್ತು, ನೀನು ಎಬ್ಬಿಸ್‌ಬಿಟ್ಟಾಲ್ಲ, ಇನ್ನೊಷ್ಟತ್ತು ಇದ್ದಿದ್ರೆ ಎಲ್ಲ ನೋಡ್ತಿದ್ದೆ ಅಂತ ಹೇಳು, ಹೇಳ್ಕೊಡ್ತರೆ, ಇವ್ನು ಅಂಗೆ ಮಾಡ್ತಾನೆ ಅವ್ಳು ಐದ್ಗಂಟೆಗೋಗ್ತಳೆ ಸ್ನಾನ ಮಾಡ್ಕತಾಳೆ ಇವ್ನು ಮಾಡ್ಕತಾನೆ, ಅಷ್ಟೊತ್ಗೆ ತಕತ್ ಬಂತು. ಅವ್ಳು ಹತ್ತಿ ಕೂತ್ಗತಾಳೆ. ಇವ್ನೆವೆಹತ್ತಾನೆ. ಇನ್ನೇನು ಅವ್ಳಿಗೆ ಕಾಣಾಕಿಲ್ವಲ. ಹೋಯ್ತು ಇಂದ್ರಂದು ಆಸ್ಥಾನಕ್ಕೆ. ಅಲ್ಲಿ ಡ್ಯಾನ್ಸು, ಹಾಡು, ಕುಣಿತ ಕಣ್ಣಿಂದ ನೋಡಾಕೆ ಅಸಾಧ್ಯ ಅಂಗೈಯ್ತೆ. ಬ್ಯಳ್ಕರಿತಿತೆ. ಆರ್ಗಂಟೆಗೆ ತಕತ್ ಕೆಳ್ಗಡೆ ಇಳಿತು. ಇವ್ಳು ತಾಯಿ ಮನಿಗೆ ಹೋಗ್ತಳೆ, ಇವ್ನು ಇಳ್ದು ಬೇಗ ಬೇಗ ಬಂದು ಮಲಗಿರ್ತಾನೆ. ಇವ್ಳು ಬಂದು ಮಂಚದ ಮ್ಯಾಲೆ ಕೂತ್ಗಂದು ಏನು ಇಷ್ಟೊತನಕ ಎದ್ದಿಲ್ವಲಾ ಯಾಕೆ ಅಂತ ಎಬ್ಬಿಸ್ತಾಳೆ. ಅಯ್ಯೋ ಎಂಥಾ ಕೆಲ್ಸ ಮಾಡ್ದೆ. ಎಂಥಾ ಕನಸು ಒಳ್ಳೆದು ಬಿದ್ದಿತ್ತು. ಅಷ್ಟು ಒಳ್ಳೆ ಕನಸು ಅಂತಾನೆ. ಅದೆಂತ ಕನಸು ಹೇಳಿ ಮತ್ತೆ ಅಂದ್ಲು. ನೋಡು ನೀನು ಬಿರ್‌ಬಿರ್ನೆ ಹೋದೆ. ಸ್ನಾನ ಮಾಡ್ದೆ. ನಾನು ನಿನ್ನ ಹಿಂದ್ಗಡೆ ಬಂದೆ. ನಾನು ಸ್ನಾನ ಮಾಡ್ದೆ, ನಿನ್ಜೊತೆಲೆ, ಅಷ್ಟೊತ್ಗೆ ತಕತ್ ಬಂತು. ನೀನು ಅದ್ರುಲಿ ಹತ್ಗಂದು ಕೂತ್ಗಂದೆ, ನಾನು ಹತ್ತಿ ಕೂತ್ಗಂದೆ. ಅದು ಹೋಯ್ತು ಅಚ್ಚಗನ್ಕೇರ ಜೊತೆ ಇಂದ್ರಂದು ಆಸ್ಥಾನಕ್ಕೆ, ಅಲ್ಲೇನು ಡ್ಯಾನ್ಸು, ಕುಣಿತ, ಹಾಡು. ಕಣ್ಣಿಂದ ನೋಡದೆ ಒಂದು ಚೆಂದಾಗಿತ್ತು. ಬ್ಯಳ್ಕರಿತು ನೀನು ನಾನು ತಕತ್ ಮ್ಯಾಲೆ ಕಳ್ಗಡೆ ಬಂದ್ವಿ. ನೀನು ನಿಮ್ಮ ತಾಯಿ ಮನೆಗೋಗಿ ಬಂದಿದಿಯಾ. ನಾನು ನಿನ್ಗಿಂತ ಮುಂಚೆ ಬಂದು ಮಲ್ಗಿದ್ದೀನಿ ಅಂತ ಹೇಳಿ ಎಂಥಾ ಕನಸು. ನೀನ್ಯಾಕೆ ಎಬ್ಬಿಸ್ದೆ ಅಂದ. ಇವ್ಳ ಎದೆ ಢವಢವನೆ ಒಡ್ಕತು. ಓ ಎಲ್ಲ ಇವ್ನಿಗೆ ಗೊತ್ತಾಗೋಯ್ತು ಅನ್ಕತಾಳೆ. ಆಮೇಲೆ ಕೊನಿಗೆ ಹೋಗದ್ನ ನಿಲ್ಸಿದ್ಲು. ಆಮೇಲೆ ಗಂಡಿ ಹೆಂಡ್ತಿ ಚೆನ್ನಾಗಿ ಖುಷಿಯಾಗಿ ಬದುಕ್ತಾರೆ.

**ಅಡಕರಾಜನ ಮಗಳು ಅರಮಜೊತಿ ಕಥೆ**

ಒಂದು ಊರು ಆಊರಾಗೆ ಮುವಾರು ಅಣ್ಣತಮ್ಮಂದಿರು ಇದ್ರಂತೆ, ಮೂವರು ಇದ್ರೆ ಅದರಾಗೆ ಇಬ್ಬರದು ಮದುವೆ ಆಗಿತ್ತಂತೆ. ವಸಂತಾನೆನ್ನೊ ಕಿರೆಂದು ಮದುವ್ಯಾಗಿದ್ದಿಲ್ಲ. ಅಣ್ಣರ ಹೆಂಡ್ರಿಬ್ರು ಅಕ್ಕ ತಂಗೇರು ನೀರಿಗ್ಹೊಂಟ್ರು. ನೀರಿಗ್ಹೊಂಟಾಗ ವಸಂತ ಹಿಂದ್ನಿಂದ ಕುದುರೆ ಅಟ್ಟಿಕೊಂಡು ಹತ್ತಿಕಂದು ಹೋಗ್ತಾಇದ್ದ. ಹೋಗ್ತಾ ಇದ್ದಾಗ ಅವರಿಬ್ರು ಅಕ್ಕಾ ತಂಗೇರು ಏನಂತ ಮಾತಾಡ್ತಿದ್ರಂದ್ರೆ 'ನಮ್ಮ ವಸಂತಗೆ ಎಂತ ಹೆಣ್ಣು ಚಂದಾಗುತ್ತೆಂದ್ರೆ ಅಡಕ ರಾಜನ ಮಗಳು ಅರಮ ಜೊತೀನೆ ಸೈ' ಅನ್ಕಂತ ಹೋಗ್ತಿದ್ಲು.

ಇವರಿಬ್ಬು ಮಾತಾಡ್ತನೇ ಇರುವಾಗ ವಸಂತ ಹಿಂದ್ಕೆ ಬಂದ. ಇವರಿಬ್ರು ಅಕ್ಕತಂಗಿ ನೀರೆಳಕಂಡು ಮನಿಗೆ ಬಂದ್ರು. ಆಗ ವಸಂತ ಹ್ಯಂಗೆ ಇದ್ದ ಅಂದ್ರೆ ಮನಿಗೆ ಬಂದುದ್ದೆ ಮಕಾಡೆ ಮಕ್ಕಂದಿದ್ದ.

ಉಣ್ಣಾಕೆ ಆಗಿತ್ತು, ಅತ್ತಿಗೇರು ಅವನ್ನ ಉಣ್ಣಾಕೆ ಎಬ್ಸಿದ್ರು, ಆಗ ವಸಂತ ಅಂದ: ''ಅಲ್ಲಕ್ಕಾ ನೀವಿಬ್ರು ನೀರಿಗ್ಹೋಗಕರೆ ಏನೋ ಮಾತಾಡ್ತಿದ್ರಲಾ? ಹೇಳ್ರಿ ಏನದು?'' ಅಂತ ಕೇಳಿದ 'ಒಯ್, ಅದೆ ಮಾತಿಗೆ ಮಕ್ಕಂದೀಯಾ? ಹೇಳ್ತೀವಿ ಏಳು' ಎಂದ. ಅತ್ತಿಗ್ಯಾರಂದಾಗ ಎದ್ದು ಕುಂತ.

''ಅಡಕರಾಜನ ಮಗಳ ಅರಮಜೊತೆ ತರದಾದ್ರೆ ಒಂದ್ ಸೇರು ಅಕ್ಕಿ ಕಟ್ಕೋ, ಹೋಗುಂದೆ ಹೋಗುಂದೆ ಹೋಗು. ಅಲ್ಲಿ ಒಬ್ಬ ರುಸಿ ತಪಸ್ ಮಾಡ್ತಿರ್ತಾನೆ, ಒಂದೇ ಗುರ್ತಿಟ್ಕೊ. ರುಸಿ ಇರೋ ಹತ್ರ ಹಳ್ಳ ಇರ್ತದೆ. ಎರಡು ಕಲ್ಲಿಡು. ಪಾತ್ರೆ ಇಡು. ಬುಡಕ್ನೆ ಉಲ್ಡ್ತತಿ. ಆಗ ರುಸಿಗೆ ಎಚ್ರಾಕತಿ. ಆವಾಗ ರುಸಿ ಏನಂತ ಹೇಳ್ತಾನೆಂದ್ರೆ... 'ಹಂಗಲ್ಲಪ್ಪ ಮಗನೆ, ಮೂರು ಕಲ್ಲು ಇಟ್ಟು ಪಾತ್ರೆ ಇಡು. ಆವಾಗ ಅನ್ನ ಮಾಡ್ಕಂಡು ಉಣ್ಣಪಾ' ಅಂತ ಹೇಳ್ತಾನೆ. ನನಿಗೆ ಊಟ ಬೇಕಾಗಿಲ್ಲ ನೀವ್ ಎಚ್ರಾಗಿದ್ದೆ ಸಾಕು. ಆಡ್ ಬಿಳೋದು ಬೇಕಲ್ಲ ಅಂತ ಕೇಳು. ಆವಾಗ ರುಸಿ ಆಗ್ಲಿ ಅಂತಾನೆ. ಅವಗ ರುಸಿನ ನೀನು 'ಅಡಕ ರಾಜನ ಮಗಳು ಅರಮಜೊತಿ ಬೇಕು ಎಲ್ಲೈದಳೆ ಹೇಳು' ಅಂತ ಕೇಳು. ತಕ್ಷಣ ರುಸಿ ಏನ್ ಹೇಳ್ತಾನೆಂದ್ರೆ 'ನಿನ್ ಕೈಲಿ ತರೋದಾಗಲ್ಲ ಹಿಂದ್ಕೊಹ್ಹೋಗು' ಅಂತಾನೆ. 'ಇಲ್ಲ ನಾ ತರ್ತೇನೆ' ಅಂತ ಹಠ ಮಾಡಿ ಪಟ್ ಹಿಡಿ.'' ಅಂದಾಗ ವಸಂತ 'ಹ್ಞೂ ಹಂಗೆ ಮಾಡ್ತೇನೆ' ಅಂದ. 'ಇನ್ನು ನೀ ಹೋಗಿ ಬಾ' ಎಂದು ಅವನ್ನ ಅತ್ತಿಗ್ಯಾರು ಹರಸಿ ಕಳುಸಿದ್ರು.

ಹೋಗುಂದ್ ಹೋಗುಂದ್ ಹೋದ. ಹಳ್ಳ ಬಂತು. ರುಸಿ ಕಂಡ, ಅವಗ ಎರಡು ಕಲ್ ಇಟ್ಟ. ಅನ್ನ ಮಾಡಾಕೆ ಅಂತ ಇಟ್ಟ ಪಾತ್ರೆ ಬುಡಕ್ನೆ ಉಲ್ಡ್ತು. ಆಗ ರುಸಿ ಎಚ್ರಾದ. ರುಸಿ ''ಹಂಗಲ್ಲಪ್ಪ ಮಗನೆ, ಮೂರು ಕಲ್ಲು ಇಟ್ಟು ಅನ್ನಮಾಡು'' ಅಂತ ಹೇಳಿದ. ಆಗ ರುಸಿಗೆ ನೀವ್ ಎಚ್ರಾಗಿದ್ದೆ ಬೇಕಾಗಿತ್ತು ಸ್ವಾಮಿ. ನನಿಗೆ ಅಡಕರಾಜನ ಮಗಳು ಅರಮಜೊತೆ ಬೇಕು ಎಲ್ಲದಳೆ ಹೇಳು'' ಎಂದ.

''ಇಲ್ಲಿಲ್ಲಪ್ಪ ಅವಳು, ರಾಕ್ಷಸಿ ಕೈಯಾಗದಳೆ, ನಿನ್ ಕೈಲಿ ಅಕೆನ ತರೋದಾಗಲ್ಲ, ವಾಪಸ್ಸು ಮನಿಗೆ ಹೋಗು'' ಅಂದ ರುಸಿ.

''ಇಲ್ಲ ನಾ ತರ್ಲೇ ಬೇಕ್ ಸ್ವಾಮಿ'' ಅಂದ ಆಗ ಸ್ವಾಮಿ ಏದು ಕಲ್ಲು ಮಂತ್ರಿಸಿ ಕೊಟ್ಟು ಹೇಳಿದ: ಹೋಗುಂದೆ ಹೋಗುಂದೆ ಹೋಗು. ಇರುಬೆ ಹಿಂಡು ಬರ್ತತಿ. ಆ ಇರುಬೆ ಹಿಂಡಿಗೆ ಒಂದ್ಕಲ್ಲು ಒಗಿ. ಹಂಗೆ ಮುಂದ್ಕೊಹ್ಹೋಗು ಹಾವಿನ್ಹಿಂಡು ಬರ್ತತಿ, ಹಾವಿನ್ಹಿಂಡಿಗೆ ಒಂದೊಂಗಿ ಮತ್ತೆ ಹೊಂಡು, ಹೊಳೆ ಬರ್ತತಿ, ಮತ್ತೊಂದು ಕಲ್ಲು ಒಗಿ, ಮತ್ಹ್ಂಗೆ ಹೊಂಟ್ರೆ ಬೇಲಿ ಸಿಗ್ತತಿ, ಅವಗ ಅಲ್ಲೂ ಒಂದೊಗಿ, ಆಗ ಬೇಲಿದಾಟ್ ಬೇಕಾಕತಿ ಹಂಗೇನೆ ಉಳಿದ ಕಲ್ಲ 'ಬೇಲಿ ಅರಗಾಗ್ಲಿ' ಅಂತ ಒಂದು ಒಗಿ. ಅವಗ ಅಲ್ಲಿ ಅಡಕೆ ಮರಗಳು ಇರ್ತಾವೆ. ಎಲೆ ಬಳ್ಳಿನೂ ಇರ್ತತೆ. ಮೂರು ಅಡಿಕೆ ಮೂರೆಲೆ ಹರ್ಕ ಅವನ್ನ ಬಕಣದಾಗೆ ಇಟ್ಕೊ. ಮತ್ತೆ ಮೂರೆಲೆ, ಮೂರಡಿಕೆ ಹಕ್ಕೊಂಡು-ಬಾಯಾಗೆ ಹಾಕ್ಕೊಂಡು ನಾಕ್ ಮೂಲೀಗೂ ಪಿಚಿ ಪಿಚಿ ಉಗುಳಿ ಹಿಂದ್ಕೆ ನೋಡ್ಲಂಗೆ ಬಾ'' ಎಂದ ರುಸಿ.

ವಸಂತ 'ಅಗಲಿ, ಹಂಗೆ ಮಾಡ್ತೇನೆ' ಎಂದ

ಇಪ್ಪಟೆ (ರುಸಿ ಹೇಳಿದಂಗೆ) ವಸಂತ ಹೋದ, ಇರುಬೆ ಹಿಂಡ್ ಬಂತು, ಒಂದ್ ಕಲ್ಲು ಒಗೆದ. ಹಾವಿನ ಹಿಂಡ್ ಬಂತು ಅಂತ ಒಂದ್ ಕಲ್ಲು ಒಗೆದ. ಮತ್ತೂ ಮುಂದ್ಕೆ ಹೊಂಟ್ರೆ ಬೇಲಿ ಬಂತು ಅಂದು ಇನ್ನೊಂದ್ ಕಲ್ಲು ಒಗೆದ. ಕೊನಿಗೆ ಇನ್ನೊಂದ್ ಕಲ್ಲು ಉಳಿತು, ಬೇಲಿ ಅರುಗಾಗ್ಲಿ, ಅರುಗಾದ್ರೆ ತ್ವಾಟಕೆ ಹೋಗಾಕೆ ಬರ್ತ್ತೀಂದು,ಒಂದ್ ಕಲ್ಲು ಅಲ್ಲೂ ಒಗೆದ.

ಬೇಲಿ ಅರುಗಾತು. ಒಳಕ್ಹೋದ, ಮೂರಡಿಕೆ ಹರ್‍ಕೊಂಡ, ಮೂರೆಲೆ ಕೊಯ್ಕಂಡ, ಬಕಣದಾಗೆ ಇಟ್ಕೊಂಡ. ಮತ್ತೆ ಮೂರಡಿಕೆ ಎಲೆ ಹರ್‍ಕೊಂಡು ಬಾಯಾಗೆ ಹಕ್ಕೊಂಡ, ಜಗಿದ, ನಾನು ಮೂಲಿಗೂ ನಾಕ್ ಸಾರಿ ಪಿಚ ಪಿಚ ಉಗುಳ್ದ, ಹಿಂತಿರುಗಿ ಹೊಂಟ.

ಒಡೆ ಬರಕರೆ ಹೆಂಗ್ಹಂಗಾತೇನೋ ತಿರುಗಿ ನೋಡಿದ. ಒಂದ ಪಟಿಗೆ ಆಗ್ಲೆ ಅಲ್ಲೆ ಕಲ್ಲಾದ. ರುಸಿ 'ಹೋದ್ ಮಗ ಬರ್‍ಲಿಲ್ಲ' ಅಂತ ಅದೇ ಹಾದಿಗೂಟನೇ ಅಲ್ಗೇ ಹೋದ. 'ಏನೋ ಮನ್ಸ್ಯಾಂಗಿರೊ ಕಲ್ ಕಾಣ್ತತಿ' ಅಂದು ಹತ್ರಕೆ ಬಂದು ಜೀವದ್ ಕಡ್ಡಿ ಬೇಗ್ನೆ ಬಗಲಾಳಿಂತ ತಗೊಂಡ. ಜೀವ್ಸಿ, ಎಚ್ಚರ ಮಾಡಿ ಅವನಿಗೆ ಹಿಂಗಂದ:

''ಇನ್ ಬೇಡಪ್ಪ ಮಗನೆ. ನಿನ್ ಕೈಲಂತು ಅವ್ಳ ತರೋದಾಗಲ್ಲ'' ಅಂತಂದು 'ಸುಮ್ಕೆನೀನು ಹಿಂದ್ಕ್ಹೋಗು'' ಎಂದಾಗ, ವಸಂತ ಮತ್ತೂ 'ತರ್‍ಲೇಬೇಕು' ಅಂತಾನೇ ಹಠ ಹಿಡಿದ. ರುಸಿ ಆಗ ಒಂದ್ ಕಲ್ ಮಂತ್ರಿಸ್ಸಿ ಕೊಟ್ಟು ಅನಂತ್ರ ಹೇಳ್ದ ''ನಾ ಇಲ್ಲೆ ನಿಲ್ತೇನಿ ಹೋಗು'' ಅಂದ.

ಹೋಗುಂದೆ ಹೊಂಗುಂದೆ ಹೋದ. ಬೇಲಿ ಸಿಗ್ತು. ಬೇಲಿ ಅರುಗಾಗ್ಲಿ ಅಂತ ಆ ಕಲ್ಲ ಒಗೆದ, ಮೊದ್ಲಿನಂಗೆ ಮೂರಡಿಕೆ ಹರ್‍ಕೊಂಡ. ಮೂರೆಲೆ ಕೊಯ್ಕಂಡ. ಬಕಣದಾಗೆ ಇಟ್ಕೊಂಡ. ಮತ್ತೆ ಮೂರೆಲೆ ಅಡಿಕೆ ಹರ್‍ಕೊಂಡು ಮತ್ತೆ ಹಾಕ್ಕೊಂಡು ನಾಕ್ ಮೂಲಿಗೂ ಪಿಚಿ ಪಿಚಿ ಉಗುಳಿದ. ಅವಗ ವಾಪಸ್ಸು ಒಡೆ ಬರಕರೆ ರಾಕ್ಷಸಿಗಳು ಬೆನ್ನು ಹತ್ತಿದ್ರು, ತಕ್ಷಣ ರುಸಿ ಬೆಕ್ಕು ಮಾಡಿ ಅವನ್ನ ಬಗಲಾಗೆ ಎತ್ಕೊಂಡ ಆಗ

''ಬಂದದ್ನಲಾ ಅವನು ಎಲ್ಲಿಗ್ಹೋದ?'' ಅಂತ ರಾಕ್ಷಸಿಗಳು ಚೀರಾಡಾಕೆ ಹತ್ತಿದ್ರು, ''ಏನ್ಮಾಡ್ಲಪ್ಪ ನನಿಗೆ ಗೊತ್ತಿಲ್ಲ'' ಅಂದ ರುಸಿ, ಇನ್ನೇನು ಅವರು ಮುಂದ್ಕೆ ಹ್ವಾದ್ರು.

ರುಸಿ ತನ್ನ ಸ್ಥಾನಕ್ಕೆ ಬಂದು ''ಮಗನೇ ತಂದಕ್ಕಿ ಅನ್ನಮಾಡು, ಅನ್ನಮಾಡಿ ಬುತ್ತಿ ಉಂಡೆ ಕಟ್ಟು ಮತ್ತೆ ನೀನು ತ್ವಾಟಕ್ಕೆ ಹೋಗತ್ತಿಗೆ ಅದು ಮೂರು ಭಾಗಾಕತಿ, ಹಾದಿಗೊಂದ್ ಇಡು, ಬಾವಿಗೊಂದೇ ಹಾಕು, ನೀನೊಂದ್ ಹಾಕು. ನೀನೊಂದ್ ತಿನ್ನು, ನೀ ಒಯ್ದ ಅಡಿಕೆ ಎಲೆ ತಲೆದಿಂಬಿನಾಗೆ ಇಟ್ಕೊ. ನಿದ್ದ ಹತ್ತಿದಾಗ ಅವಳು ಬಂದು ತಲೆದಿಂಬಿನ್ಹತ್ರ ಕುತ್ಕತಳೆ.''

''ಆಗಲಿ ಸ್ವಾಮಿ'' ಅಂದ ವಸಂತ

ಗಡ ಗಡನೆ ಅಡ್ಗೆ ಮಾಡಿದ, ಉಂಡೆ ಕಟ್ಟಿದ, ಹೊಂಟ, ತ್ವಾಟಕೆ ಹೋಗತ್ತಿಗೆ ಬುತ್ತಿ ಮೂರು ಭಾಗ ಆಕತಿ. ಹಾದಿಗೊಂದಿಟ್ಟ, ಬಾವಿಗೊಂದು ಹಾಕಿದ, ಅವನೊಂದು ತಿಂದ. ಮನಿಗೆ ಬಂದು ತಲೆ ದಿಂಬಿನಾಗೆ ಅಡಿಕೆ ಎಲೆ ಇಟ್ಕೊಂಡು ಮನಗಿದ. ಅವಗ ಅಡಕ ರಾಜನ ಮಗಳು ಅರಮಜೊತಿ ಬಂದು ಕುಂತ್ಗಂದಿರ್‍ತಾಳೆ.

ಅವರೂರಾಗೊಬ್ಬಕ್ಕೆ ಕುಲ್ಡ್ ಕುಂಬಾರ್ತಿ ಅನ್ನೋಕೆ ಇದ್ಲು, ಅಡಕ ರಾಜನ ಮಗಳು ಅರಮಜೊತೆ ಹೋದ ವಿಚಾರ ತಿಳಕಂಡು ಅವಳ ಹತ್ತ ಹೋದ್ಲು. ಅರಮಜೊತಿನ ನೋಡಿ ಕರ್ದು ಕೇಳಿದ್ಲು "ನೀ ಯಾರು?" ಅಂತ.

"ನಾ ಅಡಕ ರಾಜನ ಮಗಳು ಅರಮಜೊತೆ. ನನ್ ಮದುವೆ ಆಗಾಕೆ ಇವನು ತಂದಾನೆ" ಅಂದ್ಲು ಅರಮಜೊತಿ.

"ಒಳ್ಳೇದಾತು, ಬಾ ಹಂಗೆ ಹೋಗಾನ" ಅಂದ್ಲು.

"ಯಾಕೆ?" ಅಂದಾಗ

ಬಾಯಿಲ್ಲೀ ಬಾವಿ ಹಣಿಕಿ ನೋಡಾನ ಅಂತ ಕರುದ್ಲು ಕುಲ್ಡ್ ಕುಂಬಾರ್ತಿ. ಹಣಿಕೆ ನೋಡಿದ್ರು.

ಅವಗ ಕುಲ್ಡ್ ಕುಂಬಾರ್ತಿ "ನಿನ್ ದಾಗಿಣಿ ನನಿಗೆ ಚಂದಾಕತನೊ ನೋಡಾನ ಕೊಡು" ಎಂದು ಅಮರಜೊತಿಂದ ಇಸ್ಕೊಂದ್ಲು. ನಂತರ ಕುಲ್ಡ್ ಕುಂಬಾರ್ತಿ "ಈಗ್ ನೋಡನ ಯಾರು ಚಂದಾಕರೊ ಹಣಿಕಿ ನೋಡನ ಬಾ" ಅಂತ ಹೇಳಿದ್ಲು. ಆಗ ಇಬ್ರು ಹಣಿಕಿ ನೋಡಿದ್ರು. ನೋಡಕರೆ ಕುಲ್ಡ್ ಕುಂಬಾರ್ತಿ ಅಡಕರಾಜನ ಮಗಳು ಅರಮಜೊತಿನ ಬಾವಿಗೆ ದೂಕಿದ್ಲು. ಇಪ್ಪಟೆ ತಾನು ಹೋಗಿ (ವಸಂತನ) ತಲೆದಿಂಬಿನ್ತಾಕೆ ಕುಂತ್ಲು.

ಎಚ್ರಾದಾಗ ವಸಂತ ನೋಡ್ದ ಇನ್‌ಮ್ಯಾಲೆ ಅತ್ತಿಗೆಮ್ಮರ್ನಾ ಕರ್‍ಸಬಿಟ್ಟು ಹಿಂಗೇ ಹೇಳಿದ: "ಅಡಕರಾಜನ ಮಗಳು ಮರಮಜೊತಿನ ಕರ್ಕಂಡು ಬಂದೆನಿ. ದಂಡು ದರಬಾರು ಕರ್ಕೊಂಡು ಬರ್ರಿ" ಅಂತ ಕಳ್ಸಿದ, ಅವಗ ಅವರಣ್ಣ ಅತ್ತಿಗೇರು ದಂಡು ದರಬಾರು ಕರ್ಕಂಡು ಬಂದ್ರು.

ಅವಗೇನಾಕತಪಾ ಅಂದ್ರೆ, ಅಣ್ಣಾರ ಹೆಂಡ್ರು ಕುಂತಿರೋಕೇನ ನೋಡಿ "ಓಯ್! ಇವಳು ನಮ್ ಕುಲ್ಡ್ ಕುಂಬಾರನ ಹೆಂಡ್ತಿ!" ಅಂದ್ರು, ತಮ್ಮಲ್ಲೇ ಮಾತಾಡ್ಕಂಡ್ರು: "ನಮ್ ಮೈದ್ನನ ಕೈಲಿ ತರಕಾಗಿಲ್ಲ ಅದ್ಕೆ ಕುಲ್ಡ್ ಕುಂಬಾರ್ತಿ ಕರ್ಕೊಂಡು ಬಂದು ಕೂರ್‍ಸಕ್ಕಂಡಾನೆ" ಅಂದ್ಕಂತ ನಕ್ಕರು. ಇನ್ನೇನು ನಿರ್‍ವಾ ಇಲ್ಲ ಅಂತಂದು ಅಕೇನೆ ವಸಂತಗೆ ಮದುವೆ ಮಾಡಿ ಮನೆಗೆ ಕರಕಂಡು ಹೊಂಟ್ರು.

ಒಂದೆಲ್ಡ್ ದಿನ ಆಯ್ತು, ಅವಗ ಅವನು (ವಸಂತ) ಈಗ್ ಸಾಯ್ತಾನೊ ಆಗ್ ಸಾಯ್ತಾನೋ ಅನ್ನಂಗಾದ

'ನಾವು ಒಬ್ಬ ತಂದೆಗೆ ಮೂವರು ಮಕ್ಳು ಇದ್ವಿ, ಈಗ ಇದ್ರೆ ಆಕವಿ, ಏನ್ಮಾಡೋದು? ಇವನ್ನ ಏನರ ಮಾಡಿ ಅಳ್ಕೋಬೇಕು' ಅಂತ ಅಂದ್ಕಂಡ್ರು ಅಣ್ಣಾರು. ಅವಗ ಅವನ್ನ ತ್ವಾಟಕೆ ಕರ್ಕೊಂಡು ಹೋದ್ರು: ಕರ್ಕೊಂಡು ಹೋಗಿ ಒಂತಾಕೆ ಕುಂದ್ರಿಸಿದ್ರು.

ಹಂಗೆ ಬಾವಿ ಕಡೆ ಹೋದ್ರು. ಕಮಲದ ಹೂವು ಮಲಮಲ ಅಂತುತ್ತು ಬಾವ್ಯಾಗೆ, ಅಣ್ಣಾರು 'ತಮೇಗೆ ಇದ್ನ ಒಯ್ದು ಹರ್ಕೊಂಡು ಕೊಟ್ರೆ ಈ ಹೂವ್ನೇ ನೋಡ್ಕಂತ ಕೂರ್‍ತಾನೆ' ಎಂದು ತಿಳಿದು, ಆ ಹೂವ್ನ ಹರಿಯಾಕ್ಹೋದ್ರು. ಅದು ಕೈಗೆ ಸಿಗಲಿಲ್ಲ.

ಆಶ್ಚರ್ಯ ಆಗಿ ಬಿಟ್ಟು ಉಪಾಯ ಹುಡುಕಿದ್ರು. 'ತಮ್ಮನ್ನೇ ಕರ್ಕೊಂಡು ಬಂದು ಕೂರ್‍ಸಿದ್ರೆ ಹೂವು ಅವನಿಗರೆ ಸಿಗ್ತಾತೇನೋ' ಅಂತ ಅದ್ಕೊಂಡು ಕರ್ಕಂಬರಾಕೆ ಬ್ರಂದು.

ತಮ್ಮುನ್ನ ಅಲ್ಲಿಗೆ ಕರ್ಕೊಂದು ಹೋದ್ರು. ಅವಗ ಅಲ್ಲಿ ಕೂರ್‍ಸಿದ್ರು, ಹೂವು ತಮ್ಮನ ಬಡ್ಡಿಗೆ ಬಂತು. ತಮ್ಮ ಆಗ ಹೂವು ಹರ್ಕೊಂಡು ಇಟ್ಕೊಂಡು ದಿನ ದಿನಕ್ಕೆ ಪಾಡಾದ.

ಕುಲ್ಡ್ ಕುಂಬಾರ್ತಿಗೆ ಹೆಂಗ್ಹೆಗೋ ಆತು (ಹೊಟ್ಟೆಕಿಚ್ಚು ಪಟ್ಟಗನಾಕೆ) ಅವಗ ಕುಲ್ಡ್ ಕುಂಬಾರ್ತಿ ತ್ವಾಟಕೆ ಬಂದ್ಲು. ಅಲ್ಲಿರೋ ಹೂ ನೋಡಿ ಅನಿಗ್ನೋದ್ಲು. ಮಕ್ಕಂದ್ಲು ಮಾವನ ಕುಟಗೆ ''ಮಾವ ನನಗೆ ತಲೆ ನೋಯ್ತತಿ'' ಅಂತ ಅಂದ್ಲು.

''ಏನ್ ಮಾಡೋದು ಅದ್ಕೆ?'' ಅಂತ ಹಿರಿಮಾಮ ಕೇಳ್ದ

''ನಿನ್ ತಮ್ಮನ ಕೈಯಾಗಿ ಹೂವೈತಲ, ಆ ಹೂವು ತಂದು ನನ್ನ ಹಣೆಗೆ ಅರ್ದು ಹಚ್ಚಿದ್ರೆ ನನಿಗೆ ಪಾಡಾಕತಿ'' ಅಂತ ಅಂದ್ಲು.

'ಮಾವ ಹಂಗೆ ಅಗ್ಲಿ ತರ್ತೇನಿ' ಅಂತಂದು ತ್ವಾಟಕೆ ಬಂದು. ಬಂದು ಆ ಹೂವು ಹರ್ಕೊಂಡು ಬಂದು ಸ್ವಸೆ ಹಣೆಗೆ ಹಚ್ಚಿದ. ನಂತ್ರ ಉಳಿದಿದ್ದ ಚಲ್ವಾನ ಹಿತ್ಲಿಗೆ ಒಸಕಿದ, ಅಲ್ಲಿ ಶ್ರೀಗಂಧದ ಮರ ಹುಟ್ಟ್ತತಿ ಮುಂದೆ ಕುಂಬಾರ್ತಿ ಒಂದೆ ಪಟಿಗೆ ಪಾಡಾಗಂಗಾದ್ಲು.

ಮತ್ತೆ ವಸಂತ ಈಗ್ ಸಾಯ್ತಾನೊ ಆಗ್ ಸಾಯ್ತಾನೋ ಅನ್ನಂಗಾದ, 'ಒಲಾ ಇವನ! ಇದೊಳ್ಳೆಗಾಚಾರಲ!' ಅಂತ ಅಂದ್ಕಂಡ 'ನಮ್ ತಂದಿಗೆ ಮೂವಾರು ಇದ್ವಿ. ಈಗ ಮತ್ತು ಇದ್ರೆ ಆಕವಲಾ' ಅಂತಂದು ಆ ತ್ವಾಟದಿಂದ ಮನಿಗೆ ಕರ್ಕಂಬಂದ್ರು ತಮ್ಮನ್ನ.

ಬಂದಾಗ ವಸಂತ ನಡುಮನೆಗೆ ಮಕ್ಕಂದಾಗ 'ಒಳಗೆ ಸಕೆ ಅಂದ್ರೆ ಸೆಕೆ, ಹಿತ್ಲಾಗರೆ ಕೂರ್ಸಿ' ಅಂತ ಅಣ್ಣಾರುಕುಟಗೆ ಹೇಳ್ದ. ಅವಗ ಅವನ್ನ ಹಿತ್ಲಾಕೆ ಕರ್ಕೊಂದ್ಹೋಗಿ ಈ ಸ್ರೀಗಂಧದ ಮರದಡೇಲಿ ಕೂರ್ಸ್ತಾರೆ. ತನ್ ಪುಣ್ಯಾನೋ ಏನೋ ಅಂಗೆ ಒಮ್ಮೆಲೆ ಅವನು ಚನ್ನಾಗಾದ. ಅದೇ ಸಮೇಕೆ ಕುಲ್ಡ್ ಕುಂಬಾರ್ತೀನೂ ಹಿತ್ಲಾಕೆ ಬಂದ್ಲು, ಆಗ-

ಕಳ್ಳಗೊಂದ್ ಪಿಳ್ಳೆ ನ್ಯಾವ ಹುಡ್ಕಿಂಕಂತ ಮತ್ತೂ ಒಂದ್ ಕಳ್ ಉಪಾಯ ಹೂಡಿದ್ಲು, ಮೊದ್ಲಿನಂಗೆ. ಮಾವನ್ನತ್ರ ಬಂದು ''ಅಯ್ಯೊಯ್ಯೊ ಮಾವ ನನ್ ತಲೆ ಭಾರಿ ಮತ್ತೆ ನೋಯ್ತತಿ'' ಅಂದ್ಲು. ''ಮಾವ ಹ್ನೂ ಏನಾಗ್ ಬೇಕು ಹೇಳು'' ಅಂದಾಗ ಕುಂಬಾರ್ತಿ 'ಹಿತ್ಲಾಗೆ ಸ್ರೀಗಂಧದ ಮರ ಐತಲ ಅದ್ನ ಕಡ್ದು, ನೀರೊಲಿಗೆ ಹೆಟ್ಟಿ, ನೀರ್ ಕಾಸಿ ಹೊಯ್ದ್ರೆ ನನಿಗೆ ಪಾಡಾಕತಿ' ಅಂತ ಇಲ್ಲುದ್ನಲ್ಲ ಹೇಳಿದ್ಲು.

ಮಾವ 'ಆಗ್ಲಿ' ಅಂತಂದು ರಾತ್ರನಾಗೇ ಬಡಿಗಿ ಮನಿಗೆ ಹೋದು. ಬಡಿಗೆಪ್ನ ಕುಟಗೆ ''ಬಡಿಗೆಪ್ನ ಹೊತಾರೆ ನಮ್ ಹಿತ್ಲಿಗೆ ಬಂದು ಆಮರ ಕಡ್ದು ಕೊಡು'' ಅಂದ. ''ಆಯ್ತು ನೀವ್ ಹೇಳ್ದಾಗ್ಲೆ ಬರ್ತೇನೆ'' ಅಂತದಾಗ ಮನೆಗೆ ಹಿಂದಕೆ ಬಂದು.

ಅಂದೇ ರಾತ್ರನಾಗೆ ಬಡಗಿಗೆ ಒಂದ್ ಕನ್ಸು ಬಿತ್ತು. ಅವಗ ಮರವಾದ ಅಡಕ ರಾಜನ ಮಗಳು ಅರಮಜೊತಿನೇ ಬಂದ್ ಬಿಟ್ಟಿದ್ಲು. ಕನಿಸ್ನಾಗೆ ಬಂದು ಏನ್ ಹೇಳ್ತಾಳೆಂದ್ರೆ ''ಬಡಿಗೆಪ್ಪ, ನೀನು ನನ್ನ ಕಡಿಯಾಕರೆ ಒಂದು ಚಕ್ಕೆ ಹಾರ್ತತಿ. ಅವಗ ನಿನ್ ಮಗ ನಿನ್ನ ಉಣ್ಣಾಕೆ ಕರೆಯಾಕೆ ಬರ್ತಾನೆ. ಹಾರಿದ ಚಕ್ಕೆ ತಕ್ಕಂದು ನಿನ್ನ ಮಗಗೆ ಬೆನ್ನು ಹತ್ತಿ ಅಲ್ಲೆ ಒಸಕ್ಕು. ನೀ ಇಷ್ಟ್ ಮಾಡಿದ್ರೆ ನಿನಿಗೆ ಅರಮನೆ ಕಟ್ಟಿಸಿ ಕೊಡ್ತನೆ'' ಅಂದಿದ್ಲು. ಅಂದದ್ದು ಬಡಗಿ ಕನಸ್ನಾಗೆ ಹಂಗೆ ಬಿದ್ದಿತ್ತು.

ಬಡಿಗೆಪ್ಪ ಇದ್ನ ನೋಡ್ ಬೇಕೆಂದು ತಿರುಗಿ ಬೆಳಿಗ್ಗೆ ಮರ ಕಡಿಯಾಕೆ ಬಂದ. ಮರ ಕಡಿಯಾಕರೆ ಒಂದ್ ಚಕ್ಕೆ ಸಡೀತು. ಅದೇ ವೇಳೆಗೆ ಅಗ ಉಣ್ಣಾಕೆ ಕರೆಯಾಕೆ ಬಂದ ಹಾರಿದ ಆ ಚಕ್ಕೆ ತಗಂದು ಬೆನ್ನತ್ತಿ ಮತ್ತೆ ಚಕ್ಕೆ ಅಲ್ಲೆ ಒಸಕಿದ. ಆಮೇಲೆ ಹೋದ.

ಅವಗ ಕುಲ್ಡ್ ಕುಂಬಾರ್ತಿಗೆ ಚಕ್ಕೆ ತಗಂದ್ ಬಂದು ನೀರೊಲಿಗೆ ಹೆಟ್ಟ ನೀರ್ ಕಾಸಿಹೊಯ್ದು. ಆಮೇಲೆ ಮಳ್ಳಿ ಆಟ ತಣ್ಣಾತು.

ಅಡಕ ರಾಜನ ಮಗಳು ಅರಮ ಜೊತಿ ಬಡಿಗಲ್ಗೆ ಒಂದ್ ದೊಡ್ಡ ಮನೇನೆ ಮಟ್ಟಿಸಿ ಕೊಟ್ಲು. ಕಟ್ಟಿಸಿಕೊಟ್ಟು ತಾನೂ ಅಲ್ಲೆ ಇರಾಕೆ ತೊಡಗಿದ್ಲು. ಒಂದ್ ದಿನ ಬಡಿಗಪ್ನ ಹೆಂಡ್ತಿ ಏಳು ಕೊಪ್ಪರಿಗೆ ನೀರು ಕಾಸಿ ಅಕಡ ರಾಜನ ಮಗಳು ಅರಮ ಜೊತಿಗೆ ಎರಿಯುತ್ತಿದ್ಲು. ಜನರೆಲ್ಲ ಬಡಗಿ ಮನೆ ನೋಡಾಕೆ ಬರ್ತಿದ್ಲು. ಕುಲ್ಡ್ ಕುಂಬಾರ್ತಿನೂ ಕೂಡ 'ಆ ಮನೆ ಯಾರು ಕಟ್ಟಿಸಿಕೊಟ್ರೊ' ಅಂದ್ಕೋತ ನೋಡಾಕೆ ಬಂದ್ಲು.

ಬಚ್ಲು ಮನೆಯಾಗೆ ಅಡಕ ರಾಜನ ಮಗಳು ಅರಮಜೊತಿಗೆ ಬಡಿಗೆಪ್ನ ಹೆಂಡ್ತಿ ಎರಿಯುತ್ತಿದ್ದುದ್ನ ನೋಡಿ ಮನಿಗೆ ವಾಪಾಸ್ಸು ಬಂದ್ಲು. 'ಹೊಟ್ಟೆಕಿಚ್ಚುಪಡಕ್ಕೆ ನೆಟ್ಗೆ ಬದ್ಕಲ್ಲ ಒಲ್ಲು ಇನ್ನೊಬ್ರ ಬದುಕಿಸ್ಲು ಒಲ್ಲು' ಅಂದ್ಹಾಂಗೆ ಆಗ ಮತ್ತೊದ್ ನ್ಯಾವ ಒಡ್ಡಿ ಮಾವುಂತಾಕಂದ್ಲು, 'ಅಯ್ಯೊಯ್ಯೊ ಮಾವ, ನನಿಗೆ ಬಡಿಗಿ ಮನೆ ದೆವ್ವ ಹಿಡಿದಿದೆ, ಏನ್ಮಾಡ್ಲಿ?' ಅಂತ ಚೀರಿಕಂಡ್ಲು.

ಆಕಿಗೆ ದೆವ್ವ ಹಿಡಿದೈತೋ ಬಿಟ್ಟೈತೋ ಅನ್ನೋದ್ನ ತಿಳ್ಕಾನದೆ "ಮತ್ತೇನ್ ಮಾಡಾಕು ಹೇಳು ಅಂದ ಮಾವ. 'ಆ ಕಡುಕ್ರ್ನ ಕರ್ಕೊಂಡ್ಹೋಗಿ ಅವಳ್ನ ಕಡ್ಸಿ. ಅವಳ ರಕ್ತ ತಂದು ನನಿಗೆ ಹಚ್ಚಿದ್ರೆ ಪಾಡಾಕತಿ ಮಾವ" ಅಂದ್ಲು.

ಅವಗ ಮಾವ ಬಡಿಗಿ ಮನಿಗೆ ಹೋದ. ಜೊತಿಗೆ ಒಂದಿಬ್ರು ಕಡುಕ್ರ್ನ ಕರ್ಗೊಂಡೇ ಹೋದ. ಬಡಿಗೆಪ್ನ ಕುರ್ತು "ನಿನ್ ಮನೇಲಿ ದೆವ್ವ ಏತಂತಲ್ಲ ಬಡಿಗೆಪ್ಪ ಕಳ್ಸಿಕೊಡು" ಅಂದ್ರು, ಬಡಿಗೆಪ್ಪ ಬಡಿಗ್ಗಿತ್ತಿ "ನಾವು ಕಳಿಸಿಕೊಡಲ್ಲ" ಅಂದಾಗ ಇನ್ನೇನು ನಿರ್ವಾ ಇಲ್ದೆ ಬರ್ಬೇಕಾತು.

ಅರಮಜೊತೆನೇ ಬಡಿಗೆಪ್ನ ಮನಿಂದ್ಲೆ ಹೊಂಟು ಬಂದ್ಲು, ಕಡುಕ್ರು ಆಕೆ ನೋಡಿ ಬೆರಗಾದ್ರು. ಆಕೆನ ಕಡಿಯಾಕೆ ಒಲ್ಡ್ ಹೋದಾಗ ಅವಳೇ ಹೇಳಿದ್ಲು: "ನನ್ನ ಈಗ್ಲೆ ಕಡಿರಿ" ಎಂದಾಗ ಕಡುಕ್ರು ಅವಳ್ನ ಕಡಿದು ರಕ್ತ ತದಂದೆ ಮನಿಗೆ ಬಂದ್ರು. ರಕ್ತ ತಂದು ಕುಲ್ಡ್ ಕುಂಬಾರ್ತಿ ಹಣೆಗೆ ಹಚ್ಚಿದ್ರು. ಕುಲ್ಡ್ ಕುಂಬಾರ್ತಿ ಪಾಡಾಗಂಗಾದ್ಲು.

ಶಿವ ಪಾರ್ವತಿ ಸವಾರಿ ಅಂತ್ರದಾಕಾಸದಲ್ಲಿ ಹೋಗ್ತಿತ್ತು. ಕೆಳಾಕೆ ಹಣಿಕೆ ನೋಡ್ತಾರೆ, 'ಇಲ್ಲಿ ಅಡಕ ರಾಜನ ಮಗಳು ಅರಮಜೊತೆ ತಂದು ಯಾರು ಈ ರೀತಿ ಮಾಡಿಬಿಟ್ಟಿದಾರಲ್ಲ' ಅಂತ ಅಂದ್ಕಂದು ಮತ್ತೆ ಅಕಿಗೆ ಕೊಟ್ರು. ಇರಾಕೆ ಒಂದು ಮನೇನು ಕಟ್ಟಿಸಿ ಕೊಟ್ಟು ಹೋದ್ರು.

ಅವಗ ಒಂದು ಪ್ರಸ್ನೆ ಬಂತು. ಅರಮಜೊತಿ ಆ ಮನೆ ಒಳಗೇ ಇರಬೇಕಾಯಿತು. ಅವಗ 'ಆಕೆ ಕೈ ಹಿಡಿದಂತಹ ಪುರುಷರು ಯಾರು ಬಂದು ಕದ ತಗಿತಾರೋ ಅವರು ಮಾತ್ರಾನೆ ಸೈ ಈ ಕದ ತಗಿಯಾಕೆ' ಎಂದಾಗಿತ್ತು.

ವಸಂತನೂ ಆಗ್ಲೆ ಆಗ್ ಸಾಯ್ತಾನೊ ಈಗ್ ಸಾಯ್ತಾನೋ ಅನ್ನಂಗಾಗಿದ್ದ. ಮತ್ತೆ ಅಣ್ಣರಿಗೆ ಚಿಂತೆ ಹತ್ತು. ತಂದಿಗೆ ಮೂವರು ಇದ್ವಿ. ಈಗ ನಾವಿಬ್ರೆ ಆಕವಿ ಅಂತಂದು ತಮ್ಮುನ್ನ ಆ ಮಗನಿಂದ ಹೊರಾಕೆ ಕರ್ಕಂದು ಬಂದ್ರು, ಹೊಂಟ್ರು.

ಹೋಗುಂದ್ ಹೋಗುಂದ್ ಗುಡ್ಡದ ಕಡೆ ಹೊಂಟ್ರು. ಅವಗ ಅಲ್ಲೊಂದ ಮನಿ ಕಾಣ್ತು. ತಮ್ಮುನ್ನೇ ಆ ಮನಿತಾಕೆ ಒಯ್ದು ಬಾಕ್ಲು ಬಡ್ಡೇಲಿ ಕುಂದ್ರಿಸಿದ್ರು. ಆಮ್ಯಾಗೆ ಅಣ್ಣರು ಹಳ್ಳಕಡೆ ಹೋದ್ರು. ಕದ ತಗಿಯಾನ ನೋಡಾನ ಅಂತಂದು ಬಾಕ್ಲು ಮೇಲೆ ಕೈಯಿಟ್ಟ. ಆಗ ಅದ್ಕದೇ ಬಾಕ್ಲು ತೆರೆಯಿತು. ಅಲ್ಲಿ ನಾಗಾನಕ್ಕೆ ಜಾಗಾನಕ್ಕೆ ಅಂತ ಇಬ್ರು ಕಂಡ್ರು.

ಅವರಲ್ಲೆ ಮಾತುಕತೆ ನಡಿತಿತ್ತು. 'ನೀ ಒಂದ್ ಕತೆ ಹೇಳೆ, ನೀ ಒಂದ್ ಕತೆ ಹೇಳು' ಅಂತ ಅವರಿಬ್ರು ಮಾತಾಡ್ತ ಇದ್ರು. ಅದೇ ಸಮೇಕೆ ಹಳ್ಳದ್ ಕಡೆ ಹೋದ ಅಣ್ಣಾರು ಬಂದ್ರು. ಬಂದು ನೋಡ್ತಾರೆ ವಸಂತ ಕಾಣ್ಲಿಲ್ಲ. ಕದ ತಗಿಯಾಕೆ ಹೋಕಾರೆ ಏನ್ ಮಾಡಿದ್ರೂ ಕದ ತಗಿಲಿಲ್ಲ.

ಕೊನೆಗೆ ಮಕ ಸಪ್ಪಗೆ ಮಾಡ್ಕೊಂಡು 'ನಮ್ ತಮ್ಮ ಸತ್ತೋ್ಹಗಿ ಬಿಟ್ಟ' ಎಂದ್ಕಂತಾನೇ ಮನಿಗೆ ಬಂದ್ ಬಿಟ್ರು. ಮೂರು ದಿನಕೆ ಅವನ ತಿಥಿ ಮಾಡಾಕೆ ಅಂತ ಇಟ್ಕೊಂಡಿದ್ರು.

ಇಲ್ಲಾಲೆ ಎನ್ ನಡಿತಿತ್ತು 'ನೀ ಹೇಳು, ನೀ ಹೇಳು' ಎಂದೇ ಇಬ್ರೂ (ನಾಗಾನಕ್ಕೆ ಜೋಗಾನಕ್ಕೆ) ಹೇಳ್ತಿದ್ರಲ್ಲಾ ಆಗ ಹೇಳಿದ್ರು ಕತೇನ-ವಸಂತಗೆ ಆ ಮನಿಗೆ ಬರೋಮಟಕೂ ಹೇಳಿದ್ರು.

ಕಥೆ ಏನೋ ಮುಗೀತು. ಆವಾಗ ನಾಗಾನಕ್ಕೆ ಜೋಗಾನಕ್ಕೆ ''ಇವ್ರು ವಸಂತ ಕೇಳಿದ. ಅವ್ರು ಯಾರು ಅತೆ ಹಂಗಾದ್ರೆ?'' ಅಂದ. ಅವಗ ''ಒಳಗೆ ಕೇಳಕ್ಕೇನೆ ಅಡಕ ರಾಜನ ಮಗಳು ಅರಮಜೊತಿ, ಇಲ್ಲಿಕೇಳಾನೆ ವಸಂತ. ಅಂದ್ರೆ ನೀನೆ'' ಅಂದಾಗ ವಸಂತಗೆ ಒಮ್ಮೆಲೆ ಆಶ್ಚರ್ಯ ಆಯ್ತು.

ಅಡಕ ರಾಜನ ಮಗಳು ಅರಮಜೊತಿ ಒಳಗಿನಿಂದ ಬಂದ್ಲು. ಇಬ್ರೂ ಒಬ್ರಿಗೊಬ್ರು ಕೂಡ್ಕೊಂಡ್ರು. ಹೀಗೆ ಅಂದಿನ ದಿನ ಕಳುದ್ರು.

ಇಬ್ರೂ ಪಗಡಿ ಅಡಕರೆ ಅಣ್ಣ, ಅಣ್ಣಾರ ಹೆಂಡ್ರಿಗೆ ಬರಾಕೆ ಹೇಳಿ ಕಳ್ಸಿದ, ವಸಂತ ಅಂದ್ರ 'ಅಡಕ ರಾಜನ ಮಗಳು ಅರಮಜೊತಿ ಕರ್ಕಂದು ಬಂದೇನೆ. ದಂಡ ದರಬಾರು ಕರಗೊಂಡು ಬರ್ರಿ' ಅಂತ ಹೇಳಿ ಕಳಿಸಿದ. ಇನ್ನೇನು ತಿಥಿ ಮಾಡಾಕೆ ಹೊಂಟ ಅಣ್ಣಂದಿರು ಸತಿಯರನ ಕರ್ಕೊಂಡು ದಂಡು ದರಬಾರಿನ ಜೊತೇಲಿ ಬಂದ್ರು. ಆಗ ವಸಂತ ಅತ್ತಿಗೆಮ್ಮರಿಗೆ ಹೀಗಂದ: ''ಅಡಕರಾಜನ ಮಗಳು ಅರಮಜೊತಿ ಅಂದ್ರೆ ಈಕೇನೆ. ಹಿಂದೆ ಈಕೇನೆ ಕರ್ಕೊಂಡು ಬಂದಿದ್ದು. ಆದ್ರೆ ಕುಲ್ಡ್ ಕುಂಬಾರ್ತಿ ನನಿಗೆ ಮಾಡಿದ ಆಟ ಇದು'' ಎಂದು ವಿವರವಾಗಿ ಹೇಳಿದ.

'ಹಾದಿಗೆ ಹಂದ್ರ ಹಾಕಿ ಬೀದಿಗೆ ಚಳೆ ಕೊಟ್ಟ' ಅವರಿಬ್ರಿಗೂ ಮದುವೆ ಮಾಡಿ ಬಿಟ್ರು, ಜೊತಿಗೇನೆ ಬಂದಿದ್ದ ಕುಲ್ಡ್ ಕುಂಬಾರ್ತೀನ ಚಿಗಿದ ಅವದರೊಳಗೆ ತ್ವಾರಣ ಕಟ್ಟಿಹಾಕಿ ಹೋದ್ರು. ಇನ್ ಅವರು ಸುಖವಾಗಿ ಇರ್ತಾರೆ. ನಾವು ಇಲ್ಲಿ ಸುಖವಾಗಿ ಕೆಲ್ಸ ಮಾಡ್ತಾ ಇದೇವಿ.

**ದೀಪಾವಳಿ ಹಬ್ಬದ ಕರೆ**

ಒಬ್ಬಳು ತಾಯಿಗೆ ಎಂಟು ಜನ ಮಕ್ಕಳಿದ್ದರು. ಹಿರಿಯವಳು ಹುಡುಗಿ, ಉಳಿದ ಏಳು ಜನರು ಗಂಡು ಮಕ್ಕಳು. ಹಿರಿಯ ಹುಡುಗಿಯನ್ನು ದೂರದ ಊರಿಗೆ ಮದುವೆಮಾಡಿ ಕೊಟ್ಟಿದ್ದಳು. ಏಳುಜನ ಗಂಡು ಹುಡುಗರಿಗೂ ಮದುವೆಯಾಯಿತು.

ದೀಪಾವಳಿ ದೊಡ್ಡ ಹಬ್ಬ ಬಂದರೂ ಅಕ್ಕನನ್ನು ಕರೆಯಲಿಕ್ಕೆ ಯಾರೂ ಹೋಗಲಿಲ್ಲ. ತಾಯಿ ಕಿರಿಮಗನ ಕೂಡ, ''ತಮ್ಮಾ ನಿನ್ನ ಅಕ್ಕನನ್ನು ದೀಪಾವಳಿ ಹಬ್ಬಕ್ಕೆ ಕರೆದುಕೊಂಡು ಬಾ'' ಎಂದು ಹೇಳಿದಳು.

ಆಗ ಕಿರಿಮಗನು ಅಕ್ಕನನ್ನು ಕರೆದುಕೊಂಡು ಬರಲಿಕ್ಕೆ ಅಕ್ಕನ ಮನೆಯ ಊರಿಗೆ ಹೊರಟನು. ಅಕ್ಕನ ಮನೆಯಲ್ಲಿ ಒಂದು ರಾತ್ರಿ ಉಳಿದನು, ಮರುದಿನ ''ಭಾವಾ, ದೀಪಾವಳಿ ಹಬ್ಬಕ್ಕೆನಮಕ್ಕನನ್ನು ನಮ್ಮ ಮನೆಗೆ ಕಳಿಸಿಕೊಡು'' ಅಂದನು.

''ನೆಂಟಾ, ಅಕ್ಕನನ್ನು ಕಳಿಸಿಕೊಡಲಿಕ್ಕೆ ಆಗುವದಿಲ್ಲ. ಈಗ ಗದ್ದೆಕೊಯ್ಲು ಬಂದಿದೆ ಗದ್ದೆ ಕೊಯ್ದುಹಾಕಿ ಅಕ್ಕನನ್ನು ಕರೆದುಕೊಂಡು ಹೋಗು'' ಅಂದನು ಭಾವ.

ಅಕ್ಕ-ತಮ್ಮ-ಭಾವ ಮೂವರೂ ಕೂಡಿ ಮೂರು ದಿನಗಳಲ್ಲಿ ಗದ್ದೆಯನ್ನು ಕೊಯ್ದರು. ಗದ್ದೆಗಳನ್ನೆಲ್ಲಾಕೊಯ್ದು, ಕುತ್ರಿಗಳನ್ನು ಹಾಕಿಯಾಯಿತು, ''ಭಾವಾ, ಗದ್ದೆ ಕೊಯ್ದಾಯಿತು, ಇನ್ನು ಬೇಕಾದರೆ ನಮ್ಮ ಮನೆಗೆ ಅಕ್ಕನನ್ನು ಕಳಿಸಿಕೊಂಡು'' ಅಂದನು.

''ಛೇ! ಅಕ್ಕನನ್ನು ಕಳಿಸಿಕೊಡಲಿಕ್ಕೆ ಈಗ ಹೇಗೆ ಆಗುತ್ತದೆ? ಕುತ್ರಿ ಬಡಿಯುವದು ಬಂದು ಹೋಯಿತು. ಕುತ್ರಿ ಬಡಿದು, ಆಮೇಲೆ ನೀನು ನಿನ್ನ ಅಕ್ಕನನ್ನು ಕರೆದುಕೊಂಡು'' ಹಾಗು ಅಂದನು ಭಾವ, ಕಿರಿತಮ್ಮನು ಭಾವನ ಮನೆಯ ಕುತ್ರಿಗಳನ್ನು ಬಡಿಯುತ್ತ ಅಲ್ಲೇ ಉಳಿದನು.

''ದೀಪಾವಳಿ ಹಬ್ಬಕ್ಕೆ ಅಕ್ಕನನ್ನು ಕರೆಯಲಿಕ್ಕೆ ಹೋದವನು ತಮ್ಮ ಇನ್ನೂ ಬರಲಿಲ್ಲ ಯಾಕೆ ಬರಲಿಲ್ಲವೆಂತ ನಾನೇ ಹೋಗಿ ನೋಡಿ ಬರುತ್ತೇನೆ. ಏನು ಮಾಡುತ್ತಿದ್ದಾನೆ ಅಂತ ನೋಡಿ ಬರುತ್ತೇನೆ'' ಅಂತ ಆರನೆಯ ತಮ್ಮ ಹೇಳಿದನು.

ಅವನು ಭಾವನ ಮನೆಗೆ ಹೋದನು, ಮರುದಿನ ಬೆಳಿಗ್ಗೆ ''ಭಾವಾ, ಅಕ್ಕನನ್ನು ನಮ್ಮ ಮನೆಗೆ ಕಳಿಸಿಕೊಂಡು'' ಅಂದನು.

''ನೆಂಟಾ ಕುತ್ರಿ ಕೈ ಬಡಿದಾಯಿತು. ಭತ್ತ ಮರಿಯುವದು ಬಂದು ಹೋಯಿತು. ಭತ್ತ ಮೆರಿದು, ಮುಗಿದ ಮೇಲೆ ಅವಳನ್ನು ಕರೆದುಬಂಡು ಹೋಗಿ, ಈಗ ಅಕ್ಕನನ್ನು ಕಳಿಸಿಕೊಡುವದು ಆಗದು.''

ಭಾವನಿಗೆ ಬಹಳ ಜಮೀನಿತ್ತು, ಬೇಗ ಕೆಲಸ ಆಗ ಮುಗಿಯುತ್ತಿರಲಿಲ್ಲ. ಒಂದು ತಿಂಗಳ ತನಕ ನಾಲ್ಕೂಜನರು ಮೆರಿದರು.

ಐದನೆಯ ತಮ್ಮನು, ''ನಮ್ಮ ತಮ್ಮಂದಿರು ಅಕ್ಕನನ್ನು ಕರೆದುಕೊಂಡು ಬರಲಿಕ್ಕೆ ಹೋಗಿ ಬಹಳ ದಿನಗಳಾದವು. ಇನ್ನೂ ಬರಲಿಲ್ಲ. ನಾನೇ ಹೋಗಿ ಬರುತ್ತೇನೆ'' ಎಂದು ಹೇಳಿ ಭಾವನ ಮನೆಗೆ ಹೊರಟನು.

ಅವನು ಹೋಗಿ ಒಂದು ದಿನ ಉಳಿದನು. ಮರುದಿನ ''ಭಾವಾ, ನಮ್ಮ ಅಕ್ಕನನ್ನು ಕಳಿಸಿಕೊಂಡು'' ಅಂದನು.

''ಇದೆ ! ಭತ್ತವನ್ನು ಮೆರಿದು ಮಾತ್ರವಾಯಿತು. ಇನ್ನೂ ಅಕ್ಕಿ ಮೂಡೆ ಕಟ್ಟಲಿಲ್ಲ, ಅಕ್ಕಿಮೂಡೆಗಳನ್ನು ಕಟ್ಟಿಕೊಂಡು, ನೀವು ನಿಮ್ಮ ಅಕ್ಕನನ್ನು ಕರೆದುಕೊಂಡು ಹೋಗಿರಿ''

ಅಕ್ಕಿ ಮೂಡೆಗಳನ್ನೆಲ್ಲಾ ಕಟ್ಟಿಯಾಯಿತು, ಮತ್ತೊಬ್ಬನೂ ''ಇವರು ಇನ್ನೂ ಅಲ್ಲೇ ಉಳಿದುಬಿಟ್ಟಿದ್ದಾರೆ. ಯಾಕೆ ಬರಲಿಲ್ಲ; ನೋಡಿ ಬರಬೇಕು'' ಅಂತ ಹೊರಟನು.

''ಭಾವಾ, ಅಕ್ಕನನ್ನು ಇನ್ನಾದರೂ ಕಳಿಸಿಕೊಡು'' ಅಂದನು, ''ಅಕ್ಕನನನ್ನು ಕಳಿಸಿಕೊಡವದು ಹೇಗೆ? ಅಕ್ಕಿ ಮೂಡೆಗಳನ್ನು ಕಟ್ಟಿಯಾಯಿತು. ಗೊಬ್ಬರ ಹೊರುವದು ಬಂದೇ ಹೋಯಿತು. ಆದಷ್ಟು ಗೊಬ್ಬರ ಹೊತ್ತುಕೊಂಡು ಕರೆದುಕೊಂಡು ಹೋಗಿ'' ಏದು ಜನರಿದ್ದರು. ಅವರು ಗೊಬ್ಬರ ಹೊತ್ತು ಮುಗಿಸಿದರು.

''ಭಾವಾ ಇನ್ನು ಬೇಕಾದರೆ ಅಕ್ಕನನ್ನು ಕಳಿಸಿಕೊಡು'' ಅಂದನು. ''ನೆಂಟಾ, ಅಕ್ಕನನ್ನು ಕಳಿಸಿಕೊಡಲಿಕ್ಕೆ ತಡವುಂಟು. ಗೊಬ್ಬರ ಹೊತ್ತಾಯಿತು. ಆದರೆ ಗದ್ದೆಗಳನ್ನು ಇನ್ನೂ ಪುನಃ ಹೂಡಲಿಲ್ಲ. ಬೀಜ ಹಾಕಲಿಲ್ಲ ಗದ್ದೆ ಹೂಡಿ, ಗದ್ದೆಗಳಿಗೆ ಬೀಜ ಹಾಕಿ, ನಿಮ್ಮ ಅಕ್ಕನನ್ನು ಕರೆದುಕೊಂಡು ಹೋಗಿ'' ಗದ್ದೆ ಹೂಡಿ, ಬೀಜ ಹಾಕುತ್ತಿದ್ದರು.

ಆಗ, ''ತಮ್ಮಂದಿರು ನಾಲ್ಕು ಜನ ಹೋದವರು ಅಕ್ಕನನ್ನು ಕರೆದುಕೊಂಡು ಬರುವದರ ಬದಲು ತಾವೇ ಅಕ್ಕನಮನೆಯಲ್ಲಿ ಇದ್ದು ಬಿಟ್ಟಿದ್ದಾರೆ. ನಾನೇ ಹೋಗಬೇಕಾಯಿತು'' ಅಂತ ಹೇಳಿ ಅಕ್ಕನಮನೆಗೆ ಹೋದನು.

''ಭಾವಾ, ಅಕ್ಕನನ್ನು ನಮ್ಮಮನೆಗೆ ಕಳಿಸಿಕೊಂಡು'' ಅಂದನು. ''ಅಕ್ಕನನ್ನು ಕಳಿಸಿಕೊಡಲಿಕ್ಕೆ ಇನ್ನೂ ಗದ್ದೆಗಳಿಗೆ ಬೀಜ ಹಾಕುವದು ಪೂರಾ ಮುಗಿಯಲಿಲ್ಲ. ಗದ್ದೆಗೆ ಬೀಜಹಾಕಿ, ಕರೆದುಕೊಂಡು ಹೋಗಿ.''

ಆಗ ಇವರು ಗದ್ದೆಯನ್ನು ಪುನಃ ಹೂಡಿ ಬೇಗ ಬೇಗೆ ಬೀಜ ಹಾಕಿದರು. ಬೀಜ ಹಾಕುವದು ಮುಗಿದ ಮೇಲೆ, ''ಭಾವಾ, ನಮ್ಮ ಅಕ್ಕನನ್ನು ಕಳಿಸಿಕೊಡು'' ಅಂದನು.

''ಛೇ ! ಈಗ ಸಸಿಗಳು ದೊಡ್ಡವಾಗಿ ಹೋದವು. ಗದ್ದೆನೆಟ್ಟಿ ಮಾಡಿ ಅಕ್ಕನನ್ನು ಕರೆದುಕೊಂಡು ಹೋಗಿ.''

ಆರೇಳುಜನ ಕೂಡಿ ಬೇಗ ಬೇಗನೆ ಗದ್ದೆನೆಟ್ಟಿಯನ್ನು ಮಾಡಿದರು. ''ತಮ್ಮಂದಿರು ಇನ್ನೂ ಬರಲಿಲ್ಲ. ಅಕ್ಕನನ್ನು ಕರೆ ತರಲಿಕ್ಕೆ ಹೋದವರಿಗೆಲ್ಲ ಏನು ತೊಂದರೆಯಾಗಿದೆಯೆಂದು ನಾನು ನೋಡಿ ಅಕ್ಕನನ್ನು ಕರೆದುಕೊಂಡು ಬರುತ್ತೇನೆ'' ಅಂತ ಹೇಳಿ ಆರನೆಯ ತಮ್ಮ ಹೋದನು. ''ಭಾವಾ, ಅಕ್ಕನನ್ನು ಕಳಿಸಿಕೊಂಡು'' ಅಂದನು.

''ನೆಂಟಾ, ಗದ್ದೆನೆಟ್ಟಿಯೇ ಇನ್ನೂ ಪೂರಾ ಆಗಲಿಲ್ಲ. ಗದ್ದೆನೆಟ್ಟಿಯನ್ನು ಮುಗಿಸಿ ಅಕ್ಕನನ್ನು ಕರೆದುಕೊಂಡು ಹೋಗಿ.''

ಆರೆಂಟುಜನ ಕೂಡಿ ಗದ್ದೆನೆಟ್ಟಿಯನ್ನು ಬೇಗ ಬೇಗ ಮುಗಿಸಿದರು. ಇಲ್ಲಿ ಮನೆಯಲ್ಲಿ ಒಬ್ಬ ಮಾತ್ರ ಉಳಿದನು. ಅವನು ''ಅಪ್ಪಾ, ತಮ್ಮಂದಿರು ಅಕ್ಕನನ್ನು ಕರೆಯಲಿಕ್ಕೆ ಹೋಗಿ ಒಂದು ವರ್ಷವಾಗಿ ಹೋಯಿತು. ಇನ್ನೂ ಬರಲಿಲ್ಲ. ಅವರು ಯಾಕೆ ಬರಲಿಲ್ಲವೆಂದು ನೋಡಿಕೊಂಡು ಅವರನ್ನೂ ಅಕ್ಕನನ್ನೂ ಕರೆದುಕೊಂಡು ಬರುತ್ತೇನೆ'' ಅಂತ ಹೇಳಿ ಹೊರಟನು.

''ಭಾವಾ, ನಮ್ಮ ಅಕ್ಕನನ್ನೂ ತಮ್ಮಂದಿರನ್ನೂ ಕಳಿಸಿಕೊಡು'' ಅಂದನು. ''ನೆಂಟಾ, ಗದ್ದೆ ನೆಟ್ಟಿ ಮುಗಿಯಿತು. ಕಳೆ ಹುಲ್ಲು ತುಂಬಾ ಆಗಿದೆ, ನೀವೆಲ್ಲರೂ ಕಳೆ ತೆಗೆದುಕೊಂಡು ಅವಳನ್ನು ಕರೆದುಕೊಂಡು ಹೋಗಿ.''

ಆಗ ಎಂಟುಜನ ಕೂಡಿ ಕಳೆಯನ್ನು ಪೂರಾ ಕಿತ್ತುಹಾಕಿದರು. ಭಾವನು, ''ಇನ್ನು ಬೇಕಾದರೆ ನಿಮ್ಮ ಅಕ್ಕನನ್ನು ಕರೆದುಕೊಂಡು ಹೋಗಿ'' ಅಂತ ಹೇಳಿದನು.

ಅಕ್ಕನನ್ನು, ''ನನ್ನ ತಾಯಿಮನೆಯ ದಾರಿ ಬಹಳ ದೂರ, ತಮ್ಮಂದಿರು ಸಣ್ಣವರು, ದಾರಿಯಮೇಲೆ ಅವರಿಗೆ ಹಸಿವಾದೀತು'' ಅಂತ ಹೇಳಿ, ವಡೆ-ಉಂಡೆ, ಚಕ್ಕುಲಿ ಮುಂತಾದ ಕಜ್ಜಾಯಗಳನ್ನು ಮಾಡಿ ಹೊರೆ ಕಟ್ಟಿದಳು, ರಮಾಣಿಯಾಗಿ ಕಜ್ಜಾಯದ ಹೊರೆ ಹೊತ್ತುಕೊಂಡು ತಮ್ಮಂದಿರನ್ನು ಕರೆದುಕೊಂಡು ತಾಯ ಮನೆಗೆ ಹೊರಟಳು.

ತಮ್ಮಂದಿರನ್ನು ಮುಂದೆ ಮಾಡಿಕೊಂಡು ತಾನು ಹಿಂದೆ ಹೊರಟಳು. ಬರುವಾಗ ತಮ್ಮಂದಿರಿಗೆ ಹಸಿವಾಯಿತು. ಕಜ್ಜಾಯದ ಪೊಟ್ಟಣ ಬಿಚ್ಚಿ, ಏಳೂ ಜನರಿಗೆ ಕೊಟ್ಟು ತಾನೂ ತಿಂದಳು. ಉಳಿದ ಕಜ್ಜಾನ್ನು ಹಾಗೇ ಕಟ್ಟಿದಳು. ತಮ್ಮಂದಿರನ್ನು ಕರೆದುಕೊಂಡು ಬಂದಳು.

ನಡುದಾರಿಯಲ್ಲಿ ಬಂದುಕೊಂಡು ''ಅಕ್ಕಾ ನನಗೆ ಹಸಿವೆ, ನನಗೆ ಹಸಿವೆ'' ಅಂದರು. ಪೊಟ್ಟಣವನ್ನು ಬಿಚ್ಚಿ ಇದ್ದ ಕಜ್ಜಾಯವನೆಲ್ಲ ತೆಗೆದಳು. ತಮ್ಮಂದಿರಿಗೂ ಕೊಟ್ಟು ತಾನೂ ತಿಂದಳು. ತಮ್ಮಂದಿರೊಡನೆ ಮುಂದೆ ಬಂದಳು.

ಮತ್ತೆ ಮುಂದೆ ಬಂದುಕೊಂಡು, ''ಅಕ್ಕಾ ನನಗೆ ಹಸಿವಾಯಿತು; ನನಗೆ ಹಸಿವಾಯಿತು'' ಅಂದರು

''ನಿಮಗೆ ಹಸಿವಾದರೆ ಏನನ್ನು ಕೊಡಲಿ? ಕಜ್ಜಾಯ ತಂದಿದ್ದೆ; ಎಲ್ಲಾ ತಿಂದಾಯಿತು, ಇನ್ನೂ ಏನೂ ಇಲ್ಲ'' ಅಂದಳು.

ಮತ್ತೆ ಅವರು ''ನನಗೆ ಹಸಿವೆ; ನನಗೆ ಹಸಿವೆ ಆಗಿದೆ ತಿನ್ನಲಿಕ್ಕೆ ಕೊಡು ನನಗೆ ಕೊಡು; ತನಗೆ ಕೊಡು'' ಅಂತ ಹೇಳಿದರು.

''ನಾನು ಏನನ್ನು ಕೊಡಲಿ? ಇನ್ನು ಕೊಡಲಿಕ್ಕೆ ನನ್ನ ಹತ್ತಿ ಏನಿಲ್ಲ. ನನ್ನನ್ನೇ ಕಚ್ಚಿಕೊಂಡು ತಿಂದು ಬಿಡಿ'' ಅಂದಳು

ಆಗ ಆರುಜನ ತಮ್ಮಂದಿರು ಅಕ್ಕನನ್ನು ಕೊಚ್ಚಿಕೊಂಡು, ಏಳುಪಾಲು ಮಾಡಿದರು. ಆರುಜನ ತಮ್ಮ ಪಾಲಿನ ಮಾಂಸ ತಿಂದುಬಿಟ್ಟರು. ಕಿರಿಯನು ತನಗೆ ಕೊಟ್ಟ ಪಾಲನ್ನು ಹಾಗಯೇ ಕಟ್ಟಿಕೊಂಡನು, ಕಟ್ಟಿಕೊಂಡು ಹೋಗಿ ಮನೆಗೆ ದಣಪೆಯಹತ್ತರ ಹುಗಿದನು.

ಅಣ್ಣಂದಿರೆಲ್ಲ ಮನೆ ಹೊಕ್ಕರು. ಕಿರಿತಮ್ಮನೂ ಒಳಗೆ ಹೊಕ್ಕನು. ತಾಯಿ 'ಅಕ್ಕ ಬರಲಿಲ್ಲವೋ? ಅಕ್ಕ ಎಲ್ಲಿ ಹೋದಳು?' ಅಂತ ಕೇಳಿದಳು.

ನಮಗೆ ಹಸಿವಾದಲ್ಲೆಲ್ಲ ಪೊಟ್ಟಣ ಬಿಚ್ಚಿ ನಮಗೆ ಕಜ್ಜಾಯ ಕೊಟ್ಟಳು. ಕಡೆಗೆ ತಂದ ಕಜ್ಜಾಯ ಖರ್ಚಾಯಿತು. ಮತ್ತೆ ಹಸಿವಾದಾಗ ಕೇಳಿದರು. 'ಏನೂ ಇಲ್ಲ, ಎಲ್ಲಾ ಖರ್ಚಾಯ್ತು' ಅಂದಳು. ಅಣ್ಣಂದಿರು ಏನು ಇಲ್ಲಿ ಅಂದರೂ ಕೇಳಲಿಲ್ಲ. 'ಮತ್ತೆ ಕೊಡು' ಅಂದರು. ಅಕ್ಕ ಆಗ ಹೇಳಿದಳು-

"ನನ್ನ ಕೂಡ ಕಜ್ಜಾಯವೇನಿಲ್ಲ. ಹಸಿವು ಅಷ್ಟಾದರೆ ನನ್ನನ್ನೇ ಕೊಚ್ಚಿಕೊಂಡು ತಿನ್ನಿ" ಅಂದಳು. ಅಣ್ಣಂದಿರು ಅಕ್ಕನನ್ನೇ ಹಿಡಿದು ಕೊಚ್ಚಿ ಪಾಲು ಹಾಕಿಕೊಂಡು ತಿಂದರು. ಏಳುಪಾಲು ಹಾಕಿದ್ದರು. ಆರುಜನ ಆರುಪಾಲು ತಿಂದರು. ನನ್ನ ಪಾಲನ್ನು ನಾನೇನು ತಿನ್ನಲಿಲ್ಲ. ಹಾಗೆ ಕಟ್ಟಿಕೊಂಡು ಬಂದು ದಣಪೆಯ ಹತ್ತರ ಹುಗಿದಿಟ್ಟಿದ್ದೆನೆ ಅಂದನು.

'ಹೌದೇ ಮಗನೇ, ಎಲ್ಲಿ ಹುಗಿದಿಟ್ಟಿ? ನನಗೆ ತೋರಿಕೊಡು' ಅಂದಳು ಆಗ ಕಿರಿಮಗನು ಹೋಗಿ ಹುಗಿದಿಟ್ಟ ಆ ಪಾಲನ್ನು ತೆಗೆದು ತಾಯಿಗೆ ಕೊಟ್ಟನು. ತಾಯಿ ಪರಮಾತ್ಮನ ಜಾನ ಮಾಡಿ ಆ ಮಗಳಜೀವ ಪಡೆದೇ ಬಿಟ್ಟಳು. ಅವಳು ಹನ್ನೆರಡು ವರ್ಷಗಳ ಹುಡುಗಿಯಾಗಿ ಕೂತಳು. ಅಕ್ಕ ಒಂದು ತಿಂಗಳು ತಾಯಿಮನೆಯಲ್ಲಿ ಉಳಿದು ಗಂಡನಮನೆಗೆ ಹೋದಳು. ಅಣ್ಣಂದಿರು ತಮ್ಮಂದಿರು ತಮ್ಮ ಮನೆಯಲ್ಲಿ ಉಳಿದರು.

### ದೀಪ ಮಾತಾಡಿತು

ಒಂದೂರಾಗ ಅತ್ತಿಗಿ ನಾದಿನಿ ಇದ್ರು ನಾದಿನಿ ನೀರು ಹೊಯ್ಕಂಡಿದ್ದಳು ಐದರಾಗ ಅಣ್ಣ ತಂಗೀಗ ಕರಕೊಂಡು ಬರಲಿಕ ಹೋದ. ಕರಕೊಂಡು ಬಂದ ಅತಲ್ಯಾಗ ಒಂದು ಬಾಳೆಗಿಡ ಇತ್ತು. ಅದರ ಬುಡಕ್ಕ ಅಣ್ಣ ತಂಗಿ ಮನಕೊಂಡರು. ತಂಗಿ ನದ್ರ್ಯಾಗ ಗುರ್ ಹೊಡೆದಳು ಹೊಟ್ಯಾಗಿನ ಕೂಸು ಗೊರಕಿ ಹೊಡಿತದ ಎಂದು ಅಣ್ಣ ತಂಗೀಗ ಲಗೂ ಮಾಡಿ ಮನೀಗಿ ಕರಕೊಂಡು ಬಂದ.

ಅತಿಗಿ ಎಷ್ಟಾದರೂ ಅತಿಗೀನೆ ನಾದಿನಿಗಿ ನವಣಕ್ಕಿ , ಹಾರಕಿನ ಅಕ್ಕಿ ಉಣಿಸಿದಳೇ ಹೊರತು ನೆಲ್ಲಕ್ಕಿಯ ಅನ್ನಮಾಡಿ ನೀಡಲಿಲ್ಲ. ತಂಗೀಗಿ, ಆಕೀ ಮಕ್ಕಳೀಗಿ ಮನೆಮುಟ್ಟಿಸಿ ಅಣ್ಣ ಹೊಲಕ್ಕೆ ಹೋದ. ಗಂಡಗ ಶೀವಿಗಿ, ಬಾನಾ ಮಾಡಿ ನೀಡಿದರೆ ನಾದಿನಿ ಮಕ್ಕಳಿಗೆ, ಮನಸ್ಯಾಗ ಒಂದೊಂದು ಬಿಲ್ಲಿರೊಟ್ಟಿ ನವಣಕ್ಕಿ ಬಾನಾಮಾಡಿ ನೀಡಿದಳು. ಕೊಟಗ್ಯಾಗ ಮನಗಿಸಿದಳು. ಹೊಲದಿಂದ ಬಂದ ಗಂಡಗ ಹೇಳಿದಳು ನಾದಿನ ಮತ್ತು ಕೂಸುಗಳೆಲ್ಲವೂ ಉಂಡವು. ನಾಲ್ಕೈದುದಿನ ದಿನಾಲು ಉಡುಗಿನ ದಾಣೆ ಉಣಿಸಿ, ಗಂಡ ಬರೋಕಿಂತ ಪಹಲೇನೆ ಉಣಿಸಿ ಇನ್ನು ಮನಕೋರಿ ಎಂದು ಹೇಳುತ್ತಿದ್ದಳು. ಗಂಡನಿಗಿ ಹೆಂಡತಿಯ ಒಳಗಿನ ತಿಪಲ ಮಾತ್ರ ಕಿಲಾನ ಆಗಲಿಲ್ಲ. ಹೀಂಗೇ ಎಂಟುದಿನ ನಡೀತು. ಇನ್ನ ಹೋಗಾರಿ ಆಯ್ತು ಅಂದಕೊಂಡಳು. ಅಣ್ಣಾ ನಾ ಇನ್ನ ಹೋಗತೀನು ನಮ್ಮ ಮನೀಗಿ ಅಂದಾಗ ತಂಗೀಗಿ ಸೀರಿ, ಹುಡುಗರಿಗಿ ಅರಿವೆ ತರಬೇಕು ಎಂದಾಗ ಅಣ್ಣನ ಹೆಂಡತಿ ನಾನೇ ತರಲೇ ನೀರೊಕ್ಕ ತಾತಾ ಅಂದಳು. ನೂರುದಿಡಸೆ ಪದರಾಗ ಕಟಕೊಂಡು ದುಕಾನಕ್ಕೆ ಹೊಂಟಳು. ಆಕಡಿ ಈಕಡಿ ಓಡಾಡಿ ತಿಪ್ಪಮ್ಯಾಲಿಂದು ಮೋಸಂಡೀ ಮ್ಯಾಗಿಂದು ಅರಿಬಿ ಜೋಡಿಸಿದಳು. ಕತ್ತಲಾಗುದಕ್ಕೆ ಮನೀಗಿ ಬಂದಳು ದೊಡ್ಡ ಗಂಟುಕಟ್ಟಿ ಇಟ್ಟಳು. ನಾಳೀಗಿ ಇದನ್ನು ಒಯ್ಯ್ ಎಂದು ನಾದಿನಿಗೆ ಹೇಳಿಬಿಟ್ಟಳು. ಬಾನ ಬ್ಯಾಳಿ ಮಾಡಿ ಗಂಡಗ ಉಣಿಸಿದಳು. ನಾದಿನ ಮತ್ತು ಅವಳ ಮಕ್ಕಳಿಗೆ ನವಣಕ್ಕೆ ಬಾನ ತಪ್ಪಲಿಲ್ಲ.

ಅಣ್ಣಾ ಹರ್ಯಾಕ್ತಿಗಿ ಹೊಲಕ್ಕೆ ಹೋಗುವಾಗ ತಂಗಿ ಮಕ್ಕಳೊಂದಗಿತ್ತಿ ೮ ೧೦ರೊಟ್ಟಿ ಮಾಡಿಕಟ್ಟು ಎಂದು ಹೂಂ ಎಂದ ಹೆಂಡತಿ ನಸಕಿನಾಗೆದ್ದು ರೊಟ್ಟಿ ಮಾಡಲಿಲ್ಲ. ದೊಡ್ಡ ದೊಡ್ಡ ಹಲಪಿಕುಳ್ಳು ತಂದು, ಕುಂಚಿಗ್ಯಾಗಹಾಕಿ ಕಟ್ಟಿದಳು. ಅಲ್ಲೇ ಹೋಗಿ ಉಟಗೋರಿ, ಉಟುಗೊಂಡು ಮೆರೀರಿ ಎಂದು ಅರಿಬಿ ಬಿಂಡೆ ತಂದಿಕ್ಕಿದಳು

ಹದ್ಯಾಗ ಅಣ್ಣನ ಹೊಲ, ಸೌತೇ ಬಳ್ಳಿಯ ಗುಂಟ ಕಾಯಿನೆ ಕಾಯಿ ಹರವಿದ್ದವು. ಪೊರಗೋಳಿಗಿ ಹಸಿವಿ ಆಗಿದ್ದವು. ಅವು ಸವತೀಕಾಯಿ ಕಡಕೊಂಡು ತಿಂದವು. ಹೊಲದೊಳಗಿದ್ದ ಆಳುಮಕ್ಕಳು ''ನೀ ಯಾರವ್ವ? ಇಲ್ಲಿಯಾಕ ಬಂದೀದಿ'' ಎಂದು ಬೆದರಿಸಿದವು ''ಚಂದ್ರಪ್ಪನ ತಂಗಿ ಆಗಬೇಕು'' ಎಂದಳು ವವಾಳಿ ಸವತೀಕಾಯಿ ತಾಯಿ ಮಕ್ಕಳ ತಿಂದರು; ಕುಂಚಿಗ್ಯಾರ ಕಟ್ಟಿಕೊಂಡು ಮುಂದೆ ನಡೆದರು. ಹೊಂಟ ನಿಂತಾಗ ಮನಸು ತುಂಬಿ ಹರಕಿಕೊಟ್ಟಳು. ''ಕಂಟಿಕೂತ್ವಾಗ ಹೊಲದ ಬೆಳಿ ಬೆಳೀಲಿ, ಮುತ್ತು ರತ್ನ ಬೆಳೀಲಿ, ನಮ್ಮಣ್ಣ ಆಶುಳ್ಳವ ಆಗಲಿ ಶಂಭರವರ್ಷ ಆಯುಷ್ಯಾಗಲಿ'' ಎಂದು

ಹುದ್ಯಾಗ ಹಳ್ಳಿ ಹರೀತಿತ್ತು ಕೂಸುಗಳು ಹಸಿದು ಕಂಗಾಲಾಗಿದ್ದವು. ಮಗಾ ನಿಮ್ಮತ್ತಿ ಬುತ್ತಿ ಕಟ್ಯಾಳ ಬಿಟ್ಟಿರೋ ಅಂದಳು ಬಿಚ್ಚಿ ನೋಡತನ ಬುತ್ಯಾಗ ಕುಳ್ಳು ಅದೆ. ಹೆಂಡಿ ಅದೆ. ಅರಬೀಗಂಟನ್ನೂ ಬಿಚ್ಚಿ ನೋಡಿದರೆ ಅಲ್ಲಿ ಮಶಾಂಡದನ ಅರಬಿ ಅದ. ಅರಬಿ, ಕುಳ್ಳು ಎಲ್ಲಾ ಹರಿಯೂ ಗಂಗೆಯೊಳಗೆ ಒಗದು ಬಿಟ್ಟಳು ''ಶಿವ ನಮಗೆ ಹೆಲಥಾವೇಳೆ ತಂದಪಾ'' ಎಂದು ಅವ್ವ ಮಕ್ಕಳು ಗೊಳೋ ಎಂದು ಅತ್ತರು.

ಶಿವ ಪಾರ್ವತಿ ಆ ಕಡಿಂದ ಬಂದರು ''ಯಾಕವ್ವ ಯಾಕಳತೀ'' ಎಂದು ಕೇಳಿದರು. ''ದೈವುಳ್ಳು ಅಣ್ಣನ ಮನೀಗಿ ಹೋದ್ರೆ ಅತ್ತಿಗಿ ಬಿಲ್ಲೆರೊಟ್ಟಿ ಮಕ್ಕಳ ಕೈಯಾಗ ಕೊಟ್ಟಳು. ಬುತ್ತಿ ಅಂತಹೇಳಿ ಕುಳಬಾನದಾಗಿನ ಕುಳ್ಳು ಕಟ್ಯಾಳ ನಂದು ಖೊಟ್ಟಿ ನಸೀಬ'' ಎಂದಳು

ಶಿವಾ ಎಂದ ತಂಗೀ ಮನೀಗಿ ಹೋಗು. ಶಿವಪೂಜಿ ಮಾಡು ನೀ ಬಯಸಿದ್ದು ಸಿಗತಾದ.

ಆರೆ ಮನೆಗೆ ಹೋದಳು. ಮೈತಕೊಂಡು ದೀಪ ಹಚ್ಚಿ ದೇವರ ಮುಂದೆ ಅಡ್ಡಬಿದ್ದಳು. ಮನಸೀಗಿ ಬಂದದ್ದೆಲ್ಲ ಬೇಡಿದಳು. ಮನೀತುಂಬ ತುಂಬಿತು. ಯಾತಕ್ಕೂ ಯೇನೂ ಕೊರತಿ ಬೀಳಲಿಲ್ಲ.

ಜಬರದಸ್ತ ಒಕ್ಕಲುತನ ಮಾಡಿದರು. ಒಂದು ಜೋಡು ಎತ್ತು ಬೇಕಾದವು. ರೊಕ್ಕ ಪದರಾಗ ಕಟಗೊಂಡು ತಂಗಿ ಸಂತೀಗಿ ಹೋದಳು. ಅತಿಗೀನೂ ಸಂತಿಗಿ ಬಂದಿದ್ದಳು ನಾದಿನಿಯು ಸೀರೇನು, ತೆನಿತಿರುವಿದ ಕುಬಸೇನು, ಮೈಮೇಲಿನ ಡಾಗೀಣೇನು ಝೋಕ ಆಗ್ಯಾಳೆಂದು ಮನಸಿನಾಗಿ ಹಲ್ಲು ಕಡಿದಳು. ಹೊಟ್ಯಾಗ ಬೆಂಕಿ ಬಿದ್ದಂಗಾಯ್ತು ಅವಳಿಗೆ ಸರ್ರನೆ ಮನೀಗಿ ಹೋಗಿಬಿಟ್ಟಳು.

ತಂಗೀನೂ ತನ್ನ ಮನೀಗಿ ಬಂದಳು ರಾತ್ರಿ ದೀಪ ಮಾತಾಡಿತು ''ಎಲ್ಲಾರು ಬಂದು ಹೋದರು ನಾನುಬಿ ಯಾವಾಗ ಹೋಗಲಿ'' ಎಂದು ಕೇಳೇ ಕೇಳಿತು. ತಂಗಿ ತನ್ನ ತಾಪ ಎಲ್ಲ ದೀಪದ ಮುಂದೆ ಒಡೆದು ಹೇಳಿದಳು ನಿನ್ನ ಮಕ್ಕಳು ಮರಿ ಬಹಳಾ ಏನವಾಸ ಕಳೆದಾವ ನನ್ನ ಅತ್ತಿಗೆ ಬಿಲ್ಲಿರೊಟ್ಟಿ ಕೊಟ್ಟಾಳ ಕುಳ್ಳಿನ ಬುತ್ತಿಕಟ್ಯಾಳ ನೀನೇ ನನ್ನ ಸಾಥೀ ನೀ ಬಿಟ್ಟು ಹೋದರ ನಾ ಹ್ಯಾಂಗ್ ಇರಲಿ

ಇಂತಿ ಅತಿಗೆ ಮನೀಗಿ ಹೋಗಿ ಗಂಡಗ ಹೇಳ್ತಾಳ ನಿನ್ನ ತಂಗಿಯ ಗುಣಾನೇ ಚಂದಿಲ್ಲ. ಅಕಾ ಅವಳ ಸೀರೇನು ಅವಳ ಥಾಟೇನು. ಹೆಂಗೋ ಏನೋ ಕೊಡಲಿ ತಗೊಂಡು ತಂಗೀಗಿ ಕಡೀಲಿಕ್ಕ ಹೊಂಟಾನ, ತಂಗೀ ಜ್ಯೋತಿ ಸುತ್ತ ಏನಾದಾಡಿದ್ದು ಕೇಳಿಸಗೋತನ, ದೇವರೆ ನೀನೆ ಕಾಯಿ ಎಂದು ದೇವರ ಮುಂದ ಅಡ್ಡ ಬಿಳೋದು ನೋಡ್ತಾನೆ ಮನಸೀನಾಗ ಅಂತನ

‘‘ನನ್ನ ತಂಗಿಯ ತಾಪ ನನಗೆ ಇಂದ ಖೂನ ಆಯ್ತು ಎಲಾ ಅವಳ, ನನ್ನ ಖಾಸಾ ಒಡಹುಟ್ಟಿದ ತಂಗೀಗಿ ಮುಲ್ಯಾಗಿನ ದೌಣಿ ಉಡಿಸಿದಳಲ್ಲಾ’’

ತಂಗೀ ಮುಂದ ಅಣ್ಣಾ ಬಂದು ‘‘ನಂದುಕಡೆ ತಪ್ಪಾಯಿತು. ಕ್ಷಮಾ ಇರಲಿ’’ ಎಂದು ತಂಗಿಗೆ ಅಣ್ಣನಿಗೆ ತಂಗಿ ಶಾವಿಗಿ ಬಾನಾ ಮಾಡಿ ನೀಡಿದಳು.

ತನ್ನ ಮನಿಗೆ ಹೋಗಿ ಇಂಥಾ ಕೆಟ್ಟ ಇಚಾರ ಮಾಡಿದಕ್ಕೆ ಹೆಂಡತಿಗಿ ಅದೇ ಕೊಡಲಿಯಿಂದ ಕಡಿದು ಹಾಕಿದ.

**ದೀಪಕರ್ಣಿ**

ಗುಣಾಢ್ಯನ ಬೃಹತ್ಕಥೆಯಲ್ಲಿ ಬರುವ ಒಂದು ಪಾತ್ರ ದೀಪಕರ್ಣಿ ಎಂಬುವನು ಒಬ್ಬರಾಜ. ಈತನಿಗೆ ಶಕ್ತಿಮತಿ ಎಂಬುವಳು ಹೆಂಡತಿ ಒಂದು ದಿನ ಈಕೆ ಉದ್ಯಾನವನದಲ್ಲಿ ಕುಳಿತಿರುವಾಗ ಒಂದು ಸರ್ಪವು ಕಚ್ಚಿದ್ದರಿಂದ ಮೃತಳಾದಳು. ಹೆಂಡತಿ ತನ್ನನ್ನು ತೊರೆದು ಹೋದುದರಿಂದ ದೀಪಕರ್ಣಿಯು ಬ್ರಹ್ಮಚರ್ಯವನ್ನು ಸ್ವೀಕರಿಸಿದನು. ತನ್ನ ಮುಂದಿನ ಉತ್ತರಾಧಿಕಾರಿಯಾಗಲು ಇಲ್ಲದುದರಿಂದ ಬಹುವಾಗಿ ಸಂಕಟ ಪಡುತ್ತಿದ್ದನು. ಒಂದು ದಿನ ಶಿವನು ಇವನ ಕನಸ್ಸಿನಲ್ಲಿ ಬಂದು ‘‘ನೀನು ಕಾಡಿನಲ್ಲಿ ಹಾದು ಹೋಗುತ್ತಿರುವಾಗ ಬಂದು ಸಿಂಹದ ಮೇಲೆ ಕುರಿತು ಬರುತ್ತಿರುವ ಯುವಕ ನಿನಗೆ ಎದುರಾಗುವನು ಅವನನ್ನು ನಿನ್ನ ಅರಮನೆಗೆ ಕರೆದುಕೊಂಡು ಹೋಗು ಅವನೇ ನಿನ್ನ ಮಗನಾಗುವನು’’ ಎಂದು ಹೇಳಿದನು ದೀಪಕರ್ಣಿಯು ಬಹಳ ಸಂತೋಷದಿಂದ ಉದ್ದ ಕನಸಿನ ಬಗೆಗೆ ಪೂರ್ಣಭರವಸೆ ಇತ್ತು. ಒಂದು ದಿನ ಬೇಟೆಗಾಗಿ ಕಾಡಿಗೆ ಹೊರಟನು ಅಲ್ಲಿ ಒಬ್ಬ ಸುಂದರನಾದ ಯುವಕ ಸಿಂಹದ ಮೇಲೆ ಕುಳಿತು ಬರುತ್ತಿರುವುದನ್ನು ಕಂಡ ಕೂಡಲೇ ಆಯುವಕ ಕೆಳಗಿಳಿದ ಮೇಲೆ ಸಂಹವು ನಿಧಾನವಾಗಿ ಪಕ್ಕದಲ್ಲೇ ಹರಿಯುತ್ತಿದ್ದ ಹೊಳೆಗೆ ನೀರು ಕುಡಿಯಲು ಹೋಯಿತು. ದೀಪಕರ್ಣಿಯು ಒಮ್ಮೆಲೇ ಸಿಂಹದತ್ತ ಬಾಣಪ್ರಯೋಗ ಮಾಡಿದನು. ಆ ಕೂಡಲೇ ಸಿಂಹವು ತಮ್ಮ ದೇಹವನ್ನು ಮಾನವರೂಪಕ್ಕೆ ಬದಲಾಯಿಸಿಕೊಂಡು ದೀಪಕರ್ಣಿಯನ್ನು ಕುರಿತು ನಾನೊಬ್ಬ ಶಾಂತ ಎಂಬ ಯಕ್ಷ. ನಾನು ವೈಶ್ರವಣನ ಸ್ನೇಹಿತ ಒಮ್ಮೆ ನಾನು ಗಂಗಾನದಿಗೆ ಸ್ನಾನ ಮಾಡಲು ಹೋಗಿದ್ದಾಗ ಒಬ್ಬಳ ಋಷಿ ಕನ್ಯೆಯನ್ನು ಕಂಡು ಅವಳ ಪ್ರೀತಿಸಿದೆ. ಗಂಧರ್ವ ವಿಧಿಯಂತೆ ಆಕೆಯನ್ನು ವಿವಾಹವಾದ ಈ ವಿಷಯವನ್ನು ತಿದಂತಹ ಋಷಿಯು ನಮ್ಮಿಬ್ಬರೂ ಶಾಪಕೊಟ್ಟ ಸಿಂಹ ದಂಪತಿಗಳನ್ನಾಗಿ ಮಾರ್ಪಡಿಸಿದರೂ ನಾವಿಬ್ಬರೂ ಅತನ ಪಾದಗಳಲ್ಲಿ ಬಿದ್ದು ಕ್ಷಮೆ ಬೇಡಿದಾಗ ಅವಳಿಗೆ ಒಬ್ಬ ಮಗ ಹುಟ್ಟುವನೆಂದೂ ನಾನು ನಿನ್ನ ಬಾಣದಿಂದ ಕೆಳಗೆ ಬೀಳುತಿನೆಂದೂ ಅವರು ಹೇಳಿದರು ಅನಂತರ ನಾವಿಬ್ಬರೂ ಹಾಗೆಯೇ ಅಲೆದಾಡಿದೆವು. ಕೆಲವು ದಿನಗಳ ನಂತರ ಆಕೆ ಗಂರ್ಭಿಣಿಯಾದವಳು ಮುಂದೆ ಒಂದು ಗಂಡು ಮಗುವಿಗೆ ಜನ್ಮವಿತ್ತ ನಂತರ ಅವಳು ಶಾಪದಿಂದ ಬಿಡುಗಡೆಯಾದಳು. ಆಮಗುವನ್ನು ನಾನು ಹೆಣ್ಣು ಸಿಂಹಗಳ ಹಾಲನ್ನುಣಿಸಿ ಸಾಕುತ್ತಿದ್ದೇನೆ. ಈಗ ನಿನ್ನ ಬಾಣಾಘಾತದಿಂದ ನಾನು ಶಾಪದಿಂದ ಬಿಡುಗಡೆ ಹೊಂದಿದೆ. ಈಗ ನೀನು ಅತ್ಯಂತ ಪರಾಕ್ರಮಿಯಾದ ಈ ಯುವಕನನ್ನು ಕರೆದುಕೊಂಡು ಹೋಗು ಎಂದು ನುಡಿದನು.

ಈ ರೀತಿ ಹೇಳಿ ಯಕ್ಷ ಮಾಯವಾದನು. ದೀಪಕರ್ಣಿಯು ಆ ಮಗುವಿನೊಡನೆ ಅರಮನೆಗೆ ಹಿಂದಿರುಗಿದನು. ಶಾತನ ಕೂಡಿಸಿ ಕೊಂಡು ಬಂದುದರಿಂದ ‘ಶಾತವಾಹನ’ ಎಂದು ಅವನಿಗೆ ನಾಮಕರಣ ಮಾಡಲಾಯಿತು. ಶಾತವಾಹನ

ದೊಡ್ಡವನಾದ ಮೇಲೆ ದೀಪ ಕರ್ಣಿಯು ತನ್ನ ರಾಜ್ಯವನ್ನು ಅವನಿಗೆ ಅನುಗ್ರಹಿಸಿ ವಾನಪ್ರಸ್ಥವನ್ನು ಪ್ರವೇಶಿಸಿದನು. ಮುಂದೆ ಶಾತವಾಹನನು ಪ್ರಖ್ಯಾತನಾದ ಚಕ್ರವರ್ತಿಯಾದನು.

**ದೀಪದ ಮಲ್ಲೀರು**

ರಾತ್ರಿ ಎಲ್ಲರೂ ತಮ್ಮ ತಮ್ಮ ಮನೆಯ ದೀಪಗಳನ್ನು ಆರಿಸಿದ ಮೇಲೆ ಅವೆಲ್ಲಾ ಒಂದು ಕಡೆ ಸೇರುತ್ತಿದ್ದವು. ಒಂದು ದಿನ ಒಂದು ದೀಪ ತಡವಾಗಿ ಬಂದ್ದರಿಂದ ಉಳಿದವು ಕೋಪಗೊಂಡು ಕಾರಣಕೇಳಿದವು. ಆ ದೀಪ ತನ್ನ ಮನೆಯ ಯಜಮಾನನಿಗೆ ಒದಗಿರುವ ಕಷ್ಟದ ಕಥೆಯನ್ನು ವಿವರಿಸಿ ಆತ ತನ್ನ ತಂಗಿಕೋಸ್ಕರ ಕಾಯುತ್ತಿದ್ದರಿಂದ ನನ್ನನ್ನು ಆರಿಸುವುದು ತಡವಾಯಿತು ಎಂದಿತು. ಈ ಮಾತುಗಳನ್ನು ಕೇಳಿಸಿಕೊಂಡ ಆ ದೀಪದ ಯಜಮಾನನ ತಂಗಿಯು ಬೆಳಿಗ್ಗೆ ಹೋಗಿ ತನ್ನ ಅಣ್ಣನಿಂದಾಗಬಹುದಾಗಿದ್ದ ವಿಪತ್ತನ್ನು ತಪ್ಪಿಸಿದಳು.

**ದೀಪ ಬೆಳಗಿಸುವ ಕಥೆ**

ಕಳ್ಳನೊಬ್ಬ ದೇವಾಲಯಕ್ಕೆ ನುಗ್ಗಿದನು. ಆ ಸಂದರ್ಭದಲ್ಲಿ ಅಲ್ಲಿರುವ ನಂದಾದೀಪ ನಂದಿ ಹೋಗುತ್ತಿದ್ದುದರಿಂದ ದೇವರ ಮೇಲಿರುವ ಒಡವೆಗಳು ಸರಿಯಾಗಿ ಕಾಣುತ್ತಿರಲಿಲ್ಲ. ಆದ್ದರಿಂದ ದೀಪದ ಬತ್ತಿಯನ್ನು ಮುಂದಕ್ಕೆ ಚಾಚಿ ಉರಿಯುವಂತೆ ಮಾಡಿ ಒಡವೆಗಳನ್ನು ತೆಗೆದುಕೊಂಡು ಹೋದನು. ಕಾಲಕ್ರಮೇಣ ಆತ ಸತ್ತಾಗ ದೀಪ ಬೆಳಗಿದ್ದಕ್ಕಾಗಿ ಆ ದೇವರಿಂದ ಮೋಕ್ಷ ದೊರಕಿತಂತೆ.

**ದೀಪದ ಕಲಿಯಾರ ಕಥೆ**

ಹಿಂದೆ ಚೋಳ ದೇಶದ ಕಂಚೀಪುರದಲ್ಲಿ ಕಲಿಯಾರನೆಂಬ ಶಿವ ಶರಣನಿದ್ದನು. ಆತ ವ್ಯಾಪಾರಕ್ಕಾ ಅರಣ್ಯ ಮಾರ್ಗದಲ್ಲಿ ಹೋಗುತ್ತಿದ್ದಾಗ ಹುಲಿಯ ಗರ್ಜನೆಯಿಂದ ಹೆದರಿಕೊಂಡು ಹಾಳುಬಿದ್ದಿರುವ ಶಿವಾಲಯದಲ್ಲಿ ಬಂದು ಆಶ್ರಯ ಪಡೆದನು ಅಲ್ಲಿರುವ ಶಿವಲಿಂಗದ ಬಳಿ ದೀಪ ಹಚ್ಚಲು ಎಣ್ಣೆ ಇರಲಿಲ್ಲವಾದ್ದರಿಂದ ತನ್ನ ಜಡೆಯನ್ನೇ ಹೊಸೆದು ದೀಪದ ಕುಡಿಯನ್ನಾಗಿ ಮಾಡಿ ಬೆಂಕಿ ಹಚ್ಚಿದನು ಬೆಂಕಿಯ ಜ್ವಾಲೆ ಶಿರ ಮತ್ತು ತಲೆಯನ್ನು ಆವರಿಸಿದರೂ ಧೈರ್ಯಗೆಡದೆ ಶಿವನನ್ನು ಧ್ಯಾನಿಸುತ್ತ ಕುಳಿತನು. ಶಿವನು ಪ್ರತ್ಯಕ್ಷವಾಗಿ ಕೈಲಾಸಕ್ಕೆ ಕರೆದೊಯ್ದನು. ಆ ಮೇಲೆ ಆತ ದಿಪದ ಕಲಿಯಾರನೆಂದು ಹೆಸರಾದನಂತೆ.

**ಅಗ್ನಿದಕ್ಕಿದ ಕಥೆ ಅಸ್ವಾಮಿ ಕಥೆ**

ಒಮ್ಮೆ ನೀರಿನೊಡನೆ ಕಾದಾಡುವಾಗ ಸೋತು ಹೋದ ಬೆಂಕಿ ಕಾಡಿನ ಬಿದಿರೊಂದರಲ್ಲಿ ಆಡಗಿಸಿಕೊಂಡಿತಂತೆ, ದೊಡ್ಡ ಕಂಗಳ ಪಕ್ಷಿಯೊಂದು ಇದನ್ನು ಗಮನಿಸಿ ಕೋತಿಯೊಂದಕ್ಕೆ ತಿಳಿಸಿ ಬೆಂಕಿ ಪಡೆಯುವುದನ್ನು ಕಲಿಸಿತಂತೆ. ಬೆಂಕಿ ಪಡೆಯುವುದಕ್ಕೆ ಕೋತಿಗಿಂದ ತಾನೇ ಯೋಗ್ಯ ಎಂದು ಯೋಚಿಸಿದ ಮನುಷ್ಯ ಆ ವಿಧಾನವನ್ನು ಕೋತಿಯಿಂದ ಕದ್ದನಂತೆ.

ನಮ್ಮ ಹಳ್ಳಿಯ ಜನಪದ ಕವಿಗಳು ಯಾವ ವಿಶ್ವವಿದ್ಯಾನಿಲಯದಲ್ಲೂ ಉನ್ನತ ಪದವಿಯನ್ನು ಗಳಿಸಿದವರಲ್ಲ; ಅವರ ಬಾಳಿನ ವಿಶ್ವವಿದ್ಯಾನಿಲಯವೇ ಅವರಿಗೆ ಪದವಿಯನ್ನು ಕೊಡುವ ವಿದ್ಯಾಕೇಂದ್ರ; ಬಾಳಿನ

ವಿಶ್ವವಿದ್ಯಾನಿಲಯದಲ್ಲಿ ಅವರು ಪಡೆದ ಜೀವನಾನುಭವ ಯಾವ ಪದವೀಧರನಿಗೂ ಕಡಿಮೆಯೇನಲ್ಲ; ಅವರಿಗೆ ತಮ್ಮ ಸುತ್ತಲ ಸಮಾಜದಲ್ಲಿ ಕಂಡುಂಡ ಅನುಭವಗಳೇ ಅವರ ಜನಪದ ಸಾಹಿತ್ಯಕ್ಕೆ ಪ್ರೇರಣೆ. ಹಳ್ಳಿಗಳಲ್ಲಿ ಎಲ್ಲರೂ ಜನಪದ ಕವಿಗಳೆಂದೇ ಹೆಸರು ಪಡೆದಿರುವುದಿಲ್ಲ. ಯಾರು ಜೀವನದಲ್ಲಿ ಅಥವಾ ಬಾಳಿನಲ್ಲಿ ಹೆಚ್ಚಿನ "ನೋವನ್ನು" ಪಡೆದಿರುತ್ತಾರೋ ಅಂಥವರ ಹೃದಯ ಬಾಳಿನ ಸಿಹಿಕಹಿಗಳನ್ನು ಹೇಳಿಕೊಳ್ಳಲಿಕ್ಕೆ ಸಾಧ್ಯ. ಹೆಣ್ಣು ತಮ್ಮ ಗಂಡನಿಂದ ಇಲ್ಲವೆ ಸಮಾಜದ ವ್ಯಕ್ತಿಗಳಿಂದ, ಸಮಾಜದಿಂದ ಸುಖ ಸಂತೋಷಗಳಿಲ್ಲದ ಬದುಕನ್ನು ಪಡೆದಿರಬಹುದು; ಅಂದರೆ ತಮ್ಮ ಜೀವನದಲ್ಲಿ ಉಂಟಾಗುವ ಆಘಾತಗಳಿಂದ ಇಲ್ಲವೆ ಸಮಾಜದ ಕ್ರೂರದೃಷ್ಟಿಗೆ ಒಳಗಾಗಿ ಪಡೆದಂತಹ ನೋವಾಗಿರಬಹುದು; ಒಟ್ಟಿನಲ್ಲಿ- ಈ ಎಲ್ಲದರ ಹಿಂದೆ "ನೋವಿನ" ಪರಿಣಾಮದ ಅಭಿವ್ಯಕ್ತಿ ಜನಪದ ಸಾಹಿತ್ಯದಲ್ಲಿ ಮೂಡಿದ್ದುದರಲ್ಲಿ ಆಶ್ಚರ್ಯವಿಲ್ಲ. ನೋವಿಗೊಳಗಾದ ವ್ಯಕ್ತಿಗಳೆಂದರೆ ಬಹುಪಾಲು ಹೆಣ್ಣು ಮಕ್ಕಳೇ ಎನ್ನಬಹುದು. ಸ್ತ್ರೀ ದಾಂಪತ್ಯ ಸಮಸ್ಯೆ, ಬಂಜೆತನ, ವಿಧವೆ ಅನ್ನಿಸಿಕೊಂಡಿರುವುದು, ಮಾನಭಂಗಕ್ಕೆ ಒಳಗಾಗಿರುವುದು, ಅಣ್ಣ-ತಂಗಿ, ಅಪ್ಪ-ಮಗಳು, ಅಕ್ಕ-ತಂಗಿ, ಅಕ್ಕ-ತಮ್ಮ, ತೌರು ಗಂಡನಮನೆ ಇಲ್ಲೆಲ್ಲ ನಡೆದಿರುವ ಹಾಗೂ ಸ್ತ್ರೀಗೆ ಸಿಗಬೇಕಾಗಿದ್ದ ಮಾನ್ಯತೆ, ಇವೆಲ್ಲವೂ ಸಹ ಜನಪದದ ಅನೇಕ ಪ್ರಕಾರಗಳಾದ ಗೀತೆ, ಕಥೆ, ಲಾವಣಿ, ಒಗಟು ಮುಂತಾದವುಗಳಲ್ಲಿ ಪ್ರತಿಬಿಂಬಿತವಾಗಿರುವುದನ್ನು ಕಾಣಬಹುದಾಗಿದೆ. ಇಲ್ಲಿ ಸಂಗ್ರಹಿಸಿರುವ ಕಥೆಗಳನ್ನು ಹಿಂದಿನಿಂದ ಬೆಳೆದು ಬಂದದ್ದನ್ನು ಜೀವಂತವಾಗಿ ಉಳಿಸಿಕೊಂಡು ಹೋಗುತ್ತಿರುವ ಜನಪದ ಕವಿಗಳಾಗಿ ಉಳಿಯುತ್ತಿರುವ ಈ ಕೆಲವರು. ಅವರ ಪರಿಚಯ ಹೊಸದು.

ಕಥೆಹೇಳುವುದು ಒಂದು ಸಂಪ್ರದಾಯ ಹಗಲೆಲ್ಲ ಅಡವಿಯಲ್ಲಿ ಸುತ್ತಿಸುಳಿದು ಕುರಿಗಳನ್ನು ಕಾಯ್ದುಕೊಂಡು ದಣಿದುಬಂದ ಕುರುಬರು ರಾತ್ರಿಯಲ್ಲಿ ತಮ್ಮ ಬೀರಪ್ಪನ ಗುಡಿಯು ಮುಂದಿನ ಬಯಲಿನಲ್ಲಿ ಕಥೆಗಳನ್ನು ಹೇಳಿ ಕೇಳಿ ಸಂತೋಷದಲ್ಲಿ ಕಾಲ ಕಳೆಯುತ್ತಾರೆ. ನಾವು ಹೀಗೆ ಹೇಳುವಾಗ ಇವರ ಬದಿಗೆ ಕಲ್ಲಿನ ದೀಪದ ಕಂಭದ ಮೇಲೆ ಎಣ್ಣೆಯಲ್ಲಿ ನೆನೆದ ಹತ್ತಿಯ ತಾಳಿನ ಉರಿದೀಪ ಉರಿಯುತ್ತಿರುತ್ತದೆ. ಅದರ ಮಂದ ಪ್ರಕಾಶದಲ್ಲಿ ಕುರುಬರ ಬಳಗೆ ನೆರೆದಿರುತ್ತಾರೆ. ಹೀಗೆಕಥೆ ಹೇಳುವದಕ್ಕು ಸಂಪ್ರದಾಯವನ್ನು ಅನುಸರಿಸುವ ಜನಪದರು ಮನರಂಜನೆಯ ಭಾಗವಾಗಿರುವುದನ್ನು ಕಾಣುತ್ತೇವೆ.

ಜನಪದರಲ್ಲಿ ಕಥೆಗಳು ಯಾವಾಗಲೂ ತಮ್ಮ ನಡುವೆಯೇ ಸಂಭವಿಸಿದ ಘಟನೆಗಳಾಗಿರುತ್ತವೆ. ಈ ಘಟನೆಗಳನ್ನು ಆಧರಿಸಿ ಕಥೆಗಳನ್ನು ಅದ್ಭುತವಾಗಿ ಹೆಣೆದಿರುತ್ತಾರೆ. ಎಲ್ಲರಿಗೂ ಒಳಿತಾಗಲಿ ಎಂಬ ಆಶಯದೊಂದಿಗೆ ಕಥೆಗಳನ್ನು ಕಟ್ಟುತ್ತಾರೆ. ಜನಪದರಲ್ಲಿ ಹಣತೆ ಪರಂಪರೆ ವಿಶಿಷ್ಟ ಸಂಸ್ಕೃತಿಯನ್ನು ಹೊಂದಿದ್ದು ತನ್ನದೇ ಆದ ಮಹತ್ವವನ್ನು ಸಾರಿದೆ. ಹಣತೆ ಬದುಕಿನ ಭಾಗವಾದ್ದು ಹುಟ್ಟಿನಿಂದ ಸಾವಿನವರೆಗೂ ಬಳಕೆಯಾಗುವ ಒಂದು ಕ್ರಿಯಾ ವಿಶೇಷವಾಗಿದೆ. ಕಥೆಯಲ್ಲೂ ಈ ಮಾದರಿಯನ್ನು ನೋಡಬಹುದಾಗಿದೆ.

ಜನಪದರು ತಾವು ಕಂಡ ನೋವು, ನಲಿವು, ಸುಖ, ಸಂತೋಷಗಳನ್ನು ಕಥೆಗಳಲ್ಲಿ ತೋರಿಸಿ ತಮ್ಮ ಸಂಕಷ್ಟಗಳನ್ನು ಕಥೆಯ ಮೂಲಕ ವರ್ಣಿಸುವ ಅಭಿವ್ಯಕ್ತಿಯನ್ನು ಚತುರೋಕ್ತಿಯನ್ನು ಹೊಂದಿದವರಾಗಿದ್ದವರು. "ನಾಕ್ಲೋಕ ನೂಕು ದೀಪ" ಎಂಬ ಕಥೆಯಲ್ಲಿ ಇಬ್ಬರು ಅಳಿಯಂದ್ರು ನಡೆಸುವ ಮಾತಿನ ವಾಗ್ವಾದದಲ್ಲಿ ತಮ್ಮ ಮಾವಂದಿರು

ಅಳಿಸೇವೆ ಹೇಗೆ (ಅಳಿಯಾಟ) ಮಾಡಿದರೆಂಬುದನ್ನು ವಿವರಿಸುತ್ತಾರೆ. ಒಬ್ಬ ಶ್ರೀಮಂತನ ಅಳಿಯನಾದರೆ, ಮತ್ತೊಬ್ಬ ಗತಿಗೆಟ್ಟ ಮನೆಯ ಅಳಿಯ.

ಇವರಿಬ್ಬರಲ್ಲಿಗತಿಗೆಟ್ಟ ಮನೆಯ ಅಳಿಯ ಅತಿ ಬುದ್ಧಿವಂತ, ತಮ್ಮ ಮನೆಯ ಉಪಚಾರವನ್ನು ಒಗಟ ರೂಪದಲ್ಲಿ ಹೇಳುತ್ತಾನೆ.

ನಾಕ್ಲೋಕ್ ನೋಕ್‌ದೀಪ

ಏಳು ಸುತ್ತಿನ ಇಡ್ಲಿ

ಚಂದ್ರುಗಿರಿ ಕಾಯ್ಹಾಲು ಎಂದು ಹೇಳುವ ಮೂಲಕ ತನ್ನ ಮನೆಯ ಅದ್ಭುರಿ ಉಪಚಾರವನ್ನು ಅವನಿಗೆ ತಿಳಿಯಂದತೆ ವಿವರಿಸುತ್ತ ಮಾವನ ಮನೆಯ ಮರ್ಯಾದಿಯನ್ನು ಉಳಿಸುತ್ತ ಅಳಿಯನ ಘನತೆಯನ್ನು ತೋರ್ಪಡಿಸಿಕೊಳ್ಳತಾನೆ. ಇಂಥ ಅಳಿಯಂದಿರು ಇಂದಿನ ಹೈಟೆಕ್ ಯುಗದಲ್ಲಿ ಸಿಗಲು ಸಾಧ್ಯವೆ? ಬೆಂದ ಮನೆಯಲ್ಲಿ ಹಿರಿದದ್ದೆ ಲಾಭ ಎನ್ನುವ, ವರದಕ್ಷಿಣೆಗಾಗಿ ತನ್ನ ತನವನ್ನೇ ಮಾರಿಕೊಳ್ಳುವ, ಕಟ್ಟಿಕೊಂಡು ಹೆಂಡತಿಯನ್ನು ನರಕಕ್ಕೆ ತಳ್ಳಿದರೂ ಸರಿ ಮಾವನ ಮನೆಯಿಂದ ತನಗೆ ಏನೆಲ್ಲ ಬರಬೇಕೋ ಎಲ್ಲ ಸಾಮಗ್ರಿಗಳು ಬರುವರೆಗೂ ಮಾವನ ಮನೆಯ ಮೇಲೆ , ಅವರ ಮೇಲೆ ಪ್ರೀತಿ, ಸ್ನೇಹದ ಭಾವಗಳು ಹುಟ್ಟಲಾರವು. ಇಂಥವರಿಗೆ ಮಾರ್ಗದರ್ಶಿಯಾಗಿ ಜನಪದರಲ್ಲಿ ಅನೇಕ ಕಥೆಗಳು ಸಿಕ್ಕುತ್ತವೆ. ದೀಪಾವಳಿ ಹಬ್ಬವು ಅಳಿದೇವರಿಗೆ ಉಪಚರಿಸುವ ಹಬ್ಬವಾಗಿದೆ. ಆ ದಿನ ಅಳಿಯನಿಗಾಗಿ ಉಡುಗೊರೆ ರೂಪದಲ್ಲಿ ಬೆಲೆಬಾಳುವ ವಸ್ತುಗಳನ್ನು ಕೊಡುವ ಪದ್ಧತಿ ಇದೆ. ಇದಕ್ಕೆ ಹಿನ್ನೆಲಯಾಗಿಯೇ ಈ ಕಥೆ ಹುಟ್ಟಿರಬೇಕು.

ಮತ್ತೊಂದು ಹಾಸ್ಯಭರಿತ ಕಥೆಯಾದ ''ದೀಪವಿತ್ತು ಬೆಂಕಿ ಇಲ್ಲ, ಎಂಬ ಕಥೆಯ ಹಾಲಕ್ಕಿ ಒಕ್ಕಲಿಗರ ಕಥೆಯಾಗಿದ್ದು, ಹಲಸಿನ ಹಣ್ಣಿನ ರುಚಿಯನ್ನು ನೋಡದ ಹಾಲಕ್ಕಿಗರಿಗೆ ಒಮ್ಮೆ ಬರಗಾಲ ಸಂಭವಿಸುತ್ತದೆ. ಆಗ ಅನಿವಾರ್ಯವಾಗಿ ಹಲಸಿನ ಹಣ್ಣನ್ನು ತಿನ್ನುತ್ತಾರೆ. ಈ ಊರಿನ ರಾಜನಿಗೆ ಕೊಡೆದೆ ತಿಂದದ್ದು ತಪ್ಪಾಗಿದೆ, ಎಂದು ತಿಳಿದ ಹಾಲಕ್ಕಿ ಒಕ್ಕಲಿಗರಲಗೌಡ, ಹಣ್ಣು ಇಷ್ಟೊಂದು ರುಚಿ ಯಾಗಿರುವಾಗ ಇದರ ಗುಂಜು ಇನ್ನೂ ರುಚಿಯಾಗಿರುತ್ತದೆ ಎಂದು ತಿಳಿದು ತನ್ನ ತಪ್ಪನ್ನು ಒಪ್ಪಿಕೊಂಡು ಅದನ್ನು ರಾಜನಿಗೆ ಕೊಡುತ್ತಾನೆ. ಇವನು ತಂದಿದ್ದ ಗುಂಜನ್ನು ನೋಡಿ ಸಿಟ್ಟು ಬಂದು ಕಾರಾಗೃಹದ ಶಿಕ್ಷೆ ಕೊಡುತ್ತಾನೆ. ಅಲ್ಲಿ ಅವರಿಗೆ ಅಡಿಗೆ ಮಾಡಿಕೊಡಿಕೊಳ್ಳಲು ವ್ಯವಸ್ಥೆ ಮಾಡಿಕೊಡುತ್ತಾನೆ. ಜೊತೆಗೆ ಕಂದಿಲನ್ನು ಹಚ್ಚಿ ದೀಪ ಕೊಡುತ್ತಾನೆ. ಒಂದು ದಿನ ಅವರ ಆರೋಗ್ಯ ವಿಚಾರಿಸಲು ವೈದ್ಯರನ್ನು ಕಳಿಸಿದಾಗ ಅವರು ನಿಲ್ಲುವ ಸ್ಥಿತಿಯಲ್ಲಿ ಇರಲಿಲ್ಲದ್ದನ್ನು ನೋಡಿ ದೀಪವಿದ್ದರೂ ಬೆಂಕಿಲ್ಲ, ಅಡಿಗೆ ಸಾಮಾನಿದ್ದರೂ ಅಡಿಗೆ ಮಾಡಿಕೊಳ್ಳದ ಅವರ ಹೆಡ್ಡತನಕ್ಕೆ ನಗುತ್ತಾನೆ. ಹಾಸ್ಯದ ಹಿನ್ನೆಲೆಯಲ್ಲಿ ರಚನೆಯಾದ ಈ ಕಥೆಯು ವಿನೋದ ಕಥೆಗಳಲ್ಲಿ ಒಂದಾಗಿದೆ.

ಇದೇ ರೀತಿಯಲ್ಲಿ 'ದೀಪದ ಮಲ್ಲಿ' ಎಂಬ ಕಥೆಯಲ್ಲಿ ಹಣ್ಣು ಶಿಕ್ಷೆಗೆ ಗುರಿಯಾಗಿ ದಿಪದ ಮಲ್ಲಿ ಎಂಬ ಹೆಸರು ಪಡೆಯುತ್ತಾಳೆ. ಯಾವ ನೋವನ್ನು ಅನುಭವಿಸಿದೆ ಹೂವಿನಂತೆ ಬೆಳೆದ ರಾಜಕುಮಾರಿಗೆ ಮದುವೆಯಾಗುತ್ತದೆ.

ಗಂಡನ ಮನೆಯಲ್ಲೂ ಹೂವಿನ ಹಂಗೆ ನೋಡಿಕೊಳ್ಳುತ್ತಿರುವಾಗ ಆಕೆಗೆ ಇದಿಯಮ್ಮ ಕನಸಿನಲ್ಲಿ ಕಾಡುತ್ತಿರುತ್ತಾಳೆ. ಒಂದು ದಿನ ಆಕೆಯನ್ನು ಆ ಇದಿಯಮ್ಮ ಕರೆದೊಯ್ಯು ಕಾಣದ ಕಾಡಿನಲ್ಲಿ ಬಿಟ್ಟು ಕಷ್ಟ ಅನುಭವಿಸುವ ಹಾಗೆ ಮಾಡುತ್ತಾಳೆ. ಕೆಲ ದಿನಗಳ ನಂತರ ಜನರ ಸಹಾಯದಿಂದ ಒಂದು ಊರಿಗೆ ಬರುತ್ತಾಳೆ. ಅಲ್ಲಿ ಒಂದು ಮನೆಯಲ್ಲಿ ಕೆಲಸಕ್ಕೆ ಸೇರುತ್ತಾಳೆ. ಆಮನೆಯೊಡತಿಯ ಮಗುವನ್ನು ಆಡಿಸುತ್ತಿರುವಾಗ ಕತ್ತಿನಲ್ಲಿದ್ದ ಹಾರವನ್ನು ನವಿಲು ಬಾಯಿಗೆ ಹಕ್ಕಿ ಹಾಕಿಕೊಳ್ಳುತ್ತದೆ. ಇದ್ದ ವಿಷಯ ತಿಳಿಸಿದ ರಾಜಕುಮಾರಿಗೆ ಮನೆಯ ಯಜಮಾನಿ ಇವಳ ತಲೆ ''ಬೋಳ್ಸಿ, ತಲೆ ಮ್ಯಾಲೆ ಸಗಣಿ ಇಕ್ಸಿ ಆದರ ಮ್ಯಾಗ ದೀಪ ಇಡ್ಸಿ, ಎಣ್ಣೆ ಆಕ್ಸಿ ದೀಪ ಹಚ್ಚುತ್ತಾಳೆ. ಬೆಳಿಗ್ಗೆ ಮನೆ ಕೆಲಸ ಮಾಡಬೇಕು, ರಾತ್ರಿ ಪೂರ್ತಿ ಹೀಗೆ ದೀಪ ಹಚ್ಚಿಕೊಂಡು ನಿಂತಿರಬೇಕು. ಹೀಗೆ ಕಥೆ ಮುಂದುವರೆಯುತ್ತದೆ. ಈರೀತಿಯ ಒಂದು ಶಿಕ್ಷೆ ಉತ್ತರ ಕರ್ನಾಟಕ ಭಾಗದಲ್ಲಿ ಇತ್ತಂತೆ, ಶಿಕ್ಷೆಯನ್ನು ಹೆಣ್ಣಿಗಾಗಿಯೇ ಮೀಸಲಿರಿಸಿದ್ದ ಜನಪದರು ತಾವು ಕೊಡುವ ಶಿಕ್ಷೆಗಳಲ್ಲಿ ಒಂದಾಗಿರುವಂತೆ ತೋರುತ್ತದೆ. ತ್ಯಾಗ ಮಯಿಯಾದ ಹೆಣ್ಣು ಎಲ್ಲವನ್ನು ಸಹಿಸಿಕೊಳ್ಳುವ ಅಭ್ಯಾಸ ಹುಟ್ಟಿನಿಂದಲೇ ಬಂದಿರುತ್ತದೆ. ಹಾಗಾಗಿಯೇ ಅವರು ಆಕೆಯನ್ನು ದೇವತೆಯಾಗಿ ನಿಲ್ಲಿಸಿ ಆರಾಧಿಸುತ್ತಿರುವುದು.

ಹೀಗೆ ದೀಪಕ್ಕೆ ಸಂಬಂಧಿಸಿದ ಕಥೆಗಳು ಸಿಕ್ಕುವುದು ಕಷ್ಟವಾದರೂ ಸಿಕ್ಕಿರುವ ಕೆಲವು ಕಥೆಗಳು ಅರ್ಥಪೂರ್ಣ ಛಾಯೆಯನ್ನು ಹೊಂದಿದ್ದು ತಮ್ಮ ಬದುಕಿನ ಅನುಭವಗಳನ್ನು ಕಥಾ ರೂಪದಲ್ಲಿ ಬಿಂಬಿಸಿರುವ ಅವರ ಜಾಣ್ಮೆಗೆ ಏನುಕೊಟ್ಟರು ಸಾಲದು. ಬೆಳಕು ಅವರ ಬದುಕಿನ ಅಂಗವಾಗಿದ್ದು, ತಮ್ಮ ನೋವು ನಲಿವು, ಸಂಕಷ್ಟಗಳಿಗೆ ಬೆಳಕು ಯಾವ ರೂಪದಲ್ಲಿ ಬರುವುದೋ ಎಂದು ಚಿಂತಿಸುತ್ತ ಬಂದ ಬೆಳಕನ್ನು ಸಂತೋಷದಿಂದ ಸ್ವೀಕರಿಸುತ್ತಾರೆ.

ಕಥೆ ಮನರಂಜನೆಯ ಹಿನ್ನೆಲೆಯನ್ನು ಹೊಂದಿದ್ದರೂ, ತಮ್ಮನ್ನು ತಮ್ಮ ನೋವನ್ನು ಅಭಿವ್ಯಕ್ತಿಸಲು ಸುಂದರ ಸದಾವಕಾಶವನ್ನು ಸದ್ವಿನಿಯೋಗ ಮಾಡಿಕೊಳ್ಳುತ್ತಾರೆ. ಹಾಗೆ ಕಥೆಯನ್ನು ಹೇಳುವಾಗ ಕೂಡಿ ಹೇಳುವ ಪರಿಪಾಠ ಉತ್ತರ ಕರ್ನಾಟಕದಲ್ಲಿ ಇಂದಿಗೂ ಇದೆ.

**೩.೩. ಗಾದೆ**

ಸಾಹಿತ್ಯ ಪ್ರಕಾರಗಳಲ್ಲಿ ಅತ್ಯಂತ ಜನಪ್ರಿಯಗೊಂಡಿರುವ ಸಾಹಿತ್ಯ ಪ್ರಕಾರವೆಂದರೆ ಗಾದೆಗಳು. ಜನಪದ ಸಾಹಿತ್ಯ ಪ್ರಕಾರಗಳಲ್ಲಿ ಒಂದಾದ ಗಾದೆಯು ಅತ್ಯಂತ ಪ್ರಾಚೀನವಾಗಿದ್ದು ವಿಶಿಷ್ಟತೆಯನ್ನು ಹೊಂದಿದೆ. ಈ ಗಾದೆಯು ಹುಟ್ಟಿದ್ದು ಜೀವನದ ಅನುಭವಗಳಿಂದ. ಗಾದೆಗೂ ಜೀವನಕ್ಕೂ ಅವಿನಾಭಾವ ಸಂಬಂಧವಿದೆ. ಗಾದೆಯು ಸಂದರ್ಭಕ್ಕೆ ತಕ್ಕಂತೆ ಬಂದ ಮಾತುಗಳು. ಇವುಗಳು ಪ್ರಜ್ಞಾಪೂರ್ವಕವಾಗಿಯೇ ರಚನೆಗೊಂಡಂಥವುಗಳು ಎಂದು ಹೇಳಲು ಸಾಧ್ಯವಿಲ್ಲ. ದಿನ ನಿತ್ಯದ ಮಾತುಗಳಲ್ಲಿ ಒಂದಾಗಿರುವ ಗಾದೆಯು, ಬಾಯಲ್ಲಿ ಮಾತಾಗಿ, ಗಾಳಿಯಲ್ಲಿ ಹಾರಿಹೋಗುವಂತೆ ಬಾಯಿಂದ ಬಾಯಿಗೆ ಬದಲಾಗುತ್ತ ಅಪಭ್ರಂಶವಾಗುವ ಹಾಗೂ ವಾಕ್ಪ್ರಚಾರಗಳನ್ನು ಬರಹದಲ್ಲೂ ಬಂಧಿಸಿಡದಿದ್ದರೆ, ಅಮೂಲ್ಯ ನಿಧಿಯೊಂದನ್ನು ಕಳೆದುಕೊಂಡಂತೆ ಎಂದು ಪಾಶ್ಚಾತ್ಯ ವಿದ್ವಾಂಸರೊಬ್ಬರು ಹೇಳುತ್ತಾರೆ.

ಈಗಾಗಲೇ ಗಾದೆಯ ಇತಿಹಾಸ ತಿಳಿದಿದ್ದರೂ ಅಧ್ಯಯನ ದೃಷ್ಟಿಯಿಂದ ವಿವರಿಸುವುದಾದರೆ, ಪ್ರಾಕೃತದಲ್ಲಿ ಗತಿಬದ್ಧ 'ನುಡಿ' ಹಾಡು. ಸಂಸ್ಕೃತದಲ್ಲಿ ಸುಭಾಷಿತ, ಒಳ್ಳೆಯದಾಗಿ ಹೇಳಿದ ಮಾತು. ಚೀನಾಭಾಷೆಯಲ್ಲಿ (ಯೆನ್)

ಮನೋಹರವಾದ ಮಾತು, ಲ್ಯಾಟಿನ್‌ನಲ್ಲಿ ಪ್ರವರ್ಲಿಯಂ. ಜನರೆದುರು ಆಡಿದ ಮಾತು ಹಾಗೂ ಕನ್ನಡದಲ್ಲಿ ನಾಣ್ಣುಡಿ ನಾಡನುಡಿ, ಗಾದೆಯೆಂದರೆ ಹಳೆಯ ಮಾತು, ಜನರು ಆಡಿ ರೂಢಿಸಿದ ನುಡಿ, ಸುಭಾಷಿತ, ರೂಪಕ, ಅಲಂಕಾರಯುಕ್ತವಾದ ಮಾತು ಎನ್ನಬಹುದು.

ಎಂಥಹ ಚೊಕ್ಕ ಚಿನ್ನವಾದರೂ ರಾಜಮುದ್ರೆ ಇಲ್ಲದೆ ನಾಣ್ಯ ಚಲಾವಣೆಯಾಗುವುದಿಲ್ಲ. ಹಾಗೆಯೇ ಜನಮನದಲ್ಲಿ ಹುಟ್ಟಿಯೋ ಅಥವಾ ಜನ ಮನಕ್ಕೆ ಒಪ್ಪಿಯೋ ಬಂದ ಮಾತು, ಹತ್ತು ಜನರ ನಾಲಿಗೆ ಮೇಲೆ ಹರಿದರೆ ಮಾತ್ರ ಅದು ಚಲಾವಣೆಯ ನಾಣ್ಯವಾಗುತ್ತದೆ. ಆದ್ದರಿಂದ ನಾಣ್ಯದಷ್ಟೇ ಮಹತ್ವ ಸಾಧಿಸಿ ಜನಪ್ರಿಯಗೊಂಡವುಗಳು ಈ ಗಾದೆಗಳು.

ನಮ್ಮ ಜನರಲ್ಲಿ ವೇದಗಳು ತುಂಬ ಗೌರವಯುತವಾದವು. ಅಂತೆಯೇ ಗಾದೆಯು ಕೂಡ. ಹಾಗಾಗಿಯೇ "ವೇದ ಸುಳ್ಳಾದರೂ ಗಾದೆ ಸುಳ್ಳಾಗೋದಿಲ್ಲ" ಗಾದೆಯ ಮರ್ಮವನ್ನು ಅರಿತವರು ಮಾತ್ರ ವೇದದ ಮರ್ಮವ ಅರಿಯಲು ಸಾಧ್ಯ. ಸತ್ಯವನ್ನು, ಗಾದೆಯನ್ನು, ಮೂರ್ಖರನ್ನು ಎದುರಿಸಿದವರಿಲ್ಲ ಎನ್ನುತ್ತಾರೆ. ರಷ್ಯನ್ನರು ಗಾದೆಗಳು ನಿಶ್ಚಿತ ಉದ್ಧೃತ ವಾಕ್ಯಗಳಿಗೆ ಬಾರವು ಏಕೆಂದರೆ ಗಾದೆಗಳು ಸೀಮಿತವಾದವುಗಳಲ್ಲ. ಅವುಗಳು ಎಲ್ಲರ ಮಾತುಗಳು, ಸಣ್ಣ ವಾಕ್ಯಗಳಂತಲ್ಲ. ವಿಚಾರ ಪೂರಿತವಾದ ಅಥವಾ ಕಾವ್ಯಮಯವಾದ ಸಂಗ್ರಹ ಸಾಲುಗಳಾದರೂ ಅವುಗಳಿಗೊಂದು ಮೊನೆ, ಆಕಾರ ಇಲ್ಲದಿದ್ದರೆ ಮನಸ್ಸಿಗೆ ರುಚಿಸಿ, ಸ್ಮರಣೆಗೆ ಪ್ರಿಯವಾಗುವುದಿಲ್ಲ. ಗಾದೆಯ ಒಳ ವಿಚಾರಗಳ ಕೊಂಡಿಯು ಚೇಳನ್ನು ರಕ್ಷಿಸುವ ಕೊಂಡಿಯಂತೆ ಉಪ್ಪಿನಕಾಯನ್ನು ಉಪ್ಪು ಖಾರಗಳು ಸುರಕ್ಷಿತವಾಗಿಡುವಂತೆ ಬಾಣಕ್ಕೆ ಮೊನೆ ಗರಿಗಳಿದ್ದ ಹಾಗೆ. ಗಾದೆಗಳು ಒಂದು ಒಗರು, ಹಲವು ಸಾರಿ ಹುಳುಕನ್ನೇ ಎತ್ತಿತೋರುವ ನಿರಸನ, ಕಟುವಾದ ಟೀಕೆಗಳು, ಅರ್ಥ, ಸತ್ಯಗಳು.

ಗಾದೆಗಳು ಕಥೆಗಳ ಬಾಲಗಳಾಗಿ ಹುಟ್ಟಿದವು ಎನ್ನುತ್ತಾರೆ. ಅಂದರೆ ಒಂದು ಸಂದರ್ಭವನ್ನು ವಿವರಿಸುವಾಗ ತುಂಬಾ ಪದಗಳನ್ನು ಹಾಕಿ ಸಾಲುಗಳನ್ನು ಇಟ್ಟುಕೊಂಡು ಹೇಳುವಾಗ ಬಳಸುತ್ತಾರೆ. ಕೆಲವೆ ಪದಗಳಲ್ಲಿ ಕಟ್ಟಿಕೊಡುವ ಚಾಣಾಕ್ಷತನವನ್ನು ಹೊಂದಿದರು ನಮ್ಮ ಜನಪದರು, ಅವರ ಮಾತುಗಳಲ್ಲಿ ನಿರ್ಜೀವ ಇದ್ದರೂ ಗಾದೆಗಳ ಮೂಲಕ ಜೀವ ತುಂಬುವಂತೆ ಮಾಡುತ್ತಾರೆ. ಮಾತಿಗೆ ಮುಂಚೆ "ಗಾದೆ ಮಾತು"ಗಳು ಹೊರ ಬೀಳುತ್ತವೆ. ಈ ಗಾದೆ ಜನರ ಮಾತು. ಜನರ ಮನಸ್ಸಿಗೆ ನಾಟಿ ನೆನಪಿನಲ್ಲಿ ಉಳಿಯುವಂಥ ಮಾತು. ಈ ಗಾದೆಗಳು ಅರ್ಥ ಶ್ರೀಮಂತಿಕೆಯನ್ನು ಹೊಂದಿದ್ದು ಚಿತ್ರವತ್ತಾಗಿ, ಸಂಕ್ಷೇಪವಾಗಿ, ಸೂಕ್ಷ್ಮವಾಗಿ ನಾಲ್ಕು ಪದಗಳಲ್ಲಿ ಅಡಗಿಸಿಡಬಹುದಾದಷ್ಟು ವಿಶಾಲತೆಯನ್ನು ಹೊಂದಿವೆ.

ಗಾದೆಗಳು ಮುಖ್ಯವಾಗಿ ಜನಪದರು ತಿಳಿ ಹೇಳುವುದಕ್ಕಾಗಿಯೇ ಬಳಸಿಕೊಂಡಿರಬಹುದು ಎಂದು ಹೇಳಲು ಸಾಧ್ಯವಿಲ್ಲ. ಯಾಕೆಂದರೆ ಆ ಮಾತುಗಳು ಸಂದರ್ಭ ನೋಡಿ, ಪರಿಸ್ಥಿತಿ ನೋಡಿ, ಹುಟ್ಟಿರಬೇಕು. ಇತಿಹಾಸ, ದಂತಕತೆ, ಪ್ರಾಣಿಜೀವನ, ಕೃಷಿ ಇತ್ಯಾದಿ ಪ್ರಪಂಚಗಳಿಂದಲ್ಲ ಸರ್ವಜೀವನಕ್ಕನ್ವಯಿಸುವ ಉಪಮೆ ದೃಷ್ಟಾಂತಗಳನ್ನೆತ್ತಿಕೊಂಡು ಅವುಗಳ ಅನ್ವಯ ವ್ಯಾಪ್ತಿಯನ್ನು ವಿಸ್ತಾರವಾಗಿ ಹಬ್ಬಿಸಿವೆ. ಅನುಭವಗಳನ್ನು ತಮ್ಮ ನುಡಿಗಟ್ಟುಗಳನ್ನಾಗಿ ಬಳಸಿ ಮಾತಿನ ಮಧ್ಯೆ ಒಗ್ಗರಣೆಯಂತೆ ಬಳಸುತ್ತಾರೆ. ಹಾಗಾಗಿಯೇ ನೂರಾರು ಜ್ಞಾನವೃಕ್ಷಿಕ ವಿವೇಕಿಗಳ ಅನುಭವಿಗಳ ಅನುಭವಾಮೃತದ ರಸಾಯನವೇ ಗಾದೆಯಾಗಿದೆ.

‘‘ಎ.ಕೆ. ರಾಮಾನುಜಂರವರು ಹೇಳುವಂತೆ ಗಾದೆ ಮಾತು ಜನತೆಯ ಮನಸ್ಸನ್ನು ಒಂದು ಮುಖದಲ್ಲಿ ಬಿಂಬಿಸುತ್ತದೆ. ಮತ್ತೊಂದು ಮುಖದಲ್ಲಿ ಆಳುತ್ತದೆ. ಅವರ ಅನುದಿನದ ನಂಟುಗಳನ್ನು ನಡೆಸುತ್ತದೆ. ಗಂಟುಗಳನ್ನು ಬಿಡಿಸುತ್ತದೆ ಎನ್ನುತ್ತಾರೆ’’. ಒಟ್ಟಾರೆ ಸಾರ್ವಜನಿಕ ಮುದ್ರೆಯನ್ನು ಒತ್ತಿಸಿಕೊಂಡು ಚಲಾವಣೆಯಲ್ಲಿರುವ ಗಾದೆಗಳು. ಹಣತೆಗೆ ಸಂಬಂಧಿಸಿದ ಗಾದೆಗಳು ಇಂದಿಗೂ ಜನಜನಿತವಾಗಿವೆ. ಈ ಕುರಿತ ಹಾಗೆ ವಿವರಿಸುವುದಾದರೆ, ಪಂಚಭೂತಗಳಲ್ಲಿ ಒಂದಾದ ಬೆಂಕಿಗೆ ಬೆಳಕು ನೀಡುವ ಸಾತ್ವಿಕ ಗುಣವಿರುವ ಜೊತೆಗೆ ಸುಡುವ ಗುಣವನ್ನು ಹೊಂದಿದೆ. ಅಗ್ನಿಯನ್ನು ಪವಿತ್ರವೆಂದು ಪರಿಶುದ್ಧವೆಂದು ತಿಳಿದು ಜನರು ಆರಾಧನೆಗೆ ಮುಂದಾದರು. ಅದರಲ್ಲೂ ಜನಪದರು ಬೆಂಕಿಯನ್ನು ಅಗ್ನಿ ಎಂದು ಕರೆಯದೆ ಅವರು ‘‘ಕೊಂಡ’’ ಎಂಬ ಪದವನ್ನು ಬಳಸುತ್ತಿದ್ದರು. ಈ ‘‘ಕೊಂಡ ಹಾಯುವುದು’’ ಎಂಬ ನಂಬಿಕೆ ಅವರಲ್ಲಿನ ವಿಶಿಷ್ಟವಾದ ಆಚರಣೆಯಾಗಿತ್ತು. ಹಾಗಾಗಿ ಬೆಂಕಿಯನ್ನು ವಿಶಿಷ್ಟ ಸ್ವರೂಪದಲ್ಲಿ ನೋಡುತ್ತಿರುವಂತೆ ಜ್ಯೋತಿಯ ಅಥವಾ ದೀಪದ ರೂಪದಲ್ಲಿ ನೋಡುವುದು ಒಂದು ಭಾಗವಾಗಿದೆ. ತ್ಯಾಗದ, ಅರಿವಿನ, ಸ್ತ್ರೀಯ ನೆಲೆಯಲ್ಲಿ ಸಂಕೇತಿಸುವ ಜ್ಯೋತಿಯು ಅದರಲ್ಲಿ ಜ್ಯೋತಮ್ಮಳಾಗಿ ಆರಾಧನೆಗೊಳ್ಳುತ್ತಿದ್ದಾಳೆ. ಈ ಕ್ರಿಯೆ ಎಂದು ಆರಂಭವಾಯಿತೋ ಗೊತ್ತಿಲ್ಲದಿದ್ದರೂ ಇಂದಿಗೂ ಈ ಕುರಿತ ಆಚರಣೆ, ನಂಬಿಕೆಗಳು ಕಡಿಮೆಯಾಗಿಲ್ಲ. ದಿನ ಕಳೆದಂತೆ ಈ ನಂಬಿಕೆ ತುಂಬಾ ವಿಶಾಲಾರ್ಥವನ್ನು ಪಡೆದುಕೊಳ್ಳುತ್ತ ಆಧ್ಯಾತ್ಮದ ತುತ್ತ ತುದಿಯಲ್ಲಿ ವಿಹರಿಸುತ್ತಿದೆ. ದೀಪ, ಬೆಂಕಿ, ಉರಿ, ಕಿಚ್ಚುಗಳು ಮಾನವ ಜೀವನದ ವಿವಿಧ ಅನುಭವಗಳು, ಮಗ್ಗಲುಗಳು, ಇವುಗಳನ್ನು ಸಂದರ್ಭಕ್ಕೆ ತಕ್ಕಂತೆ ಅಭಿವ್ಯಕ್ತಿಸಲಾಗುತ್ತದೆ. ಮತ್ತೇ ಅವುಗಳಲ್ಲಿ ಆ ರೂಪ ಪಡೆದುಕೊಳ್ಳುತ್ತವೆ. ಉದಾ: ‘‘ಬತ್ತಿ ಉರಿಯೋದೇ ಇರೋದಿಲ್ಲ ಅಣ್ಣತಮ್ಮಂದಿರು ಬೇರೆಯಾಗದೇ ಇರೋದಿಲ್ಲ.’’ ‘‘ಉರಿಯುತ್ತಿರುವ ಗಾಯದ ಮೇಲೆ ಉಪ್ಪು ಸುರಿದಂತೆ’’ ‘‘ಇರುವೆಗೆ ರೆಕ್ಕೆ ಬರುವುದು ದೀಪದಲ್ಲಿ ಬಿದ್ದು ಸಾಯಲಿಕ್ಕೆ’’ ಎನ್ನುವ ಗಾದೆಗಳು ಆದ ಅನುಭವಗಳಿಗೆ ತಕ್ಕಂತೆ ಸಂದರ್ಭ ನೋಡಿ ಸೃಷ್ಟಿಗೊಳ್ಳುತ್ತವೆ. ಇದಕ್ಕೆ ಮೂಲ ಯಾರು ಎಂದು ಹೇಳಲು ಸಾಧ್ಯವಿಲ್ಲ. ಹಾಗಾಗಿಯೇ ಗಾದೆಗಳು ಜನ ಭಾಷೆಯ ಕೆನೆ ಮತ್ತು ಜನವಾಣಿಯಿಂದ ಬಿಟ್ಟ ಹಣ್ಣು ಅಥವಾ ಹೂ, ಹೂವು ನಾಶವಾಗಬಹುದು ಆದರೆ ಅದರ ಪರಿಮಳ ಸದಾ ಶಾಶ್ವತವಾಗಿರುತ್ತದೆ. ಈ ಕುರಿತಂತೆ ಈ ಕೆಳಕಂಡಗಾದೆಗಳನ್ನು ನೋಡಬಹುದು.

**ಗಾದೆಗಳು**

೧. ದೀಪವಿಲ್ಲದ ಮನೆ ರೂಪವಿಲ್ಲ.

೨. ಆರಿ ಹೋಗುವ ದೀಪಕ್ಕೆ ಕಾಂತಿ ಹೆಚ್ಚು.

೩. ದೀಪದ ಕೆಳಗೆ (ಬುಡಕ್ಕೆ) ಕತ್ತಲೆ.

೪. ದೀಪಾವಳಿಗೆ ಬಂದ ಅಳಿಯ, ಉಗಾದಿ ಮುಗಿಸಿಕೊಂಡು ಹೋಗುತ್ತೇನೆ ಅಂದ.

೫. ಪಡುವಣ ಮನೆಗೆ ಮೂಡಣ ದೀಪ.

೬. ತೀರ್ಥ ತಗೊಂಡ್ರೆ ಶೀತ, ಆರತಿ ತಗೊಂಡ್ರೆ ಉಷ್ಣ.

೭. ಬೆಂಕಿಗೆ ಗಾಳಿ ಹಾಕಿದ ಹಾಗೆ

೮. ಬೆಂಕಿಗೆ ಕರಗದು ಬಿಸಿಲಿಗೆ ಕರಗೀತೆ ?

೯. ಬೆಂಕಿಯೊಂದಿಗೆ ಸರಸವೇ ?

೧೦. ಜ್ಯೋತಿ ಉರಿದ ಮನೆ ನೀತಿ ಹೆಚ್ಚು

೧೧. ಗಾಳಿಗೆ ಒಡ್ಡಿದ ದೀಪದಂತೆ

೧೨. ಆಟ ಕೆಟ್ಟರೆ ದೀಪ ಚಾಚೋರ ಮೇಲೆ

೧೩. ಬತ್ತಿಲ್ಲದೆ ಒಲೆ ಉರಿಯದು

೧೪. ನಾಡೆಲ್ಲ ಬಿಟ್ಟರೂ ಸುಡುಗಾಡು ಬಿಡದು.

೧೫. ಹೆಣ್ಣು ಉರಿಸಿದ ಮನೆಯು ಹೆಗ್ಗಂಬ ಉರಿದೀತು

೧೬. ಉಮೀ ಒಳಗಿನ ಬೆಂಕಿ

೧೭. ಊರು ಸುಟ್ರೆ ಹನುಮಪ್ಪ ಹೊರಗೆ

೧೮. ಬೆಂದ ಮನೆಯಲ್ಲಿ ಹಿರಿದದ್ದೇ ಲಾಭ

೧೯. ಅರಸನಿಲ್ಲದ ರಾಜ್ಯ ದೀಪವಿಲ್ಲದ ಮನೆ

೨೦. ಅವರೆ ಸಾಲಿಗೆ ಬೆಂಕಿ ಇಕ್ಕಿ, ಅವರೆ ಕಾಳು ತಿಂದಂಗೆ

೨೧. ಇರುವೆಗೆ ರೆಕ್ಕೆ ಬರುವುದು ದೀಪದಲ್ಲಿ ಬಿದ್ದು ಸಾಯಲಿಕ್ಕೆ

೨೨. ಉರಿಯುವ ದೀಪಕ್ಕೆ ಎಣ್ಣೆ ಹೊಯ್ಯದಂದೆ

೨೩. ಎಂಕಿ ನಿನ್ನ ಕಂಡ್ರೆ ಬೆಂಕಿ

೨೪. ಕಳ್ಳಗ ದೇವರಿಗೆ ಕೊಳ್ಳಿ ದೀಪ

೨೫. ಕೋಳಿ ಕಳ್ಳ ಮನೆ ಹೆಣ್ಣೆ, ಮಿಣ ಮಿಣಕಲಂತಿತ್ತಂತೆ

೨೬. ಕುರುಡನಿಗೆ ದೀಪ ಬೇಡ ಅಂದರೆ ಮನೆ ಮಂದಿಗೂ ಬೇಡವೇ ?

೨೭. ದೀಪ ಉರೀತೋ ಪಾಪ ಉರಿತೋ?

೨೮. ದೀಪ ನುಂಗೋ ಅತ್ತೆಗೆ ದೀವಟಿಗೆ ನುಂಗೋ ಸೊಸೆ

೨೯. ಪಾಪ ಮಾಡಿ ದೀಪ ಬಾಯಲ್ಲಿ ಉರಿದರು

೩೦. ಪೇಟೆ ದೇವರಿಗೆ ಓಟೆ ದೀಪ, ಹಳ್ಳಿ ದೇವರಿಗೆ ಕೊಳ್ಳಿ ದೀಪ

೩೧. ಬುಡ್ಡಿ ದೀಪ ಗಡ್ಡ ಜೋಕೆ

೩೨. ಬೆಕ್ಕಿನ ತಲೆ ಮೇಲಿನ ದೀಪದ ಹಾಗೆ

೩೩. ಬೆಂಕಿ ಇದ್ದಲ್ಲಿ ಬೆಳಕು, ನೀರಿದ್ದಲ್ಲಿ ಕೆಸರು

೩೪. ಮನೆಯ ದೀಪವೆಂದು ಮುತ್ತಿಟ್ಟರೆ ಸುಡದೇ ಇರುತ್ತದೆಯೇ ?

೩೫. ಹಳ್ಳಿ ಊರಿಗೆ ಕೊಳ್ಳಿ ದೀಪ

೩೬. ಕುರತನ ಕೈ ದೀವಿಗೆಯಂತೆ

೩೭. ಅಡ್ನಗೋಡೆಗೆ ದೀಪ ಮಡುಗಿದ ಹಾಂಗೆ

೩೮. ಕುರುಡಂಗೆ ದೀಪ ಎತ್ನಾಗೆ ಪೊಟ್ಟರಿಗೆ ಸಂಗೀತ ?

೩೯. ದೀಪದ ಹುಳುವಿನ ಹಾಂಗೆ (ದೀಪಕ್ಕೆ ಬೀಳುವ ಹುಳದ ಹಾಗೆ)

೪೦. ಮನೆ ದೀಪ ಹೇಳಿ ಮುತ್ತು ಕೊಟ್ಟರೆ ಗಡ್ಡ ಮೀಸೆ ಹೊತ್ತಿದ್ದಿಕ್ಕೊ ?

೪೧. ನೂರು ಬತ್ತಿ, ನೀರೆಣ್ಣೆ ನನ್ನ ಸಂಸಾರ, ಸಣ್ಣ ಗುರಿಯೇ ಜಗ ಜ್ಯೋತಿ

೪೨. ಉಂಡದ್ದೇ ಉಗಾದಿ ಮಿಂದದ್ದೇ ದೀವಳಿಗೆ

೪೩. ದೀಪ ದೀಪಾಂತರಕ್ಕೆ ಹೋಯಿತು ಬತ್ತಿ ಪರ್ವತಕ್ಕೆ ಹೋಯಿತು.

೪೪. ದೀಪತಿಂಬುರು ಬೆಂಕಿಯೇ

೪೫. ದೀವಟಿಗೆ ಮುಂದೆ ದೀಪವೇ ?

೪೬. ದೀನ ದೀಪದಂತೆ, ದಶಾಹಿ, ನಾನು

೪೭. ಬತ್ತಿ ನೂಕಲಾರದವ ಬಂದ ದಳ ನಡಿನ್ಯಾನೇ ?

೪೮. ಜ್ಯೋತಿ ಬಣ್ಣದವರ ಪೇಟೆಯೆಲ್ಲಿ ಜ್ಯೋತಿ ಮಾರುವುರುಂಟೋ,

೪೯. ಕತ್ತಲಲ್ಲಿ ಬೆಳಕಿದ್ದಂತೆ

೫೦. ಕತ್ತಲೆ ಇಲ್ಲದೆ ಬೆಳಕು ತಿಳಿಯದು

೫೧. ದೀಪ ಇಲ್ಲದೆ ಬೆಳಕು

೫೨. ದೀಪಕ್ಕೆ ಬಿದ್ದ ಹಾತೆಯಂತೆ

೫೩. ಹೆಣ್ಣು ಅಂತ ಶಲಭ ದೀಪದ ಮೇಲೆ ಬಿದ್ದು ಸತ್ತ ಹಾಗೆ

೫೪. ದೇವರ ಮುಂದೆ ದೀಪ ಎಣ್ಣೆಯ ಮೇಲೆ ಕೋಪ

೫೫. ನೀ ಕಳ್ಳ, ನಾ ಕಳ್ಳ, ತೋರೋ ದೀಪ ತೋರ್ತೇನೆ ಮಾಡೋ ಪೂಜೆ ಮಾಡ್ತೇನೆ.

೫೬. ಒಪ್ಪಿದರೆ ಒಪ್ಪಿಕೋ ಇಲ್ಲಿದ್ರೆ ಇಲ್ಲ.

೫೭. ಬಡವಿ ದೀಪ ಕೆಡದೆ ಉರಿದಂಗೆ

೫೮. ಕವಳಕ್ಕೆ ಹೋದರೂ ಕೈದೀಪ ಹಿಡಿಸಿಕೊಂಡು ಹೋಗಬೇಕು

೫೯. ಇಲಿಯನ್ನು ಹಿಡಿಯುವ ಬೆಕ್ಕಿಗೆ ದೀಪ ಹೆರಿದ ಹಾಗೆ

೬೦. ಜಾತಿ ಜಾತಿಯನ್ನು ಕಾಯುವುದು ಬೆಳಕು ಬೆಳಕನ್ನು ಕಾಯುವುದು

೬೧. ಎಣ್ಣೆಗೆ ಬತ್ತಿಗೆ ನೇರ

೬೨. ಎಣ್ಣೆಯಿರುವತನಕ ದೀಪದ ಪ್ರಕಾಶ ಪುಣ್ಯವಿರುವತನಕ ಮನೆಯ ಪ್ರಕಾಶ

೬೩. ಮಂಗಳಾರತಿ ಕಾಲದಲ್ಲಿ ಮಂಗ ಬಂದ್ಹಾಗೆ

೬೪. ಜ್ಯೋತಿ ಇಲ್ಲದ ಮನೆ ರೀತಿ ಇಲ್ಲ, ರೀತಿ ಇಲ್ಲದ ಮನೆ ನೀತಿಯಿಲ್ಲ

೬೫. ಎಣ್ಣೆ ಇರುವತನಕ ದೀಪದಾವನಕ ದೀಪದಾದ, ಕಣ್ಣೀರಿರುವತನಕ ಮನುಷ್ಯನಾದ

೬೬. ಜ್ಯೋತಿ ಬಣ್ಣದವರ ಪೇಟೇಲಿ ಜ್ಯೋತಿ ಮಾಡುವುದುಂಟೆ ?

೬೭. ''ಕೃಷ್ಣ ರಾಜ ಭೂಪ ಮನೆಯಲ್ಲಿ ದೀಪ''

ಹೀಗೆ ಸಾರ್ವಕಾಲಿಕ ಸತ್ಯವನ್ನೇಳುವ ಗಾದೆಗಳು ಹೊತ್ತು ಗೊತ್ತುಗಳಿಲ್ಲದೆ ಬಳಕೆಯಾಗುತ್ತವೆ. ಸಾಂಸ್ಕೃತಿಕ ಮೌಲ್ಯವನ್ನೇ ಹೊಂದಿರುವ ಗಾದೆ ಬದುಕಿನ ಅನೇಕ ಪ್ರಶ್ನೆಗಳಿಗೆ ಉತ್ತರವಾಗಿ ನಿಲ್ಲುತ್ತದೆ. ನಿಜವಾಗಿಯೂ ಗಾದೆಗಳು ಮಾಡುವ ಮಹತ್ವದ ಕೆಲಸವೆಂದರೆ ಮನುಷ್ಯನ ಬದುಕಿನಲ್ಲಿ ಭ್ರಮೆಗಳನ್ನು ತುಂಬಿಸದೆ ವಾಸ್ತವದ ಕಟುಸತ್ಯಗಳನ್ನು ನೇರವಾಗಿ ಅರ್ಥಮಾಡಿಸುತ್ತವೆ. ಯಾರ ಹಿಡಿತಕ್ಕೂ ಭಾಗದೇ ಸ್ವತಂತ್ರವಾಗಿ ಆಳ್ವಿಕೆ ಮಾಡುತ್ತದೆ. ದೈನಂದಿನ ಜೀವನದ ಘಟನೆಗಳೇ ಇವುಗಳ ಬಳಕೆಗೆ ಆಧಾರಗಳು. ಅನುಭವದ ಹರಳಾಗಿ, ಜ್ಞಾನವಿವೇಕಗಳ ಗುಳಿಗೆಗಳಾಗಿ ಸಮಷ್ಟಿಯೊಳಗೆ ವ್ಯಷ್ಟಿಯಿಂದ ಉದ್ಭವಿಸಿ ಮತ್ತೇ ಸಮಷ್ಟೀಕರಿಸಿಕೊಳ್ಳುತ್ತಲೇ ತನ್ನದೇ ಆದ ಮೌಲ್ಯವನ್ನು ಹೊಂದಿವೆ.

ವೇದ ಸುಳ್ಳಾದರೂ ಗಾದೆ ಸುಳ್ಳಾದಿತೇ ? ಎಂಬ ಒಂದು ಗಾದೆ ಮಾತು ಗಾದೆಗಳಿಗಿರುವ ಮಹತ್ವವನ್ನು ತಿಳಿಸುತ್ತದೆ. ಹಾಗೆ ಗಾದೆಗಳಿಗಿರುವ ಸತ್ವ ಸತ್ಯವನ್ನು ಎತ್ತಿ ಹಿಡಿಯುತ್ತದೆ. ಅನುಭವದಿಂದ ಉಗಮಗೊಂಡು ಬಾಯಿಂದ ಬಾಯಿಗೆ ಹರಿದು ಬಂದವುಗಳಾಗಿದ್ದರೂ, ಹಿರಿಯರೊಂದಿಗಿನ ವರ್ತನೆ, ಬಂದು ಬಾಂಧವರೊಂದಿಗೆ ಹೊಂದಾಣಿಕೆ, ಕುಟುಂಬದ ಜವಾಬ್ದಾರಿ, ಸಾಮಾಜಿಕ ಜವಾಬ್ದಾರಿ, ಇತ್ಯಾದಿ ವರ್ತನೆಯು ಎಲ್ಲಾ ಮಾದರಿಗಳ ಪರಂಪರೆಯ ಮೌಲ್ಯಗಳನ್ನು ತುಂಬಿ ತತ್ವಬಂಧುಗಳಂತೆ ಪ್ರಜ್ವಲಿಸುತ್ತಿವೆ. ಗಾದೆಗಳ ಮಹತ್ವವನ್ನು ಅರಿಯಬೇಕಾದರೆ, ಜನಪದರ ಜೀವನವನ್ನು ಆಶ್ರಯಿಸಬೇಕಾಗುತ್ತದೆ. ವ್ಯಕ್ತಿಯಿಂದ ವ್ಯಕ್ತಿಗಾಗಿಯೇ ಸೃಷ್ಟಿಗೊಂಡು ಸಮೂಹದೊಳಗೆ ಬೆರೆತು, ಅಥವಾ ಕಲೆತು ಮೊಳಕೆಯೊಡೆದು ಸಸಿಯಾಗಿ ಹೆಮ್ಮರವಾಗಿ ಬೆಳೆದು ನಿಂತಿದೆ. ಜೀವನವನ್ನು ನಿರೂಪಿಸುವ ಕೆಲಸ ಮಾಡುವುದರೊಂದಿಗೆ ಬದುಕನ್ನು ರೂಪಿಸುವ ಕೆಲಸ ಮಾಡುತ್ತಿವೆ. ಒಟ್ಟಾರೆ ಜನಪದರ ಗಾದೆಗಳು ಅವರ ಜೀವನ ಕ್ರಮಕ್ಕೆ ಅವರ ಸಂಸ್ಕೃತಿಗೆ ಅವರ ಒಪ್ಪಿಕೊಂಡ ಮೌಲ್ಯಗಳಿಗೆ ಕೈಗನ್ನಡಿಯಾಗಿವೆ.

ಸಮಾಜದಲ್ಲಿ ಸುಖಶಾಂತಿಗಳು ನೆಲೆಸಬೇಕಾದರೆ ಜನರು ತಮ್ಮ ನಡೆ, ನುಡಿಗಳಲ್ಲಿ ತಮಗೂ ತಮ್ಮ ಸಮಾಜಕ್ಕೂ ಒಳಿತಾಗುವಂತೆ ಹೊಂದಿಸಿಕೊಳ್ಳುತ್ತ ಬದುಕಬೇಕು. ಒಬ್ಬ ವ್ಯಕ್ತಿ-ವ್ಯಕ್ತಿಯೊಡನೆ ಮಾತ್ರವಲ್ಲ ಕುಟುಂಬದೊಡನೆ ಅಲ್ಲದೆ, ನೆರೆಹೊರೆಯವರು, ನೆಂಟರಿಷ್ಟರು ಸಮಾಜದ ಎಲ್ಲ ಬಗೆಯ ಜನರು ಎದುರಾಗುತ್ತಾರೆ. ಬಾಳಿನ ಏರು ಪೇರು, ಸಾವು ನೋವು, ಬಡತನ, ಸಿರಿತನ ಅವನ ಚಿಂತನೆಗೆ ಚಾಲನೆ ಕೊಡುತ್ತದೆ. ಪಾಪ ಪುಣ್ಯ, ದೇವರು, ದೆವ್ವ, ಆಚಾರ ವಿಚಾರ ನಂಬಿಕೆ ಇತ್ಯಾದಿ ಬಗೆಗಿನ ಬದ್ಧತೆಗಳು ಅವನ ಜೀವನ ರೂಪಿಸಿಕೊಡುವಲ್ಲಿ ಮಹತ್ವ ಸಾಧಿಸುತ್ತಿವೆ. ಈ ಹಿನ್ನೆಲೆಯಲ್ಲಿ ಜನಪದ ಜೀವನ ರೂಪುಗೊಳ್ಳುತ್ತದೆ. ಹಾಗೆ ಇಂಥ ಮೌಲ್ಯಯುತವಾದ ಮಾತುಗಳು ತತ್ವ ಆದರ್ಶಗಳಂತೆ ಅವನ ಬದುಕಿನಲ್ಲಿ ಪರಿಣಾಮ ಬೀರುತ್ತವೆ. ಅಂದರೆ ''ಆರಿ ಹೋಗುವ ದೀಪಕ್ಕೆ ಕಾಂತಿ ಹೆಚ್ಚು''

ಎಂದು ಹೇಳುತ್ತಾರೆ. ಇದರ ಅರ್ಥ ಕಾಲ ಅಂತ್ಯವಾಗುತ್ತಿದೆ ಎಂದು ಸೂಚಿಸುತ್ತಿದೆ. ಅಂದರೆ ಎಣ್ಣೆ ಬತ್ತಿ ಎರಡು ಖಾಲಿಯಾಗುತ್ತ ಬಂದ ಹಾಗೆ ಅದರ ಕಾಂತಿ ಹೆಚ್ಚಾಗುತ್ತದೆ. 'ಕೇಡು' ಸಂಭವಿಸಬಹುದು ಎಂಬ ಸೂಚನೆಯೊಂದಿಗೆ ಈ ಗಾದೆ ಬಳಸುತ್ತಾರೆ. ಮನುಷ್ಯ ಎಷ್ಟೋ ತಪ್ಪುಗಳನ್ನು ಮಾಡಿದರೂ ಕೊನೆಯ ಹೊತ್ತಿಗೆ ತಿದ್ದಿಕೊಳ್ಳದಿದ್ದರೆ ಮತ್ತದೇ ಆರ್ಭಟ ಹೆಚ್ಚಿದರೆ, ಸಾವು ಬಂದರೂ ಕಿಡಗೇಡಿತನದ ಬುದ್ಧಿಯನ್ನು ಬಿಡದೆ ಇನ್ನೂ ಅದೇ ಮನಸ್ಸ ಸ್ಥಿತಿಯಲ್ಲಿ ಇದ್ದರೆ, ವಿನಾಶಕಾಲೇ ವಿಪರೀತ ಬುದ್ಧಿ ಎಂದು ಹೇಳುವ ಹಾಗೆ ಈ ಗಾದೆ ಬಳಕೆಯಾಗುತ್ತದೆ. ''ಗಾಳಿಗೆ ಒಡ್ಡಿದ ದೀಪದಂತೆ'', ಎಂಬುದು ಮತ್ತೊಂದು ಗಾದೆ. ಈ ಗಾದೆಯಲ್ಲಿ ಬದುಕು ಎಲ್ಲಿಯಾದರೂ ಸಿಕ್ಕಿಹಾಕಿಕೊಂಡರೆ ಅದರ ಗತಿ ಹೇಗಾಗುತ್ತದೆ ಎಂಬುದನ್ನು ವಿವರಿಸುತ್ತದೆ. ಅಂದರೆ ಬೆಂಕಿ ಜಾಸ್ತಿಯಾಗುತ್ತದೆ. ಮನೆ, ಮನಸ್ಸು ಶಾಂತತೆಯನ್ನು ಕಳೆದುಕೊಂಡು ರೌದ್ರನರಕದಿಂದ ತುಂಬಿತುಳುಕಾಡುತ್ತದೆ. ಮತ್ತಾರದೋ ಹಿಡಿತಕ್ಕೆ ಸಿಕ್ಕಿಕೊಂಡಾಗ ಗಾಳಿಗೆ ಒಡ್ಡಿದ ದೀಪದಂತೆ ಎನ್ನುತ್ತಾರೆ. ಉರಿಯೋ ದೀಪಕ್ಕೆ ಎಣ್ಣೆ ಹೊಯ್ದಂಗೆ ಎಂಬುದು ಪ್ರಸಿದ್ಧವಾದ ಮಾತು. ಮೊದಲೆ ನೋಡಾಗಿರುವ ಜಾಗಕ್ಕೆ ಮತ್ತಷ್ಟು ಆ ನೋಟನ್ನು ಹೆಚ್ಚು ಮಾಡುವ ಬುದ್ದಿ ಇರುವಂಥವರ ಕುರಿತು ಹೇಳುತ್ತದೆ. ಜನಪದರ ಎಷ್ಟೋ ಗಾದೆಗಳು ಪಾಪ ಪುಣ್ಯಗಳನ್ನು ಆಧರಿಸಿ ರಚನೆಗೊಂಡಿರುತ್ತವೆ. ''ದೀಪ ಉರೀತೋ ಪಾಪ ಉರಿತೋ'' ''ಪಾಪಮಾಡಿ ದೀಪ ಬಾಯಲ್ಲಿ ಉರಿದರು'' ''ಬೆಂಕಿ ಇದ್ದಲ್ಲಿ ಬೆಳಕು ನೀರಿದ್ದಲ್ಲಿ ಕೆಸರು'' ಎಂಬ ಗಾದೆಗಳು ಇದೇ ನೆಲೆಯಲ್ಲಿ ಬಳಕೆಯಾಗುತ್ತವೆ. ಇಲ್ಲೆಲ್ಲಾ ಮನುಷ್ಯನ ಪಾಪ ಕರ್ಮಗಳನ್ನು ಅಳೆಯುವ ಸಾಧನವಾಗಿ ಬಳಕೆಯಾಗಿವೆ. ಹಾಗಾಗಿಯೇ ಗಾದೆಗಳು ಸಾರ್ವಕಾಲಿಕ ಸತ್ಯಗಳನ್ನು ಹೇಳುತ್ತವೆ ಇವುಗಳಂತೆ ಕತ್ತಲೆ ಬೆಳಕನ್ನು ಕುರಿತ ಗಾದೆಗಳು ಇವೆ. ಅವುಗಳೆಂದೆ ''ಅಡ್ಡಗೋಡೆ ಮೇಲೆ ದೀಪವಿಟ್ಟ ಹಾಗೆ'' ಕತ್ತಲಲ್ಲಿ ಬೆಳಕಿದಂತೆ'', ''ಕತ್ತಲೆ ಇಲ್ಲದೆ ಬೆಳಕು ತಿಳಿಯದು'', ''ದೀಪ ಬಂದಾಗ ಕತ್ತಲೆ ಕಂಡಂತೆ'' ಇತ್ಯಾದಿ ಗಾದೆಗಳು ಕಾಣಬರುತ್ತವೆ. ಮನುಷ್ಯನ ಮಾತುಗಳು ಗೊಂದಲಕ್ಕೆ ಸಿಲುಕುವಂತಿರಬಾರದು ಅಂಥ ಮಾತುಗಳು ಅಡ್ಡಗೋಡೆ ಮೇಲೆ ದೀಪವಿದ್ದಂತೆ ಇರುತ್ತದೆ ಹಾಗೆ ಕಷ್ಟ ಬಂದಾಗಲೇ ಸುಖದ ಅರಿವು ಸಾಧ್ಯ. ಅತಂತ್ರದ ಬದುಕನ್ನು ಯಾರು ಬಯಸುವುದಿಲ್ಲ. ಆ ಅರಿವು ಬೆಳಕಿನ ರೂಪದಲ್ಲಿ ಗೋಚರಿಸುತ್ತದೆ. ಹಾಗಾಗಿಯೇ ನಮ್ಮ ಈ ಅನುಭಾವಿಗಳು ಕತ್ತಲೆ ಇಲ್ಲದೆ ಬೆಳಕು ತಿಳಿಯದು ಎನ್ನುತ್ತಾರೆ.

ಸಮಾಜದಲ್ಲಿ ಎಲ್ಲರೂ ಸುಖಿಗಳಾಗಿರುವುದು ಸಾಧ್ಯವಿಲ್ಲ. ಯಾವುದೋ ಕಾರಣಕ್ಕಾಗಿ ಮನುಷ್ಯನಿಗೆ ಸಂಕಟ, ನೋವು, ನಿರಾಸೆಗಳು ಇದ್ದೆ ಇರುತ್ತವೆ. ಇಂಥ ಸಂಕಟದ ಘಳಿಗೆಯಲ್ಲೂ ವ್ಯಕ್ತಿ ತನ್ನ ಕಷ್ಟಗಳನ್ನೆಲ್ಲಾ ನುಂಗಿಕೊಂಡು ಬೇರೆಯವರ ಸುಖಕ್ಕೆ ದಾರಿಮಾಡಿಕೊಡುತ್ತಾವೆ. ಮತ್ತೊಬ್ಬರ ಸುಖದ ನೆರಳಲ್ಲಿ ತನ್ನ ಸುಖ ನೆಮ್ಮದಿಗಳನ್ನು ಕಂಡುಕೊಳ್ಳಲು ಪ್ರಶ್ನಿಸುತ್ತಾನೆ ! ನಿತ್ಯ ಜೀವನ ತತ್ವವನ್ನು ನಂಬಿ ದೀಪದ ಕೆಳಗೆ ಕತ್ತಲಿನಿಂದ ಬದುಕುತ್ತಾನೆ. ಈ ಕುರಿತಂತೆ ಇದ್ದೂ ಅನೇಕ ಗಾದೆಗಳು ಸಿಕ್ಕುತ್ತವೆ. ತಮ್ಮ ಮಹತ್ವ ಸಾರುತ್ತದೆ.

ಗಾದೆ ಜನಪದ ಜೀವನದ ಉಸಿರು. ಅದಕ್ಕೆಂದೇ ಜನಪದ ಜೀವನದಲ್ಲಿ ತನ್ನದೇ ಆದ ಸ್ಥಾನ ದೊರೆತಿರುವುದು ಜನಪದರು ತಮ್ಮ ಜೀವನದಲ್ಲಿ ಗಾದೆಗಳಿಗೆ ಎಷ್ಟರ ಮಟ್ಟಿಗೆ ಅಂಟಿಕೊಂಡಿದ್ದರು ಎಂದರೆ ಗಾದೆಗಳಿಲ್ಲದೆ ತಮ್ಮ

ಅಭಿಪ್ರಾಯಗಳನ್ನು ಸ್ಪಷ್ಟವಾಗಿ ಹೇಳಲು ಸಾಧ್ಯವೇ ? ಇಲ್ಲ. ಬೆಂಕಿಯೊಂದಿಗೆ ಸರಸವೆ? ಒತ್ತಿಲ್ಲದೆ ಒಲೆ ಉರಿಯದು, ಬೆಂಕಿಗೆ ಕರಗದ್ದು ಬಿಸಿಲಿಗೆ ಕರಗೀತೆ? ಮನೆ ದೀಪವೆಂದು ಮುತ್ತಿಟ್ಟರೆ ಸುಡದೇ ಇರುತ್ತದೆಯೇ? ಕುರುಡನಿಗೆ ದೀಪ ಬೇಡ ಅಂದರೆ ಮನೆ ಮಂದಿಗೂ ಬೇಡವೇ? ಕಳ್ಳ ದೇವರಿಗೆ ಕೊಳ್ಳಿ ದೀಪ, ಎಂಬಂಥ ಅನೇಕ ಗಾದೆಗಳು ಸಂದರ್ಭಕ್ಕೆ ತಕ್ಕಂತೆ ಬಳಸುತ್ತಾರೆ. ಇವುಗಳೆಲ್ಲದರ ಹಿಂದೆ ಒಳ್ಳೆಯದಾಗಬೇಕು ಎಂಬ ಆಶಯವನ್ನು ಹೊಂದಿ, ತಿದ್ದಿ, ತೀಡುವ ಪ್ರಯತ್ನ ಮಾಡಿವೆ.

ಯಾರೋ ಒಬ್ಬ ಗರತಿ ತನ್ನ ಸಂಸಾರ ನೂರು ಬತ್ತಿ, ನೀರೆಣ್ಣೆ ನನ್ನ ಸಂಸಾರ, ಸಣ್ಣ ಗುರಿಯೋ ಜಗ ಜ್ಯೋತಿ ಎಂದು ಬೇಡಿಕೊಳ್ಳುತ್ತಾಳೆ. ತನ್ನ ಸಂಸಾರವನ್ನು ವಿವರಿಸುತ್ತ ಅದು ತಣ್ಣಗೆ ಉರಿಯುವಂತೆ ಅಲ್ಲಿ ಶಾಂತಿ ನೆಮ್ಮದಿ ಶಾಶ್ವತವಾಗಿ ನೆಲೆಸುವಂತೆ ಮಾಡು ಎಂದು ಬೇಡಿಕೊಳ್ಳುತ್ತಾಳೆ. ಹೀಗೆ ಜನಪದರಲ್ಲಿ ಅದೆಷ್ಟೋ ಸಾವಿರದ (ಸಾವು ಇರದ) ಗಾದೆಗಳು ಜೀವಂತವಾಗಿ ನಿತ್ಯನೂತನವಾಗಿ ಹರಿಯುತ್ತವೆ.

**೩.೪. ಒಗಟು**

ಜನಪದರ ಒಗಟಿನ ಪ್ರಪಂಚ ತುಂಬಾ ವಿಸ್ತಾರವಾದದ್ದು. ಮನರಂಜನೆಯನ್ನೇ ತಮ್ಮ ಬದುಕಿನ ಭಾಗಮಾಡಿಕೊಂಡಿದ್ದ ಜನಪದರು ಒಗಟನ್ನು ಆ ಮನರಂಜನೆಯ ಭಾಗಮಾಡಿಕೊಂಡಿದ್ದವರು. ಅವರು ತಮ್ಮ ಬಿಡುವಿನ ವೇಳೆಯಲ್ಲಿ, ಹಬ್ಬ ಹರಿದಿನಗಳಲ್ಲಿ, ಹರಟೆ ಸಂದರ್ಭದಲ್ಲಿ ಎಲ್ಲರೂ ಕೂಡಿ ಸಂಭ್ರಮಿಸಿದ್ದರು. ಈ ಸಮಯದಲ್ಲಿ ತಮ್ಮ ಪ್ರತಿಭೆ, ಕಲ್ಪನೆ, ಬುದ್ದಿ ಚಮತ್ಕಾರವನ್ನು ಪ್ರದರ್ಶಿಸುತ್ತಿದ್ದರು. ಕಾವ್ಯಾತ್ಮಕವಾಗಿ, ಗೂಡಾರ್ಥವಾಗಿ ಸೃಷ್ಟಿಗೊಂಡ ಸುಂದರ ಚತುರೋಕ್ತಿಯೇ ಒಗಟು. ತಮ್ಮ ಮಾತಿನ ಮೋಡಿಯಲ್ಲಿ ಪದಗಳನ್ನು ಕಟ್ಟಿ ಅದರ ಗಂಟುಗಳನ್ನು ಬಿಡಿಸುವುದೇ ಒಂದು ಮೋಜಿನ ಸಂಗತಿಯಾಗಿತ್ತು. ಒಗಟುಗಳು ಮೂಲತಃ ಸಮಷ್ಟಿಯ ಸೃಷ್ಟಿ, ಯಾವುದೇ ಪ್ರಕಾರ ಹತ್ತು ಜನರ ಚಿಂತನೆಯಲ್ಲಿ ಒಬ್ಬನ ಕಲ್ಪನಾ ಪ್ರತಿಭಾ ಮೂಷೆಯಲ್ಲಿ ಪಾಕಗೊಂಡ ಅನುಭವವಾಗಿ ಸಾಹಿತ್ಯಿಕವಾಗಿ ಪ್ರಕಟಗೊಳ್ಳುತ್ತದೆ. ಗಿರಿಯಿಂದ ಜನಿಸಿದ ಜರಿ ಸಾಗರ ಸೇರುವಂತೆ ತಮ್ಮ ನೋವು ನಲಿವುಗಳಿಗೆ ಒಂದು ಸಿದ್ಧರೂಪು ಕೊಟ್ಟು ಸಾರ್ವತ್ರಿಕಗೊಳಿಸುವಲ್ಲಿ ಫಲಕಾರಿಯಾದ ಸಾಹಿತ್ಯದ ಪ್ರಕಾರಗಳು ಒಂದಕ್ಕೊಂದು ಪೂರಕ ಸಂಬಂಧ ಹೊಂದಿರುತ್ತವೆ.[೫]

ಮೂಲತಃ ಒಗಟುಗಳು ಜಾನಪದೀಯ ನಿರ್ಮಿತಿಯಾಗಿದ್ದರೂ ಸಾಮೂಹಿಕ ರಚನೆಯಲ್ಲಿ ಹೂವಾಗಿ ಅರಳಿಸಿದ್ದಾರೆ. ಸಮಸ್ಯಾತ್ಮಕವಾಗಿ ಅರ್ಥಸಂದಿಗ್ಧತೆಯಿಂದ ಕೇಳುಗನನ್ನು ಚಿಂತನೆಗೆ ಒಳಪಡಿಸುವ ಗುಣ ಹೊಂದಿದ್ದರೂ ಸಂಕೇತ, ಪ್ರತಿಮೆ, ರೂಪಕಗಳ ಮೇಲೆಯೇ ಅಭಿವ್ಯಕ್ತಿ ಚಮತ್ಕಾರಗಳನ್ನು ಪ್ರದರ್ಶಿಸುತ್ತವೆ. ಪ್ರಕಾರಗಳು ಎಲ್ಲ ಮಗ್ಗಲುಗಳನ್ನು ಸ್ಪರ್ಶಿಸುವ ಮತ್ತು ಸ್ಪಂದಿಸುವ ಗುಣ ಹೊಂದಿ ರಸಾತ್ಮಕವಾಗಿ ರಸಕೂಟಕ್ಕೆ ವೇದಿಕೆಯನ್ನು ನಿರ್ಮಿಸಿಕೊಂಡು ಎಲ್ಲರನ್ನು ಆಹ್ವಾನಿಸುವಂತೆ, ಒಗಟು ಈ ಕಾರ್ಯ ಮಾಡುತ್ತದೆ.

ಕನ್ನಡದಲ್ಲಿ ಒಗಟು ಎಂದರೆ ಒಡಪು, ಮುಂಡಿಗೆ ಎಂಬ ಹೆಸರುಗಳೂ ಇವೆ. ಸಂಸ್ಕೃತದಲ್ಲಿ ಪ್ರಹೇಳಿಕೆ ಸಮಸ್ಯೆ, ಕೂಟ, ಬ್ರಹ್ಮೋದ್ಯ ಮುಂತಾದ ಹೆಸರುಗಳಿವೆ. ಇಂಗ್ಲಿಷಿನಲ್ಲಿ Riddle ಎನ್ನುತ್ತಾರೆ. ಒಂದು ವಸ್ತುವನ್ನು ಮತ್ತೊಂದು

ವಸ್ತುವಿನ ವ್ಯಾಜದಿಂದ ಚಮತ್ಕಾರಯುತವಾಗಿ ವರ್ಣಿಸುತ್ತ ಆ ವಸ್ತುವನ್ನು ಕಂಡುಹಿಡಿಯುವಂತೆ ಹೇಳುವುದು ಒಗಟು. ಇವುಗಳ ಉದ್ದೇಶ ಇತರ ಸಾಹಿತ್ಯ ಪ್ರಕಾರಗಳಿಗಿಂತ ಭಿನ್ನವಾಗಿರುತ್ತವೆ. ಉಳಿದ ಪ್ರಕಾರಗಳಲ್ಲಿ ಜನತೆಯ ಸುಖದುಃಖಗಳ ಅಭಿವ್ಯಕ್ತಿಯಿದ್ದರೆ ಒಗಟುಗಳು ಸಹಜ ಸ್ಫೂರ್ತವಾಗಿ, ಬುದ್ಧಿಪೂರ್ವಕವಾಗಿ ರಚನೆಗೊಂಡಂತವು. "ರೂಪಕಗಳು ನಿರಂತರವಾಗಿ ಬಂದರೆ ಒಗಟುಗಳಾಗುತ್ತವೆಂದು" ಅರಿಸ್ಟಾಟಲ್ ಒಂದೆಡೆ ಅಭಿಪ್ರಾಯಿಸಿದ್ದಾನೆ.

ಜನಸಾಮಾನ್ಯರ ಬದುಕಿನಾನುಭವಗಳನ್ನೇ ಮೂಲ ದ್ರವ್ಯವನ್ನಾಗಿಟ್ಟುಕೊಂಡು ಅವರ ತಲೆತಲಾಂತರದ ಮೂಲ ಸಂಸ್ಕೃತಿ ಸಂಪ್ರದಾಯಗಳನ್ನು ಉಳಿಸಿಕೊಂಡು ಸಮಕಾಲೀನ ಬದುಕಿನ ದ್ವಂದ್ವಗಳಿಗೆ ಉತ್ತರವಾಗುವ ಪ್ರಯತ್ನ ಮಾಡುತ್ತಿವೆ. ಒಗಟುಗಳ ಆರಂಭ ಪ್ರಾಚೀನ ಆದಿ ಮಾನವನಿಂದ, ಬೌದ್ಧಿಕ ಸಾಹಸ ಕುತೂಹಲಗಳು ಎಲೆಯಿಕ್ಕಿದೊಡನೆಯೇ ಉಗಮಗೊಂಡಿರಬೇಕು, ಹಾಗಾಗಿಯೆ ಇದು ಓಗಟೆ, ಒಗಂಟೆ, ಒಗಟೆ, ಒಗಂಟು ಎಂದು ರೂಪಾಂತರ ಹೊಂದಿ ಜಗತಪ್ರಸಿದ್ಧವಾಗಿದೆ. ಗ್ರಾಮೀಣ ಭಾಷೆಯಲ್ಲಿ ಒಗಟುಗಳಿಗೆ ಒಂಟುಗಳು ಎಂದು ಕರೆಯಲಾಗುತ್ತದೆ. ಒಗಟಿನ ವಿಶಿಷ್ಟ ಲಕ್ಷಣವೆ ಗೂಢಾರ್ಥದ್ಯೋತಕ, ಇದು ಕೂಡ ವಾಕ್ ಪರಾಂಪರೆಯಲ್ಲಿ ಹರಿದು ಬಂದಿರುವ ಪ್ರಕಾರವಾಗಿದೆ. ಹಾಸ್ಯ ವಿನೋದ ವಿಡಂಬನೆಗಳಿಗೆ ಪ್ರೇರಕವಾಗಿ ಸ್ಪರ್ಧಾತ್ಮಕ ಬುದ್ಧಿ ಗಮ್ಯವಾಗಿ ಬೌದ್ಧಿಕ ಸಿದ್ಧಿಗೆ ಸಂಕೇತ, ಕಲ್ಪತೆಗೆ ಒರೆಗಲು, ಸಾವು ಬದುಕಿಗೆ ಸವಾಲು ಎಂದು ಸಾಹಿತ್ಯಕ ದೃಷ್ಟಿಯಿಂದ ಪದ್ಯಮಯಂತೆ, ಶ್ಲೇಷೆ, ಪ್ರಾಸಬದ್ಧತೆ, ರಚನಾತ್ಮಕ ಸಮತೋಲತ್ಯ, ಅಲಂಕಾರಿಕ ಭಾಷೆಯಿಂದ ಕೂಡಿದ ರಸಾತ್ಮಕ ಮತ್ತು ಧ್ವನಿಪೂರ್ಣವಾದ ಹೇಳಿಕೆ ಎಂದು ಕರೆಯಲಾಗಿದೆ. ಗಾದೆಗಳಂತೆ ಒಗಟು ಕೂಡಾ ಉಪಮಾನ, ಉಪಮೇಯಗಳಿಂದ ಕೂಡಿದ್ದು ವಸ್ತುಗಳ ತರ್ಕಬದ್ಧ ಸಮೀಕರಣವಾಗಿದೆ.[೬]

ಒಟ್ಟಾರೆ ಒಗಟಿನಲ್ಲಿ ಉಪಮಾನ, ವಾಚ್ಯ, ವ್ಯಕ್ತ ಮತ್ತು ಸ್ಪಷ್ಟ, ಉಪಮೇಯ ಸೂಚ, ಅವ್ಯಕ್ತ ಮತ್ತು ಅಸ್ಪಷ್ಟವಾಗಿದ್ದು, ಉಪಮಾನದ ಮೇಲಿಂದ ಉಪಮೇಯ ಕಂಡುಹಿಡಿಯುವುದೇ ಒಗಟಿನ ರಹಸ್ಯವಾಗಿದೆ. ಈ ಒಗಟುಗಳಲ್ಲಿ ಆಂತರಿಕ, ಬಾಹ್ಯ ಲಕ್ಷಣಗಳನ್ನು ಗಮನದಲ್ಲಿಟ್ಟುಕೊಂಡು ಕಲಾತ್ಮಕ, ಗಣಿತಾತ್ಮಕ, ನಿಷೇಧಾತ್ಮಕ ಸಮಸ್ಯಾತ್ಮಕ, ಕಥಾತ್ಮಕ, ಧಾರ್ಮಿಕ, ಕೌಟುಂಬಿಕ, ಸಾಮಾಜಿಕ, ಸಾಂಸ್ಕೃತಿಕ, ಸಾಂಪ್ರದಾಯಿಕ, ಪ್ರಾಕೃತಿಕ, ನಾಗರೀಕ, ಪೌರಾಣಿಕ, ಆಧ್ಯಾತ್ಮಿಕ, ವಿನೋದಾತ್ಮಕ, ಪ್ರಾಣಿ ಸಂಬಂಧಿ, ಸಂವಾದಾತ್ಮಕ, ಪ್ರಶ್ನೋತ್ತರ, ಶ್ಲೀಲ, ಅಶ್ಲೀಲ ವೇಷಿ ಇತ್ಯಾದಿ ರೀತಿಯಾಗಿ ವಿಭಾಗಿಸಿ ಅಧ್ಯಯನ ಮಾಡಲಾಗಿದೆ.

ಈ ಹಿನ್ನೆಲೆಯಲ್ಲಿ ಹಣತೆಗೆ ಸಂಬಂಧಿಸಿದ ಒಗಟುಗಳು ಸಿಗುತ್ತವೆ. ಇಲ್ಲಿ ಜನಪದರು ಹಣತೆಗೆ ಕೊಟ್ಟಿರುವ ರೂಪಕ, ಸಂಕೇತ, ಪ್ರತಿಭೆ, ಕಲ್ಪನೆಯನ್ನು ನೋಡಬಹುದು. ಜನಪದರು ಹಣತೆಗೆ ಬದುಕಿನ ಅರ್ಥಕೊಟ್ಟು ತಮ್ಮ ಎಲ್ಲ ಸಂಪ್ರದಾಯ, ಆಚರಣೆಗಳಿಗೆ ಮೊದಲ ಪ್ರಾಶಸ್ತ್ಯ ನೀಡಿ ಭಕ್ತಿಯಿಂದ ನಮಿಸುತ್ತಾರೆ. ಅವರಿಗೆ ಬೆಳಕು ಸಮಾನ್ಯವಾದ ಬೆಳಕಲ್ಲ, ಅದಕ್ಕೆ ಜೀವಂತಿಕೆ ಇದೆ. ಜನಪದರು ಸೃಷ್ಟಿಗೊಂಡ ಎಲ್ಲವನ್ನು ಆರಾಧನೆ ಹಿನ್ನೆಲೆಯಲ್ಲಿ ನೋಡಿದವರು. ಈ ನೆಲೆಯಲ್ಲಿ ದೀಪದ ಅಥವಾ ಹಣತೆಯ ಭಾಗವು ಒಂದು. ಈ ಕುರಿತಾಗಿ ಕೆಳಕಂಡ ಒಗಟುಗಳ ಸಂಗ್ರಹ ನೋಡೋಣ,

ಒಗಟುಗಳು

೧. ಒಂದು ಕಾಲೀನ ಹಕ್ಕಿ ನೀರಾಗ ನಿಂತದ
ಬಾಯಾಗ ಬೆಂಕಿ ಹಿಡಿದದ

- ದೀಪ

೨. ಕಡಗಂಟೆ ಕುಂಬಾರ ಗಾಣಗಾಪುರ ಗಾಣಗಿತ್ತಿ
ಘರತಾಬಾದ ಪಿಂಜಾರ
ಮೂಗಾರು ಸೇರಿ ಒಂದು ಕಡೆ ಬಾಳ್ವೆಮಾಡ್ತಾರ

(ಪ್ರಣತಿ, ಎಣ್ಣೆ, ಬತ್ತಿ, ದೀಪ)

೩. ಕಲ್ಲು ಬಣಿ ನೀರ ಮಾಡಲು ಬಿಳಿದಂಟಿ ಕೆಂಪು ತೆನಿ

(ಪ್ರಣತಿ)

೪. ಚಿಟಗುಬ್ಬಿ ಮಠ ಕಾಯ್ತದ

(ದೀಪ)

೫. ನೀರೊಳಗ ಒಂದು ಮರ
ನೀರೂ ಕುಡಿತೈತಿ ಬೇರೂ ತಿಂತತಿ

(ದೀಪ)

೬. ಬಂಗಾರದ ಗುಬ್ಬಿ ಬಾಲಲ್ಲೇ ನೀರು ಕುಡಿತದೆ

(ದೀಪ)

೭. ಹಿಡ್ಯಾಕ ಹೋದ್ರೆ ಕಡ್ಯಾಕ ಬರ್ರೈತಿ

(ಬೆಂಕಿ)

೮. ಹೊಟಗ್ಹಾ-ಕಿಡ್ಹಾಂಗ ಬಿಳಿತೆಲೆ
ನೀರು ಕುಡಿಸಿದ್ಹಾಗ ಸಾಯಿತತಿ

(ಬೆಂಕಿ)

೯. ಅಡ್ಡ ಗ್ಯಾಡಿ ಮ್ಯಾಲ ಗಿಡ್ಡ ಕೂತಾನ

(ದೀಪ)

೧೦. ಬಿಳಿ ಹುಡುಗ ಕರಿ ಟೋಪಿ ಹಾಕಿದಾನ

(ದೀಪದ ಕಡ್ಡಿ)

೧೧. ಅಜ್ಜ ಏನು ಕೊಟ್ಟರೂ ತಿಂತಾನ
ನೀರು ಕೊಟ್ರೆ ಸಾಯಿತಾನ

(ಬೆಂಕಿ)

೧೨. ಅಂಗೈ ಅಗಲ ಗದ್ದೆ
ಗದ್ದೆಯೊಳಗ ನೀರು
ನೀರೊಳಗ ಬೇರು
ಬೇರಿನ ತುದಿಗೆ ಬೆಂಕಿ
ಬೆಂಕಿಗೆ ಸಾವಿರ ಕಣ್ಣು

(ದೀಪ)

೧೩. ಅಂಗೈಯೊಳಗ ನೀರು
ನೀರಿನ್ಯಾಗ ಬೇರು
ಬೇರಿನಾಗ ಬೆಂಕಿ
ಬೆಂಕ್ಯಾಗ ನಿಂತಿ ಇಲದಿದ್ರೆ ಕುಂತಿ

(ದೀಪ)

೧೪. ಆರುತಿರುವಾಗ ಕಪ್ಪುಂಟು ಕೃಷ್ಣನಲ್ಲ
ಹತ್ತುತಿರುವಾಗ ಕೆಂಪುಂಟು ರಾವಣನಲ್ಲ
ಹಾಗಾದರೆ ನಾನು ಯಾರು ?

(ದೀಪ)

೧೫. ಎರೀ ಮ್ಯಾಲ ಜೀರಿಗೆ
ಮರಕ ಕೆಂಪು ಬಾಯಿ
ನೀರೂ ಕುಡಿದು ಬೇರನ್ನೂ ತಿಂತೈತಿ

(ದೀಪ)

೧೬. ಎಳೇಳು ಗೆಳೆತಿಯರೆ ಸಾಲಾಗಿ ಮಲಗಿದ್ದು
ಒಟ್ಟಿಗೆ ಉಸಿರಾಟ ಮಾಡುತ್ತಲಿರುವಾಗ
ಮುಟ್ಟಿದರೆ ಹೇಳುವೆವು ನಮ್ಮಮ್ಮ ನಾವು
ಒಂದೊಂದೇ ಹೆಸರಿರುವೆ ನಾವಾರೂ ರಾಮ

(ದೀಪ)

೧೭. ಹತ್ತಿರುವಾಗ ಕೆಂಪು
ಆರಿದಾಗ ಕಪ್ಪು

(ದೀಪದ ಕುಡಿ)

೧೮. ನೋಡಲಿಕ್ಕುಂಟು ಮುಟ್ಟಲಿಕ್ಕಾಗೋಲ್ಲ
ಅದರಿಂದ ಪ್ರಯೋಜನವುಂಟು

(ಬೆಂಕಿ)

೧೯. ಹಗಲು ಮಲಗುವೆನು
ರಾತ್ರಿ ಏಳುವೆನು
ದಾರಿ ತೋರುವೆನು
ನಾನು ಯಾರು

(ರಸ್ತೆ ದೀಪ)

೨೦. ಒಂದೇ ದೀಪದ ಒಂದೇ ಕುಡಿ

(ದೀಪ)

೨೧. ಚಿನ್ನದ ಹಕ್ಕಿ ಬಾಲಲ್ಲೆ ನೀರು ಕುಡಿಯುತ್ತದೆ.

(ದೀಪ)

೨೨. ಚಿಲಿಪಿಲಿ ಎನ್ನುವ ಹಕ್ಕಿ ಇದೆ
ಚಿಂತಾಮಣಿ ಎಂಬ ಕೆರೆ
ಕೆರೆ ನೀರು ಬತ್ತೆದೇಡೆ
ಹಕ್ಕಿಯ ಕಣ್ಣು ಕಪ್ಪು ತೆರೆ

(ದೀಪ)

೨೩. ಕೆಂಪು ಮೂಗಿನ ಪಕ್ಷಿ ಜಗತ್ತೆ ಒಪ್ಪುವುದು
ಕಪ್ಪುಂಟು ತನ್ನಲ್ಲಿ ಗಾಳಿಗಂಜುವುದು
ಸಂಪುಳ್ಳ ಜಾಣರಿಂದ ತಿಳಿಯ ಹೇಳುವುದು

(ದೀಪ)

೨೪. ತಾಯಿ ತಟ್ಟೆಯಂತಾಕಿ
ಮಗಳು ಮುತ್ತಿನಂತಾಕಿ

( ಉರಿ ದೀಪ)

೨೫. ಬಟ್ಟಲ ತುಂಬ ನೀರು
ಬಂಗಾರ ಹಕ್ಕಿ ಬಾಲಲ್ಲೆ
ನೀರು ಕುಡಿಯುತ್ತೆ

(ದೀಪ)

೨೬. ಹೊಂಬಣ್ಣದಲ್ಲಿ ಹೊಳೆಯುತ್ತಿಹಳು
ತಾ ಕನ್ನೆ ದಿಂಬಿನಲ್ಲಿ
ಸಂಪನ್ನೆ ಬಿಂಬದಲಿ
ಕರೆಸಿ ಕೊಂಬಳು ಚಲ್ವೆ ಚನ್ನೆ

( ಉರಿಯುವ ದೀಪ)

೨೭. ಬಂಗಾರ ಗಿಣಿ

ಬಾಲಲ್ಲೇ ನೀರು ಕುಡಿತೈತಿ

(ದೀಪ)

೨೮. ವರತಿ ಮ್ಯಾಗ ಬೇರು

ಬೇರಿನ ಮ್ಯಾಗ ಬೆಳಕು

(ದೀಪ)

೨೯. ಹಿಡದ್ರ ಹಿಡಿತುಂಬ ಬಿಟ್ರೆ ಮನಿ ತುಂಬ

(ದೀಪದ ಬೆಳಕು)

೩೦. ಹುಟ್ಟುತಲೆ ಹಸಿರುಂಟು ಪಚ್ಚೆ ತನ್ನಲ್ಲಿ

ಬೆಳೆಯುತಲಿ ಕಪ್ಪುಂಟು ರತ್ನ ತನ್ನಲ್ಲಿ

ಕಟ್ಟ ಕಡೆಯಲಿ ಕಪ್ಪು ಕಸ್ತೂರಿಯಲ್ಲಿ

ಸೃಷ್ಠಿಸಿದ ಗೋಪಾಲ ತಾನೊಬ್ಬ ಬಲ್ಲ

(ದೀಪದ ಕಡ್ಡಿ)

೩೧. ಹುಟ್ಟುವಾಗ ಕೆಂಪು ಸತ್ತಾಗ ಕಪ್ಪು

(ಬೆಂಕಿ)

೩೨. ಹಾಲು ಬಣ್ಣದ ಹಕ್ಕಿ ನೀಲಿ ವರ್ಣದ ಕೆರೆ

ಬಾಯಿ ಎಂಜಲಾಗುವುದೆಂದು

ಬಾಲದಿಂದ ಕುಡಿಯುತ್ತದೆ

(ದೀಪ)

೩೩. ಕುಂಬಾರನ ಪೇಟೇಲಿರೋ ಗಾಣಿಗ ಶೆಟ್ಟಿ

ಪಿಂಜಾರಪ್ಪನ ಬೆನ್ನು ಹತ್ತಿ

ಸುಟ್ಟು ಭಸ್ಮ ಆಗ್ಯಾನ

(ಹಣತೆ)

೩೪. ಈ ಟೀಪ ಗುಂಡ ಗುಂಡಾಗ ನೀರ

ನೀರಾಗ ಬೇರ ಬೇರಾಗ ಬೆಂಕಿ

(ದೀಪ)

೩೫. ಅಂಗೈಯಗಲ ಕೆರೆ

ಕೆರೆಯಲ್ಲಿ ಬೇರು

ಬೇರಿಗೆ ಬೆಂಕಿ

( ಹರಳೆಣ್ಣೆ ದೀಪ)

೩೬. ಉರಿಕೋ ಉರಿತೆದೆ

ಕುರಿತು ಕುರಿತದೆ

(ದೀಪ)

೩೭. ಏರಿ ಮೇಲೊಂದು

ಜೀರಿಗೆ ಮರ ಹುಟ್ಟಿ

ನೀರನ್ನು ಕುಡಿತಾದೆ

ಬೇರನ್ನು ತಿನ್ತದೆ

(ದೀಪ)

೩೮. ಇಷ್ಟೇ ಕೆರೆ

ಕೆರೆಯಾಗೆ ನೀರು

ನೀರನ್ಯಾಗೆ ಬೇರು

ಬೇರಿನ್ಯಾಗೆ ಬೆಂಕಿ

( ಹಣತೆ)

೩೯. ಕೆರೆ ಬಂದಿದೆ

ಹಾವು ಮಲಗಿದೆ

ಹಕ್ಕಿ ಕೂಗುತಿದೆ

ಕೆರೆ ಬತ್ತಿತು

ಹಾವು ಸತ್ತಿತ್ತು

ಹಕ್ಕಿ ಹಾರಿತು

(ದೀಪ ಉರಿದು ಆರುವುದು)

೪೦. ಕೋಣೇಲಿ ಕೊಪ್ಗೆಂಡು

ಬೀದಿಗೆ ಕಾಲ್ನೀಡು

(ದೀಪ)

೪೧. ಕಂಬಾರನು

ಪಿಂಜಾರನು

ಒಂದ್ರಾಗೆ ಊಟ ಮಾಡುತ್ತಾರೆ

(ಹಣತೆ)

೪೨. ಕುರಿ ಕುರಿಮ್ಯಾಲೆ ಮರಿ
ಮರಿಮ್ಯಾಲೆ ಚಿನ್ನದಾಗರಿ

(ಹಣತೆ)

೪೩. ಕೊಕ್ಕನ ಕೊರುತ್ತೆ
ಕೆರೆ ನೀರು ಬತ್ತುತ್ತೆ

(ದೀಪ)

೪೪. ಕೆರೆ ಏರಿ ಮೇಲೆ
ನಾಲೋರು ಹೆಂಗ್ಸು ಹೋಗ್ತಾರೆ
ಅವ್ರ ಎಣ್ಸಬಹುದು
ಅವರ ನೆರ್ಳ್ಗ ಎಣ್ಸೋಕೆ ಆಗಲ್ಲ

(ಹಣತೆ)

೪೫. ಸಾಲು ಸಾಲು ಮನೆಗಳಿರು
ಲೀಲಾವತಿ ಗಿಣಿಗಳಿರು
ನಾವು ಎತ್ತುವ ಹೊತ್ತಿಗೆ
ನೀವು ಬನ್ನಿಲಿ

(ದೀಪ)

೪೬. ಮುತ್ತಿನಂತ ಹುಡುಗಿನ ಮೂತಿಗೊಂದು ಮೈಯ್ತಾರೆ

(ದೀಪ)

೪೭. ಮೈಸೂರು ಅಂತೋದು ಗಡಿ
ಗಡಿ ಒಳಗೆ ಒಂದು ಗುಡಿ
ಗುಡಿ ಒಳಗೆ ಒಂದು ದರಿ
ಎಲಿ ತೆಲೆ ಮೇಲೆ ಚಿನ್ನದ ಗುರಿ
ಆದ ಬಚದವ ಮೈಸೂರು ಮರಿ

(ದೀಪ)

೪೮. ಹಾಲು ಬಣ್ಣದ ಹಕ್ಕಿ
ನೀಲ ವರ್ಣದ ಕೆರೆ
ಬಾಯಿ ಎಂಜಲಾಗುವುದುಂಟೆ
ಬಾಲದಿಂದ ನೀರು ಕುಡಿಯುತ್ತದೆ.

(ದೀಪ)

೪೯. ಹಾಕಕೊಬ್ಬ

ನೂಕಕೊಬ್ಬ

ಸೊಂಟದ ದೀಪ ತೋರೋಕೆ ಒಬ್ಬ

ಸಾವಿಗೆ ಬತ್ತುವುದು

(ದೀಪ)

೫೦. ಮೋಟ್‌ಗ್ಯಾಡಿ ಮೇಲೆ ಕುಂತು ಬೆಳಕು ಕೊಡುತ್ತೆ

ದೀಪಾನಿಗೆ ಮೂರು ಸಾಲು

ತಮಟೆಗೆಯ ಊರಪ್ಪ ತೇಲ್ ಹೋದ

ತಪ್ಪಿದವರಪ್ಪನಿಗೆ ಮುಟ್ಟೆ ಇಲ್ಲ

(ಹಣತೆ)

೫೧. ಕುಕನೂರು ಕುಂಬಾರ, ಸವನೂರು ಪಿಂಜಾರ, ಗಂಗಾವತಿ

ಗಾಣಗಿತ್ತಿ ಮೂವರು ಒಂದೆಡೆಯಲ್ಲಿ ಬಾಳ್ವೆ ಮಾಡೋದು

(ದೀಪ)

೫೨. ಮನೆಮನೆಯಲ್ಲಿ ಕೆಂಪು ಕನ್ಯೆ

(ದೀಪ)

ಈ ಮೇಲ್ಕಂಡ ಒಗಟು ಸಮೂಹದ ನೆಲೆಯಲ್ಲಿ ಸೃಷ್ಟಿಗೊಂಡರು. ಅವರ ಸಾಮಾಜಿಕ ವ್ಯವಸ್ಥೆ ಹೇಗೆ ವೈಶಿಷ್ಟ್ಯದಿಂದ ಕೂಡಿತ್ತು. ಎಂಬುದನ್ನು ಬಿಂಬಿಸುತ್ತದೆ. ಮನರಂಜನೆ ಒಗಟುಗಳು ಕೇಂದ್ರವಾದರೂ ಅದರೊಳಗೆ ತಮ್ಮ ನೋವು ನಲಿವು, ಕಷ್ಟ, ಸುಖ, ದುಃಖ, ಸಂಕಟಗಳನ್ನು ಬೆರೆಸಿ ತುಂಬು ಮನಸ್ಸಿನ ಈ ಮೂಲಕ ಹಂಚಿಕೊಳ್ಳುತ್ತಿದ್ದರು. ಸಾಹಿತ್ಯದ ಸಾಮಾನ್ಯ ಲಕ್ಷಣವೆಂದರೆ ಸಾರ್ವತ್ರಿಕವಾಗಿರುವುದು. ಅದರಲ್ಲೂ ಜನಪದ ಕಥೆ, ಗಾದೆ, ಹಾಗೂ ಒಗಟುಗಳ ರೂಪ-ಲಕ್ಷಗಳು ಪ್ರಪಂಚದಾದ್ಯಂತ ಒಂದೇ ತೆರನಾಗಿ ದೊರೆಯುವುದನ್ನು ನೋಡಿದ್ದೇವೆ. ಗಾದೆಗಳು-ಮನುಷ್ಯನ ಅನುಭವದ ಸರಕಾದರೆ, ಒಗಟುಗಳು ಅವನ ಬೌದ್ಧಿಕ ಕೌಶಲ್ಯತೆಯ ಸರಕಾಗಿದೆ. ಒಟ್ಟಾರೆ ಸಮಾನತೆಯನ್ನು ಸಾರಿ ಹೆಳುತ್ತವೆ.

ಒಗಟು, ಒಡಪು, ಗಾದೆಗಳ ರಚನೆಗಳನ್ನು ಗಮನಿಸಿದರೆ ಕಾವ್ಯದ ದಾಟಿಯಲ್ಲೇ ಸಿಕ್ಕುವುದರಿಂದ ಅವುಗಳ ಪ್ರಾಸ, ಲಯ, ಮತ್ತು ಭಾಷೆ ಕಾವ್ಯದಕಡೆ ವಾಲಿರುವಂತೆ ಗೋಚರಿಸುತ್ತದೆ. ಒಂದರ್ಥದಲ್ಲಿ ಗದ್ಯ ಪದ್ಯದ ರೂಪದಲ್ಲಿ ಅಭಿವ್ಯಕ್ತಿ ಪಡೆದ ಪ್ರಕಾರಗಳಾಗಿವೆ. ಒಗಟುಗಳ ಲೋಕ ಅನೇಕ ಬಗೆಯಲ್ಲಿ ಕಾಣಿಸಿಕೊಳ್ಳುತ್ತದೆಯಾದರೂ ಒಂದು ವಸ್ತುವಿನ ವರ್ಣನೆ, ಅದರ ಗುಣಗಾನ, ಅದಕ್ಕೆ ಮತ್ತೊಂದು ಹೋಲಿಕೆ ಕೊಟ್ಟು ಹೇಳುವುದು ಒಗಟಿನಲ್ಲಿ ಕಂಡುಬರುವ ಸಂಗತಿ. ಹಾಗಾಗಿಯೇ ಇಲ್ಲಿ ಸಾದೃಶ್ಯದ ದೃಷ್ಟಿಕೋನ ಎದ್ದು ಕಾಣುತ್ತದೆ. ಜನಪದರು ತಮ್ಮ ಸಾಹಿತ್ಯಕ್ಕೆ ಬಳಸಿಕೊಳ್ಳುವ ಮುಖ್ಯ ಆಕರ ಪ್ರಕೃತಿ. ಪ್ರಕೃತಿಯಿಂದಲೇ ಸಕಲವು ಜನ್ಯ ಎಂಬುದನ್ನು ಸಾಭೀತು

ಪಡಿಸುತ್ತಾರೆ. ಈ ಸಾದೃಶ್ಯದ ಕಲ್ಪನೆಗಳು ಪ್ರಕೃತಿಯಿಂದ ಮೂರ್ತರೂಪ ಪಡೆದವುಗಳು. ಇಲ್ಲಿ ಬಾಹ್ಯ ಪ್ರಪಂಚದ ಹೋಲಿಕೆಗಳನ್ನು ಇಟ್ಟುಕೊಂಡು ಅನೇಕ ಒಗಟುಗಳು ರಚನೆಗೊಂಡಿರುತ್ತವೆ.

ಒಂದು ವಸ್ತು, ವಿಷಯ, ಸ್ಥಳ ಅಥವಾ ಜೀವಿಯ ವಿಶೇಷವಾದ ಬಾಹ್ಯ ರೂಪ ಲಕ್ಷಣಗಳೇ ಒಗಟುಗಳ ರಚನೆಗಳಲ್ಲಿ ಕಾಣಸಿಗುತ್ತವೆ. ಅಥವಾ ತಮ್ಮ ಮನೆಯ ಬಳಕೆಯ ವಸ್ತುಗಳು, ಉಡುಗೆ, ತೊಡುಗೆ, ಆಹಾರ, ಪಶು, ಪಕ್ಷಿ, ಸಸ್ಯ, ಶರೀರ ಹೀಗೆ ಬದುಕಿನಲ್ಲಿ ಸಹಜವಾಗಿ ಕಾಣಸಿಗುವ ಮತ್ತು ಅವರ ಅನುಭವಕ್ಕೆ ತೀರ ಹತ್ತಿರವಿರುವ ಅಂಶಗಳಿಂದಲೇ ರೂಪುಗೊಂಡಿರುತ್ತವೆ.

ಇದೆಲ್ಲಕ್ಕಿನ ಹೆಚ್ಚಿನದಾಗಿ ಅವರ ಸ್ಮೃತಿ ಪಟದಲ್ಲಿ ಸುಳಿಯುವ ಸಂಗತಿಗಳಿಗೆ ರೂಪಕಗಳನ್ನು ಕೊಟ್ಟು ಒಗಟಿನ ಆಕಾರ ಕೊಡುವ ಅವರ ಬುದ್ಧಿ ಚಮತ್ಕಾರಕ್ಕೆ, ಜಾಣ್ಮೆಗೆ, ನೆನಪಿಗೆ ಏನು ಕೊಟ್ಟು ಸಾಲದು ಒಂದು ವಸ್ತುವನ್ನು ನೇರವಾಗಿ ಹೇಳುವ ಬದಲು ಅದನ್ನೂ ಗೂಡವಾಗಿ ಹೇಳುವ ಒಂದು ಕಲೆ ಅಥವ ತಂತ್ರವನ್ನು ಹೆಗೆ ಕಲಿತರು ಎಂಬುದೇ ಆಶ್ಚರ್ಯವಾದ ಸಂಗತಿ.

ಉದಾ: ಅಕ್ಕ ಅಕ್ಕ ಭಾವಿನೋಡ
ಬಾವಿಯೊಳಗಿನ ನೀರ ನೋಡ
ನೀರೊಳಗಿನ ಬಳ್ಳಿನೋಡ
ಬಳ್ಳಿಗೊಂದು ಹೂವ ನೋಡ

(ದೀಪ)

ಎಂದು ಹೇಳುವಲ್ಲಿ ದೀಪದ ವರ್ಣನೆಯನ್ನು ವರ್ಣಿಸುವ ಈ ಒಗಟಿನಲ್ಲಿ ಚಿಮಣಿಯನ್ನು ಬಾವಿಯೆಂದು, ಎಣ್ಣೆಯನ್ನು ನೀರೆಂದು, ಬತ್ತಿಯನ್ನು ಬಳ್ಳಿಯೆಂದು, ಜ್ಯೋತಿಯನ್ನು ಹೂ ಎಂದು ಕಲ್ಪಿಸಿಕೊಳ್ಳುತ್ತ ಒಂದಾದ ನಂತರ ಒಂದರಂತೆ ಕೊಡುವ ಸಾದೃಶ್ಯಗಳತ್ತ ನೋಡಿದರೆ ಅವರಲ್ಲಿ ಇಂಥ ಕೌಶಲ್ಯ ಹೇಗೆ ಹುಟ್ಟಿತು ಎಂಬುದೇ ಸೋಜಿಗದ ವಿಷಯ.

ಎಷ್ಟೋ ಸಾರಿ ಬದುಕಿನಲ್ಲಿ ಘಟಿಸುವ ಘಟನೆಗಳನ್ನು ವಿವರಿಸುವತ್ತ ತಾಯಿಗೂ ಮಗಳಿಗೂ ಬರುವ ಹೋಲಿಕೆಯನ್ನು

ತಾಯಿ "ತಟ್ಲೆ"ಯಂತಾಕಿ
ಮಗಳು ಮುತ್ತಿನಂತಾಕಿ

- ಉರಿ ದೀಪ

ಎಂದು ವಿವರಿಸುತ್ತ ಅವರಿಬ್ಬರ ಗುಣಗಳನ್ನು ಆಧರಿಸಿ ಕಟ್ಟಿದ್ದಾರೆ. ಬಾಹ್ಯವಾಗಿ ಇಬ್ಬರ ವ್ಯಕ್ತಿಗಳ ವ್ಯಕ್ತಿತ್ವವನ್ನು ವಿವರಿಸುವ ಸಾದೃಶ್ಯವನ್ನು ಕಟ್ಟಿಕೊಡುತ್ತದೆ. ಹಾಗೆ ಒಂದು ಗಿಡಾಕ ಒಂದೇ ಕುಡಿ (ದೀಪ) ಎಂಬ ಮತ್ತೊಂದು

ಒಗಟು ಸಾರ್ವತ್ರಿಕ ಸತ್ಯವನ್ನೇ ಹೇಳುವಂತಿದೆ. ಕೆಲವು ಒಗಟುಗಳು ವೃತ್ತಿಗಳ ಆಧಾರದಿಂದ ಹುಟ್ಟಿಕೊಂಡಿರುತ್ತವೆ. ಅದು ಇಲ್ಲಿ ಹಣತೆ ಸಂಬಂಧಿಸಿದಂತೆ ರಚನೆಗೊಂಡಿದೆ. ಹಣತೆ ಬೆಳಗುವ ಸಂಸ್ಕೃತಿ ಗಾಣಿಗರಿಂದ ಆರಂಭವಾಯಿತು.

ಉದಾ : ಕಡಗಂಚಿ ಕುಂಬಾರ, ಗಾಣಗಾಪುರ ಗಾಣಗಿತ್ತಿ

ಘರತಾಬಾದ ಪಿಂಚಾರ

ಮುಗಾರು ಸೇರಿ ಒಂದು ಕಡೆ ಬಾಳ್ವೆ ಮಾಡ್ತಾರ

(ಪಣತಿ, ಎಣ್ಣೆ, ಬತ್ತಿ, ದೀಪ)

ಇಲ್ಲಿ ವ್ಯಕ್ತಿಗಳ ಜೊತೆಗೆ ಅವರವರ ಕುಲಗಳನ್ನು ವಿವರಿಸುವ ರೀತಿಯಲ್ಲಿ ರೂಪಕವನ್ನು ಹೆಣೆಯಲಾಗಿದೆ. ಪುರಾಣದ ಹಿನ್ನೆಲೆಯಲ್ಲಿ ರಚನೆಗೊಂಡಿರುವ ಒಗಟೆಂದರೆ

ಉದಾ: ಆರುತಿರುವಾಗ ಕಪ್ಪುಂಟು ಕೃಷ್ಣನಲ್ಲ

ಹತ್ತುತಿರುವಾಗ ಕೆಂಪುಂಟು ರಾವಣನಲ್ಲ.

ಹಾಗಾದರೆ ನಾನು ಯಾರು?

(ದೀಪ)

ಹೀಗೆ ಒಗಟುಗಳ ಮೂಲಕ ಹಣತೆಯು ಪ್ರಾಮುಖ್ಯತೆ ಹೇಗೆ ಸಾಧಿಸಿಕೊಂಡಿದೆ ಎಂಬುದನ್ನು ತಿಳಿಯಬಹುದು. ಕೆಲವು ಒಗಟುಗಳು ಅಪರೂಪದ ವರ್ಣನೆ, ವಿಚಿತ್ರರೂಪಗಳಿಂದ ಪರಸ್ಪರ ಅಸಂಗತವಾದ ವಾಕ್ಯ ಖಂಡಗಳಿಂದಲೂ ರಚನೆಗೊಂಡಿರುತ್ತದೆ. ಅಂಥ ಒಗಟುಗಳೆಂದರೆ,

ಕುರಿ, ಕುರಿಮ್ಯಾಲೆ ಮರಿ

ಏರಿಮ್ಯಾಲೆ ಚಿನ್ನದ ಗರಿ

(ಹಣತಿ)

ಕೆರೆ ಏರಿ ಮೇಲೆ

ನಾಲೋರು ಹೆಂಗ್ಸ್ರು ಹೋಗ್ತಾರೆ

ಅವರ್ನ ಎಣ್ಸಬಹುದು

ಅವರ ನೆರ್ಲ್ನ ಎಣ್ಸೋಕೆ ಆಗಲ್ಲ

(ಹಣತಿ)

ಹೀಗೆ ರೂಪಕಗಳ ಸರಮಾಲೆಯಲ್ಲಿ ಕಟ್ಟಿ ತಮ್ಮ ಕಲಾತ್ಮಕತೆಯನ್ನು ಪ್ರದರ್ಶಿಸುತ್ತಾರೆ. ಕೇಳುಗರಲ್ಲಿ ಹುಡುಕಾಟಕ್ಕೆ ಹಚ್ಚಿ ತನ್ನ ಒಗಟಿನ ನಿಜರೂಪವನ್ನು ಮರೆಮಾಡುವಲ್ಲಿ, ತನಗಿರುವ ಗೂಢಾರ್ಥವನ್ನು ಥಟ್ಟನೆ ಹೊಳೆಯದಂತೆ ಮಾಡುವ ಈ ಒಗಟುಗಳು ತುಂಬಾ ಜನಪ್ರಿಯವಾದ ಸ್ಥಾನ ಪಡೆದುಕೊಂಡಿವೆ. ಒಟ್ಟಾರೆ ಇಲ್ಲಿ ಮನರಂಜನೆ ಎಂಬುದು ಜನಪದರ ಮುಖ್ಯ ಆಶಯವನ್ನು ಒತ್ತಿ ಒತ್ತಿ ವಿವರಿಸುತ್ತದೆ.

ಕಾಲ ಸರಿದಂತೆ ಒಗಟುಗಳ ರೂಪಗಳು ಜಾಣತವನ್ನು ಪರೀಕ್ಷಿಸಲೆಂದೆ ಹುಟ್ಟಿಕೊಂಡಿವೆ ಎನ್ನುವಂತಿವೆ. ಒಟ್ಟಾರೆ ಒಗಟುಗಳು ಹೊಂದಿರುವ ಕ್ರಿಯೆಯ ರೂಪದ ಉದ್ದೇಶ ಅವುಗಳ ಗುಣ ಸ್ವಭಾವಗಳನ್ನೇ ಉಳಿಸಿಕೊಂಡು ಬಂದಿರುವುದು ಒಗಟುಗಳಿಂದ ರೂಪಕಗಳ ರಚನೆಗಳಾಗಿ ತಿರುಗಿರಬೇಕು ಎಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ.

ಸ್ಮಿಥ್ ಥಾಮ್ಸನ್ ಅವರ ಆಶಯ ಸೂಚಿ Motif Index of Folkliterature ಎಂಬ ಕೃತಿಯ ವಿಂಗಡನಾ ಕ್ರಮವು ಆಂತರಿಕ ಸಂಬಂಧದ ಮೇಲೆ ನಿಂತಿದೆ. ಅಂದರೆ, ಒಂದು ವಸ್ತು ಕುರಿತಂತೆ ಇರುವ ಆಕರ ಆಶಯದ ಮಗ್ಗಲುಗಳಲ್ಲಿ ಅನೇಕ ಆಶಯದ ಮಜಲುಗಳನ್ನು ಗುರುತಿಸುವ ಸಾಧ್ಯತೆ ಇದೆ ಎಂದು ಹೇಳುತ್ತಾರೆ.[೬]

ಅಂತೆಯೇ ಒಂದು ವಸ್ತು, ವಿಷಯ, ಸಂಗತಿ, ಅಥವಾ ಜೀವಿಯನ್ನು ಕುರಿತಂತೆ ಅನೇಕ ಒಗಟುಗಳು ರಚನೆಗೊಂಡಿವೆಯಾದರೂ ಒಂದೇ ಗುಣವನ್ನು ಹೆಳುತ್ತವೆ ಎಂದಲ್ಲ. ಅವುಗಳ ಒಂದೊಂದು ಮಗ್ಗಲು, ಗುಣ, ಸ್ವಭಾವ, ಸ್ವರೂಪ ಉಪಯೋಗ ಇತ್ಯಾದಿ ಹೇಳಲು ಸಾಧ್ಯವಿದೆ. ಹಾಗೆ ಈ ಕುರಿತಂತೆ ಹೊಸ ಹೊಸ ಒಗಟುಗಳು ಸೃಷ್ಟಿಗೊಳ್ಳಲು ಅವಕಾಶಗಳಿವೆ. ಸಾದೃಶ್ಯಗಳು ಅನೇಕ ಬಗೆಯಲ್ಲಿದ್ದರು ಅವುಗಳ ಸಂದರ್ಭ, ಒಂದೇ ವಸ್ತುವಿನಿಂದಾಗಿ ಕುರಿತು ನಿರ್ಮಾಣ ಹೊಂದುವ ಒಗಟುಗಳೆಲ್ಲ ಒಂದೇ ಸಂದರ್ಭವನ್ನು ಸೃಷ್ಟಿಸಿಕೊಂಡಿರುತ್ತವೆ.

**೩.೫. ಒಡಪು**

ಒಗಟಿನ ಮತ್ತೊಂದು ವಿಶಿಷ್ಟ ರೂಪವೇ ಒಡಪು. ನೀತಿ ಬೋಧೆಗಿಂತ ಮನರಂಜನೆ ಕಡೆಗೆ ನಿಲುವು ಕೊಟ್ಟ ಜನಪದರು ಒಡಪುಗಳನ್ನು ಒಡವೆ ಇಲ್ಲವೆ ವಿಶೇಷಣ ಎಂದು ಮಾತ್ರ ಅರ್ಥೈಸಬಹುದು. ಇವು ಜನಸಾಮಾನ್ಯರ ಬಾಯಿಯಲ್ಲಿ ಬದುಕಿದ ಪದ. ಗಂಡ ಹೆಂಡತಿಯ ಹೆಸರಿಗೆ ವರ್ಣನಾತ್ಮಕ ಹಿನ್ನೆಲೆಯಾಗಿ ಅದರೊಂದಿಗೆ ಒಡಗೂಡಿಯೇ ಬಂದಿರುವುದರಿಂದ ಇದು ಒಡಪು ಎಂದು ಹೆಸರಾಗಿದೆ. ಮದುವೆ ಮುಂತಾದ ಶುಭ ಸಂದರ್ಭಗಳಲ್ಲಿ ಗಂಡ ಹೆಂಡತಿ ಹೆಸರು ಹೇಳುವಾಗ ಬಳಸುವ ಪದಗಳನ್ನು ಒಡಪುಗಳು ಎನ್ನುತ್ತಾರೆ.

ಹಳ್ಳಿಗರು ದಾಂಪತ್ಯ ಪ್ರೇಮವನ್ನು ಹೇಗೇಗೆ ಪ್ರಕಟಿಸಬಲ್ಲರು ಎಂಬುದಕ್ಕೆ ಒಡಪುಗಳು ಒಂದು ನಿದರ್ಶನ. ಶೃಂಗಾರಕ್ಕೆ, ಹಾಸ್ಯಕ್ಕೆ ಮಿತ್ರರಸೆಂಬಂತೆ ಸಾಹಿತ್ಯತತ್ವ ಸತ್ಯತೆಗೆ ಸಿಗುತ್ತದೆ. ದಂಪತಿಗಳು ತಮ್ಮ ಗಂಡ ಹೆಂಡತಿ ಹೆಸರುಗಳನ್ನು ಹೇಳುವಾಗ ಒಲವು ಬೆರೆತ ಸವಿ ನುಡಿಯ ಭಾವಗಳನ್ನು ಗದ್ಯದಲ್ಲಿ ಹೇಳುವಂತೆ ತಮ್ಮ ಗ್ರಾಮೀಣ ಸಮುದಾಯದ ಗಂಡ ಹೆಂಡಿರು ಜನಪದ ಭಾಷೆಯಲ್ಲೂ ಭಾವ ಗದ್ಯಗಳೊಂದಿಗೆ ಹೇಳುವುದುಂಟು ಎಂದು ಬೆಟಗೇರಿ ಕೃಷ್ಣ ಶರ್ಮ ಹೇಳಿದ್ದಾರೆ. ಈ ಭಾವ ಗದ್ಯಗಳನ್ನು ನಾಗರೀಕರು 'ಒಗಟು' ಎಂದು ಕರೆದರೆ ಜನಪದರು ಇವುಗಳನ್ನೇ 'ಒಡಪು'ಗಳು ಎಂದು 'ಒಡಪ'ಎಂದು ಕರೆಯುವರು. ದಂಪತಿಯ ಹೆಸರುಗಳನ್ನು ಸೌಂದರ್ಯ, ಸ್ವಭಾವ ಗುಣಗಳನ್ನು ಸ್ವಭಾವತಃ ಇಲ್ಲವೇ ವೈಭವೀಕರಿಸಿ ವರ್ಣಿಸಿ ಹೇಳುವುದು ಒಡಪುಗಳಾಗಿದ್ದು ಇವುಗಳ ನಿರ್ದಿಷ್ಟ ನಿಷ್ಪತ್ತಿ ಹೇಳುವುದು ಕಷ್ಟವಾದರೂ ಪೊಡಮೆಕ್>ಪೊಡರ್ಪು>ಒಡಪು ಆಗಿರಬಹುದು.[೭]

ಡಾ. ಎಂ. ಎಸ್.ಲಠ್ಠೆಯವರು ಪೊಡರ್ಪು ಶಬ್ದದಿಂದ ಒಡಪು ಬಂದಿರಬೇಕು, 'ಅರ್ಥ ಇಟ್ಟು ಹೇಳು' ಅಥವಾ 'ಒಪ್ಪಿಟ್ಟು ಹೇಳು' ಎಂದು ಕರೆಯುವ ಸಂಪ್ರದಾಯವಿದೆ ಎಂದಿದ್ದಾರೆ. ಕವಲಿ ಅವರು ಒಗಟಿಗೆ ವ್ಯಾಖ್ಯಾನವಾಗಿ ಗಂಡ ಹೆಂಡಿರ ಹೆಸರನ್ನು ಹೇಳುವಾಗ ಪ್ರಾಸಬದ್ಧವಾಗಿ ಹೇಳುವ ಮಾತಿನ ರೂಢಿಯ ಪ್ರಹೇಳಿಕಾ ಎಂದಿದ್ದಾರೆ.[೮]

ಒಂದು ಕಾಲಘಟ್ಟದವರೆಗೆ ಒಗಟು ಮತ್ತು ಒಡಪುಗಳು ಒಂದೇ ಎಂದು ಅನೇಕ ವಿದ್ವಾಂಸರು ವಿಶ್ಲೇಷಿಸಿದ್ದಾರೆ. ಒಟ್ಟಾರೆ ನಿರ್ಧಿಷ್ಟ ಗಂಡು ಹೆಣ್ಣಿಗೆ ಸಂಬಂಧಿಸಿದಂತೆ (ದಾಂಪತ್ಯಕ್ಕೆ) ಹುಟ್ಟಿಕೊಂಡ ಜನಪದರ ಪ್ರತಿಭಾ ಮೂಷೆಯಿಂದ ಸೃಷ್ಟಿಯಾದ ಆಶುಕವಿತೆಗಳಾಗಿ ಮನಸ್ಸಿಗೆ ಮುದ ನೀಡುತ್ತ ರಂಜಿಸುತ್ತಿವೆ. ರಸವತ್ತಾಗಿ ಇವುಗಳನ್ನು ವರ್ಗಿಸುವುದರಿಂದ ಸಿ.ಪಿ.ಕೆಯವರು ಬಿಡಿಸಿ ಹೇಳುವುದು ಎಂದಿದ್ದಾರೆ. ಒಡಪು ಶಬ್ದಕ್ಕೂ ಒಡರ್ಚು ಶಬ್ದಕ್ಕೂ ಹತ್ತಿರ ಸಂಬಂಧವಿದ್ದಂತೆ ಕಂಡರು ಒಡಪು ಎಂಬ ಪದ ಉತ್ತರ ಕರ್ನಾಟಕದಲ್ಲಿ ಪ್ರಚಲಿತವಿರುವ ಶಬ್ದ. ದಕ್ಷಿಣ ಭಾಗದಲ್ಲಿ "ಬೆಡಗು" ಎಂದು ಗುರುತಿಸುವರು. (ತೊಡಕು, ಅರ್ಥಮಾನ, ಹೆಸರ ಹೇಳಿಸೋದು ಎಂತಲು ಕರೆಯುತ್ತಾರೆ) [೧೦]

ಬೆಟಗೇರಿ ಕೃಷ್ಣ ಶರ್ಮರು ಮೊದಲು ಒಗಟಿಗು ಒಡಪಿಗೂ ಇರುವ ವ್ಯತ್ಯಾಸವನ್ನು ಗುರುತಿಸಿದವರು. ಗಂಡ-ಹೆಂಡತಿಯರು ತಮ್ಮ ಗಂಡನ ಅಥವಾ ಹೆಂಡತಿಯ ಹೆಸರುಗಳನ್ನು ಹೇಳುವಾಗ ಹೊಂದಿಸಿ ಹೇಳುವ ಚತುರೋಕ್ತಿಗಳು ಇದರಲ್ಲಿ ಪ್ರೀತಿ, ಸಲುಗೆಯ, ವಿನೋದ, ಚಾಟೋಕ್ತಿಯಿಂದ ಕೂಡಿರುವವು ಒಡಪು ಎಂದು ಕರೆದಿದ್ದಾರೆ. ಹೆಸರಿನ ಹಿಂದೆ ಜೋಡಿಸುವ ಮಾತಿನ ಮಾಲೆ-ಒಡಪು ಎಂದು ಡಾ.ಎಂ.ಎಂ. ಕಲಬುರ್ಗಿ ಹೇಳಿದರೆ, ಮಂಗಲ ಪ್ರಸಂಗಗಳಲ್ಲಿ ಮಾತ್ರ ಬಳಸಲ್ಪಡುವ ಸಮಸ್ಯಾತ್ಮಕ ರಹಿತವಾದ ಗೂಡಾತ್ಮಕವಲ್ಲದ ಕಾವ್ಯಾತ್ಮಕ ಗದ್ಯರೂಪಗಳು ಒಡಪುಗಳು ಎಂದು ಡಾ. ಇಮ್ರಾಪುರ ಹೇಳಿದ್ದಾರೆ.[೧೧] ವಿಶೇಷಣ ಹಚ್ಚಿ ಹೇಳುವುದು ಒಡಪುಗಳು ಎಂದು ಶಾಂತಕುಮಾರಿ ಪಾಟೀಲ ಹೇಳಿದರೆ ಒಡಪು - ಒಪ್ಪು ಇಟ್ಟು ಹೇಳುವುದು ಅಥವಾ ಅರ್ಥ ಹಚ್ಚಿ ಹೇಳುವುದು, ಈ ಸೃಷ್ಟಿಯಲ್ಲಿ ಚತುರೋಕ್ತಿ, ಸಲಿಗೆ, ಭಕ್ತಿ ಪ್ರೀತಿ, ಸವಿನುಡಿ, ಚಾಟೋಕ್ತಿ ವರ್ಣನೆಗಳನ್ನೊಳಗೊಂಡ ಚುಟುಕು ರತಿಭಾವ, ಪರಸ್ಪರ ಹಾಸ್ಯ ವಿಡಂಬನೆ, ಗಂಭೀರಗುಣ, ರಸಾತ್ಮಕ ಮತ್ತು ಧ್ವನಿ ಪೂರ್ಣವಾಗಿ ಕಟ್ಟಿಹೇಳುವುದಾಗಿದೆ.

ಒಡಪುಗಳಲ್ಲಿ ವಾಚ್ಯಾಂಶ, ಸರಸ ವರ್ಣನೆ, ಭಿನ್ನಾಣ ಜಾಸ್ತಿ. ಈ ಸಂಪ್ರದಾಯ ಕರ್ನಾಟಕದ ಎಲ್ಲಾ ಪ್ರಾಂತದಲ್ಲಿ ಸಾರ್ವತ್ರಿಕವಾಗಿ ರೂಢಿಯಲಿಲ್ಲದಿದ್ದರೂ ಅಲ್ಲಲ್ಲ ಹೆಸರು ಮಾಡಿರುವ ಈ ಒಡಪುಗಳು ಸಾಹಿತ್ಯವಾಗಿದ್ದು ಮಂಗಳ ಪ್ರಸಂಗಗಳ ಮೂಲಕ ಅಂದರೆ ಆರತಿ ಬೆಳಗುವಾಗ, ಮುತ್ತೈದೆಯರು ಗಂಡನ ಹೆಸರನ್ನು ನೇರವಾಗಿ ಹೇಳುವುದು ಸರ್ವೇ ಸಾಮಾನ್ಯವಾಗಿದೆ. ಅದರಂತೆ ಗಂಡುಮಕ್ಕಳೂ ಒಡಪು ಹಚ್ಚಿ ಹೆಂಡತಿ ಹೆಸರನ್ನು ಹೇಳಿ ಅಲ್ಲಿದ್ದ ಬಾಂಧವರಿಗೆಲ್ಲ ಖುಷಿಗೊಳಿಸುತ್ತ ಮನರಂಜಿಸುವುದು ಹೀಗೆ ಒಡಪುಗಳು ಮನರಂಜನೆಯ ಅದರಲ್ಲು ಮದುವೆಯ ಭಾಗವಾಗಿ ಮೆರೆದಿರುವುದನ್ನು ಕಾಣುತ್ತೇವೆ. ಒಟ್ಟಾರೆ ಈವರೆಗೆ ಒಡಪಿನ ಅಧ್ಯಯನ ಕಡಿಮೆ ಮಟ್ಟದಲ್ಲಿ ಆಗಿದ್ದು ಇನ್ನು ಈ ಕುರಿತ ಅಧ್ಯಯನಗಳು ಆಗಬೇಕಿದೆ. ಗಂಡು ಮತ್ತು ಹೆಣ್ಣಿನ ಒಡಪುಗಳು ಕೌಟುಂಬಿಕ ಪರಿಸರದಿಂದ ಉಗಮಗೊಂಡು ಅವುಗಳ ಸಂಬಂಧಗಳ ಹಿನ್ನೆಲೆಯಲ್ಲಿ ರೂಪಕಗಳೇ ಮುಖ್ಯವಾದವುಗಳು.

ಮದುವೆಯಿಂದ ಸತಿ-ಪತಿಗಳಾಗಿ ಕೈ ಹಿಡಿದಾಗ ಹೆಸರು ಕೇಳುವುದು ಹೇಳುವುದರಿಂದ ಆರಂಭಗೊಳ್ಳುವ ಒಡಪುಗಳು ಜೀವನದುದ್ದಕ್ಕೂ ವಿವಿಧ ಪ್ರಸಂಗಗಳಲ್ಲಿ ಮುಂದುವರಿಯುವುದು. ಮನುಷ್ಯ ತನ್ನ ಬದುಕಿನ ಸುತ್ತ ಹುಟ್ಟಿನಿಂದ ಸಾಯುವವರೆವಿಗೂ ಹಲವು ಮಂಗಲ ಪ್ರಸಂಗಗಳು ಒದಗಿ ಬರುತ್ತವೆ. ಆ ಸಂದರ್ಭಗಳಲ್ಲಿ ಗಂಡನ ಹೆಸರು ಹೇಳುವ ಕೇಳುವ ಪರಂಪರೆ ಅಂದಿನಿಂದಲೂ ಬೆಳೆದು ಬಂದಿದೆ. ಈ ಹಿನ್ನೆಲೆಯಲ್ಲಿ ಹಣತೆಯನ್ನು ಪ್ರಾಧಾನ್ಯತೆ ಇಟ್ಟುಕೊಂಡು ಒಡಪುಗಳನ್ನು ಕಟ್ಟಿರುವುದನ್ನು ನೋಡಬಹುದು.

ಒಡಪುಗಳು

೧. ಮಾತು ಜೋತಿಲಿಂಗ

ನಮ್ಮ ರಾಯರೂ............ ಹಾಂಗ

೨. ಎಡಕ್ಕ ಎಣ್ಣಿ ದೀವಿಗಿ

ಬಲಕ್ಕ ತುಪ್ಪದ ದೀವಿಗೆ

ಶಿಂಗಾರ ಮಾಣಿಮ್ಯಾಗ ಕುತ್ತ

ಶಿವಪೂಜೆ ಮಾಡಕೋತಾರ............

೩. ಎಡಕ್ಕ ಎಣ್ಣಿ ದೀವಿಗಿ, ಬಲಕ್ಕ ತುಪ್ಪದ ದೀವಿಗಿ

ಬಂಗಾರದ ಮಣಿಮ್ಯಾಗ ಕೂತ ಶಿವಪೂಜೆ ಮಾಡ್ತಾರ..........

೪. ಆರತಿ ಬೆಳಗತಾಳ ತಿರತಿರಗ್ಸಿ

ಹೆಸರ ಹೇಳ್ತಾಳ ಆಡಿಸ್ಯಾಡ್ಸಿ.............

೫. ದೇವ ದೇವದವರು, ದೇವಲೋಕದವರು

ಆರಮಂದಿ ಮುತ್ತೈದ್ಯಾರು, ಸೆರಗ ಹಿಡಿದು

ಹಡದ ತಾಯಿ 'ಪಡದ' ಕೊಡುವಾಗ

ಬರಮ ದೇವರು ಬಂದ, ಬ್ರಹ್ಮ ಗಂಟ ಹಾಕುವಾಗ

ಬಲಕ್ಕ ತುಪ್ಪದ ದೀವಿಗಿ, ಎಡಕ ಎಣ್ಣಿ ದೀವಿಗಿ

ಸದರ ಮ್ಯಾಲ ಕುತ್ತ, ನೆದರ ಹಚ್ಚತಾನ...............

೬. ಚೆಜ್ಜಿ ಬಿತ್ತ್ಯಾನ, ಚೆಲ್ಲಾಟ ಮಾಡತಾನ

ಭತ್ತಾ ಬಿತ್ತ್ಯಾನ, ಬರಾಟ ಮಾಡತಾನ

ದೀಪಾ ಆರಸತಾನ, ದಿಮಾಕ ಮಾಡತಾನ

ಹುಟ್ಟಿನಂತ ಹುಡಿಗಿನ ಕಂಡು, ಹುಡುಗಾಟ ಮಾಡ್ತಾನ...

೭. ರತನ ಕೆಚ್ಚಿದ ಗಾದ

ಮುತ್ತ ಕೆಚ್ಚಿದ ಲೋಪ

ಗಂಧದ ಎಣ್ಣೀ ದೀಪ

ಇಂತಾ ಗಂಡ ಸಿಗೋದು ಅಪರೂಪ...

೮. ಬಲಕ್ಕ ತುಪ್ಪದ ದೀವಿಗಿ

ಎಡಕ್ಕ ಎಣ್ಣಿ ದೀವಿಗಿ

ಸಿಂಗಾರ ಮಣಿಮ್ಯಾಲ ಕುಂತ ಶಿವ ಪೂಜೆ ಮಾಡ್ತಾನ

೯. ಕಬ್ಬಿನ ಹಿಡಿತವು ಸಿಹಿಗೋಸ್ಕರ

ದೀಪದ ಉರಿತವು ಬೆಳಕಿಗೋಸ್ಕರ

ಗಂಧ ಕರಗಿತು ಸುಗಂಧಗೋಸ್ಕರ

ನಾನು ಕರಗಿದೆ....................ರಿಗೋಸ್ಕರ

೧೦. ಕೊಲ್ಹಾಪುರ ಮಹಾಲಕ್ಷ್ಮಿ ಬಾಗಿಲಿಗೆ

ಇರುವುದು ತರತರದ ತೋರಣ

.....................ರ ಹೆಸರು ಹೇಳುವೆ

ಆರತಿ ಮಾಡಿದ ಕಾರಣ

೧೧. ಪಡಿ ಮ್ಯಾಲ ಪಡಿ ಬುಕ್ಕಿಟ ಪುಡಿ

ಕಂಚಿನ ಆರತಿ ಕಮಲದ ಹೂ

ಮಂಚದ ಮ್ಯಾಲ ಕುಂತ ಮಗನ ಆಡಸ್ತಾರ.

೧೨. ಸೀಗಿ ಹುಣ್ಣಿಮೆಯಲ್ಲಿ ಬೆಳುಗುವುದು ಮಣ್ಣಿನಾರತಿ

ಗೌರಿ ಹುಣ್ಣಿಮೆಯಲ್ಲಿ ಬೆಳಗುವುದು ಸಕ್ಕರಿ ಆರತಿ

ಸುಬಕಾರಣದಲ್ಲಿ ಬೆಳಗುವುದು ಪಂಚಾರತಿ

......................ರ ಹೆಸರು ಹೇಳಿ ಬೆಳಗುವೆ ಪ್ರೇಮದಾರತಿ

೧೩. ಹೊಲದಲ್ಲಿ ಬೆಳೆ ಚಂದ

ಮನೆಯಲ್ಲಿ ದೀಪ ಚಂದ

ಹಣೆಗೆ ಕುಂಕುಮ ಚಂದ

....................ರ ನನಗೆ ಚಂದವೋ ಚೆಂದ

೧೪. ಹೊಲದಾಗಿರುವುದು ಹತ್ತಿ

ಪಣತ್ಯಾಗ ಇರುವುದು ಬತ್ತಿ

ನಮ್ಮನ್ಯಾಗ ಇರೋದೊಂದು ಕತ್ತಿ

೧೫. ಹಳ್ಳದಲ್ಲಿರುವುದು ವರತಿ

ಒಬ್ಬರ ನಂತರ ಒಬ್ಬರಿಗೆ ಬರುವುದು ಸರತಿ

ನಾನು ....................ರಿಗೆ ಎತ್ತುವೆನು ಆರತಿ

೧೬. ವಸಂತ ಮಾಸದಲ್ಲಿ ನಲಿಯುವವರು ಕಾಮ-ರತಿ

........................ರಿಗೆ ಎತ್ತುವೆನು ಆರತಿ

೧೭. ತಂಗ ತಾಳಿಕೋಟೆ, ತರಳ ಬಾಗಲಕೋಟೆ, ಕಡಿ ಚಂದ್ರಗರಿ

ಒಂಟಿ ಮುತ್ತ, ಕಂಟಿಸರ

ಹತ್ತ ಮುತ್ತ, ಹೂವ್ವಿನ ಸರ

೧೮. ಬಂಗಾರದ ಶಿವದಾರ, ಬೆಳ್ಳಿ ನಿಂಗದ ಕಾಯಿ

ಸೀತಾಳ ಗಿಂಡಿ, ಈಬತ್ತಿ ಉಂಡಿ

ಬಲಕ್ಕ ತುಪ್ಪದ ದೀವಿಗಿ

ಎಡಕ್ಕ ಎಣ್ಣಿ ದೀವಿಗಿ

ಪರಿಪರಿಯಿಂದ ಪತ್ರಿ ಏರಸತಾನ

ಹತ್ತೂ ಬಳ್ಳಿ ಹಚ್ಚಿ ಶರಣ ಮಾಡತಾನ

೧೯. ದಿಗಂಬರಿ ನನ್ನ ಹ್ಯಾಣತಿ ಕೈಯಾಗ

ದೀಪಾ ಕೊಟ್ಟರ

ದಿಬ್ಬದ ಮ್ಯಾಲ ಇಟ್ಟ

ಹೋತ ಅಂತಾಳ

೨೦. ಸಕಲ ಸಾರತಿ ಶಿವ ಪಾರ್ವತಿ

ನಮ್ಮಪ್ಪರು ಕೊಟ್ಟದ್ದು ಕನ್ಯಾದಾರತಿ

ನಾವು ಮಾಡೋದು ಮಂಗಳಾರತಿ

೨೧. ಆರ ತಟ್ಟಿ ಹೂ, ಮೂರ ತಟ್ಟಿ ಪತ್ರಿ

ಸಿಂಗಾರದ ಮಣಿ ಮೇಲೆ ಕೂತ್ಕೊಂಡು

ಪ್ರಣತಿ ಪೂಜಿಸ್ತಾರ

ಈ ಜಗತ್ತಿನ ಎಲ್ಲಾ ಜೀವಿಗಳ ಬದುಕಿಗಿಂತ ಮನುಷ್ಯನ ಬದುಕು ತುಂಬಾ ಸಂಕೀರ್ಣವಾದದ್ದು. ಅವನ ಏಳು ಬೀಳಿನ ದಾರಿಯಲ್ಲಿ ಹೋರಾಟದ ಬುದ್ಧಿ ಭಾವಗಳೊಂದಿಗೆ ಸೆಣಸುತ್ತಲೆ ಬದುಕಿನ ಅಂತ್ಯ ಕಾಣುತ್ತಾನೆ. ಜನಪದರು ಇಂಥ ಬದುಕನ್ನು ಬಂದ ಹಾಗೆ ಸ್ವೀಕರಿಸಿದವರು. ಹಾಗಾಗಿಯೇ ಅನುಭವಿಸುವ ಎಲ್ಲ ಹಂತಗಳನ್ನು ಸಂತೋಷದಿಂದಲೇ ಸ್ವೀಕರಿಸಿದವರು. ಅವರಿಗೆ ಜೀವನವೆಂದರೆ ಒಲವಿನ ಸಾಕ್ಷಾತ್ಕಾರ, ಪ್ರೀತಿಯನ್ನು ಜ್ಯೋತಿಯಾಗಿ ಬೆಳಗಿಸಿದವರು. ಬದುಕಿನ ಸಾರ್ಥಕತೆ ಇರುವುದು ಒಲವಿನ ಶ್ರೀಮಂತಿಕೆಯಲ್ಲಿ ಎಂಬುದು ಅವರ ನಂಬಿಕೆ. ಅದರಂತೆ ಮದುವೆಯ ಬಂಧವು ಮಧುರ ಮೈತ್ರಿಯಾದದ್ದು. ಈ ಮೈತ್ರಿ ಅನುರಾಗದಿಂದ ಹುಟ್ಟಿದ್ದು. ಜನಪದರಲ್ಲಿ ಮದುವೆಯ ಸಂಭ್ರಮವೆ ಒಂದು ವಿಶಿಷ್ಟವಾದ ಮನರಂಜನೆ. ಇವತ್ತಿನ ದಿನಗಳ ಹಾಗೆ ಕೇವಲ ೨ ದಿನಗಳಲ್ಲಿ ಮುಗಿಯುವಂಥ ಶಾಸ್ತ್ರವಲ್ಲ. ಅವರಲ್ಲಿ ಕನಿಷ್ಟ ಪಕ್ಷ ಎಂಟು -ಹತ್ತು ದಿನಗಳ ಕಾರ್ಯ. ಅವರ ದೃಷ್ಟಿಯಲ್ಲಿ ಮದುವೆ ಎಂದರೆ,

''ಗಂಡು ಹೆಣ್ಣು, ಜೀವನ ರಥದ ಎರಡು ಗಾಲಿಗಳು, ಮದುವೆ, ಇವೆರಡನ್ನೂ ಜೋಡಿಮಾಡಿ ಜೀವನದ ರಥವನ್ನು ಒಟ್ಟಿಗೆ ಎಳೆಯುವಂತೆ ಮಾಡುತ್ತದೆ. ನಿಸರ್ಗ ದತ್ತವಾದ ಪ್ರೇಮ ಇವರ ಮೈಮನಗಳನ್ನು ತುಂಬಿ

ಪರಸ್ಪರರನ್ನು ಆಕರ್ಷಿಸುವುದು. ಹಾಗಾಗಿ ಈ ಬಂಧ ಹಾಗೆ ಆರಂಭವಾಗುವಂತದಲ್ಲ. ಅಲ್ಲಿ ಭಾವಗಳು ಕಾರ್ಯ ಕಾರಿ ಸಂಬಂಧವಾಗಿರುತ್ತವೆ. ಹಾಗಾಗಿಯೇ ಮದುವೆ ಸಂಭ್ರಮವನ್ನು ಅಷ್ಟು ಅದ್ದೂರಿಯಾಗಿ ಅರ್ಥಪೂರ್ಣವಾಗಿ ಆಚರಿಸುವರು. ಈ ಆಚರಣೆಯಲ್ಲಿ ಒಡಪು ಹೇಳುವ ಸಂಪ್ರದಾಯವಿದ್ದು. ಇದನ್ನು ಸಂದರ್ಭಕ್ಕನುಸಾರಿಯಾಗಿ ದಂಪತಿಗಳ ಹೆಸರು ಹೇಳಿಸುವ ಸಂಪ್ರದಾಯವಿದೆ.''[೨]

ಈ ಸಂಪ್ರದಾಯವು ಮದುವೆಯ ಒಂದು ಭಾಗವಾಗಿದ್ದು. ಮದುವೆಯಂತಹ ಮಂಗಲ ಪ್ರಸಂಗ ಜೀವನದಲ್ಲಿ ಮತ್ತೊಂದಿಲ್ಲ. ಇಲ್ಲಿ ಮನರಂಜನೆಗಾಗಿಯೇ ದೊರಕುವ ಸದಾವಕಾಶಗಳು ಮತ್ತೆಲ್ಲೂ ಸಿಕ್ಕುವುದಿಲ್ಲ. ಒರಳು ಕಲ್ಲಿನ ಪೂಜೆಯಿಂದ ಆರಂಭವಾಗಿ ಸೋಭಾನೆ ಶಾಸ್ತ್ರ ಮುಗಿಯುವವರೆಗೂ ಜರುಗುವ ಬಹುದೊಡ್ಡ ದೀರ್ಘ ಸಂಭ್ರಮ. ಈ ಸಂದರ್ಭದಲ್ಲಿ ಗಂಡು ಒಪ್ಪಿಟ್ಟು ಹೇಳುವುದು ಅಥವಾ ಅರ್ಥ ಹಚ್ಚಿ ಹೇಳುವುದಾಗಿದೆ. ಚತುರೋಕ್ತಿಯೊಳಗೆ ಸಲಿಗೆ ಭಕ್ತಿ, ಪ್ರೀತಿ, ಪ್ರೇಮ, ಪ್ರಣಯ, ಸವಿ ನುಡಿ, ಚಾಟೋಕ್ತಿ ವರ್ಣನೆಗಳನ್ನೊಳಗೊಂಡ ಚುಟುಕುಗಳಾಗಿದ್ದು ಅದರೊಳಗೆ ರತಿ ಭಾವ, ಪರಸ್ಪರ ಹಾಸ್ಯ ವಿಡಂಬನೆ, ವಿನೋದ, ಗಂಭೀರ ಗುಣ, ರಸಾತ್ಮವಾದ ಧ್ವನಿ ಪೂರ್ಣವಾಗಿ ಕಟ್ಟಿಹೇಳುವುದನ್ನು ಒಡಪು ಎಂದು ಕರೆಯುವರು.

ಈ ಹಿನ್ನೆಲೆಯಲ್ಲಿ ಹಣತೆಯನ್ನು ಕೇಂದ್ರವಾಗಿಟ್ಟು ನಮ್ಮ ಮದುಮಗಳು (ಗರತಿ) ತನ್ನ ಗಂಡನನ್ನು ವರ್ಣಿಸುತ್ತ ಅವರು ದೇವ ದೇವರು, ದೇವಲೋಕದಿಂದ ತನಗಾಗಿ ಬಂದವರು, ಇಂಥವರನ್ನು ನಾಲ್ಕು ಮಂದಿ ಮದುಮಗಳ ಗೆಳತಿಯರು ಆಕೆಯ ಸೆರಗ ಹಿಡಿದು, ಹಡೆದ ತಾಯಿ ಪಡೆದುಕೊಡುವಾಗ ಬರಮ ದೇವರು (ಅಂದರೆ ಬ್ರಹ್ಮ ದೇವರು) ಬಂದು ಬ್ರಹ್ಮ ಗಂಟು ಹಾಕುವಾಗ ತುಪ್ಪದ ದೀಪ ಮತ್ತು ಎಣ್ಣೆ ದೀಪಗಳನ್ನು ಸಾಕ್ಷಿಗಿರಿಸಿ ಹಸೆಮಣೆ ಮೇಲೆ ಕೂತು ನೆದರ (ಕಾಡಿಗೆ) ಹಚ್ಚುತ್ತಾನೆ ಎಂದು ಹೆಳುತ್ತಾಳೆ.

ಮುಂದಿನ ಒಡಪಿನಲ್ಲಿ ಪ್ರಣಯವನ್ನು ಆಧರಿಸಿ ರಚಿಸಿದ ಗರತಿಯೊಬ್ಬಳು ತನ್ನ ಮೊದಲ ರಾತ್ರಿಯಲ್ಲಿ ಆದ ಅನುಭವವನ್ನು ವಿವರಿಸುತ್ತಾಳೆ. ಭತ್ತ ಬಿತ್ತುವುದು, ಸಜ್ಜೆ ಬಿತ್ತುವುದು ಪ್ರಣಯದ ಸಂಕೇತವಾದರೂ ಫಲವಂತಿಕೆಯನ್ನು ಆಧರಿಸುವಂಥದಾಗಿದೆ. ಈ 'ಫಲ' ಎನ್ನುವ ವಿಶೇಷಣವು ಪ್ರಣಯವನ್ನು ಅಥವಾ ಗರ್ಭಧರಿಸುವುದನ್ನು ಹೇಳುವಂಥದಾಗಿದೆ. ತನ್ನ ಇನಿಯ ಯಾವ ವಿಧವಾಗಿ ಕಾಡುತ್ತಾನೆ ಎಂದು ಅನಾವರಣಮಾಡಿದ್ದಾಳೆ.

ಮತ್ತೊಬ್ಬ ಗರತಿ ತನ್ನ ಗಂಡನನ್ನು ಪ್ರೇಮದಾರತಿಯಿಂದ ಅರ್ಚಿಸಿ ಬೆಳಗಿಸುತ್ತೀನಿ ಎನ್ನುತ್ತಾಳೆ. ಆಕೆ ತನ್ನ ಪ್ರೇಮಕ್ಕೆ ಕೊಡುವ ಉಪಮೇಯಗಳೆಂದರೆ ಸೀಗಿ ಹುಣ್ಣಿಮೆಯಲ್ಲಿ ಅಂದರೆ ಆ ದಿನ ಬೆಳಗುವುದು ಮಣ್ಣಿನ ಆರತಿ, ಮದುವೆಯಾದ ಹೆಣ್ಣುಮಕ್ಕಳಿಗೆ ಗೌರಿ ಹಬ್ಬ ಬಲುಶ್ರೇಷ್ಠ ಆ ದಿನ ಸಕ್ಕರೆಯಿಂದ ಆರತಿ ಸಿದ್ಧಮಾಡಿ ಬೆಳಗುತ್ತಾರೆ. ಹಾಗೆ ಜೀವನದಲ್ಲಿ ಜರುಗುವ ಎಲ್ಲ ಶುಭ ಕಾರ್ಯಗಳಿಗೆ ಬೆಳುಗುವುದು ಪಂಚಾರತಿ ಇವುಗಳನ್ನು ಹೇಳಿಕೊಳ್ಳುತ್ತ ತನ್ನ ಪತಿರಾಯನಿಗೆ ಪ್ರೇಮ ಪೂಜೆಮಾಡುತ್ತ ಪ್ರೇಮದ ಆರತಿ ಎತ್ತುತ್ತಾಳಂತೆ. ನಿಜವಾಗಿಯು ಆಕೆಯ ಈ ಮುಗ್ಧ ಭಾವಕ್ಕೆ ಒಂದು ಬಗೆಯ ಹ್ಯಾಟ್ಸ್ ಆಫ್ ಅನ್ನಬೇಕು ಎನ್ನಿಸುತ್ತದೆ. ಪ್ರೀತಿ ಅರಳುವುದು ಮುಗ್ಧತೆಯ ಒಲವಿಗೆ ಕೋಮಲವಾದ ಭಾವಗಳಿಗೆ ಇಂಥ ಒಂದು ಕಲ್ಪನೆ ನಮ್ಮ ಜನಪದರಲ್ಲಿ ಅಲ್ಲದೆ ಬೇರೆಲ್ಲೂ

ಸಿಕ್ಕಲಾರದು. ಹಾಗಾಗಿಯೇ ಆಕೆಗೆ ಪತಿಯೇ ಪರಮದೈವ, ಬ್ರಹ್ಮ, ದೇವರು ಅವನ ಮನೆ ದೇವಲೋಕ ಎಂದು ತುಂಬು ಭಾವದಿಂದ ಹೇಳುತ್ತಾಳೆ.

ಜನಪದ ಗರತಿಯರಲ್ಲಿ ತುಂಬು ಪ್ರೀತಿ, ಪ್ರೇಮ, ಪ್ರಣಯ, ತ್ಯಾಗದ ಮನಸ್ಸಿನಿಂದ ಬದುಕಿದವರು ಹರಸಿ ಆಶೀರ್ವಧಿಸಿದವರು. ತನ್ನ ಗಂಡನ ಮಾತು ಜ್ಯೋತಿ ಲಿಂಗದಂತೆ ಅಂತೆ ಎಷ್ಟು ಆಧ್ಯಾತ್ಮಿಕ ಕಲ್ಪನೆಯಿಂದ ಕೂಡಿದೆ. "ಜ್ಯೋತಿಲಿಂಗ" ಮಾತು ಮಾಣಿಕ್ಯ, ಮಾತೆ ಮೃತ್ಯು, ಮಾತು ಬೆಳ್ಳಿ ಅಂತ ಹೇಳುವ ಹೊತ್ತಿಗೆ ಅದೇ ಮಾತು ಜ್ಯೋತಿರ್ಲಿಂಗವಾಗಿ ಪ್ರಜ್ವಲಿಸುತ್ತದೆ. ಜನಪದರಲಿ ಮಾತು ಕೇವಲ ಭಾಷೆಯಲ್ಲ ಅದೊಂದು ಭಾವ. ಸತ್ಯದ ಸಂಕೇತ, ಅಂದರೆ 'ವಚನ' ಒಂದರ್ಥದ ಭಾಷೆಯಿದ್ದ ಹಾಗೆ ಆ ಮಾತಿನಲ್ಲಿ ನೇರವಂತಿಕೆ, ಹೃದಯವಂತಿಕೆ, ಅನುಭವಂತಿಗೆ, ಅನುಭಾವ ಶ್ರೀಮಂತಿಕೆಯಿಂದ ತುಂಬಿಕೊಂಡಿರುವ ಮಾತು. ಹಾಗಾಗಿಯೇ ಅದು ಜ್ಯೋತಿರ್ಲಿಂಗ ಎನ್ನುವ ಆಧ್ಯಾತ್ಮಿಕ ತತ್ವದ ಕಲ್ಪನೆಯಲ್ಲಿ ಅದ್ಭುತವಾಗಿ ಅರಳಿದೆ. ಈ ಕಲ್ಪನೆ ಕುಟುಂಬದೊಳಗೆ ಕಟ್ಟಲು ಹೇಗೆ ಸಾಧ್ಯವಾಯಿತು? ಎನ್ನುವುದೇ ಪ್ರಶ್ನೆ. ಯಾಕೆಂದರೆ ಅವರಿಗೆ ಈ ಪರಿಭಾಷೆಗಳ ಪರಿಚಯವಿಲ್ಲ. ತನಗನ್ನಿಸಿದನ್ನು ಹೇಳಿ ಇದನ್ನೇ ಸತ್ಯ ಎಂದು ತಿಳಿದವರು.

ಮನುಷ್ಯನ ಮನಸ್ಸು ನಿತ್ಯ ಹರಿಯುವ ನದಿ. ಅದರಲ್ಲಿ ಹೊಸತನಗಳು ಹೊನಲಾಗಿ ಹರಿಯುತ್ತಿರಬೇಕು. ಹಾಗಾಗಿ ಮತ್ತೊಬ್ಬ ಗರತಿಗೆ ತನ್ನ ಪತಿಯು ಸದಾ ಜೊತೆಯಲ್ಲಿರಬೇಕಂತೆ. ಅದಕ್ಕೆ ಆಕೆ ಕೊಡುವ ಉಪಮೇಯವೆಂದರೆ ಹೊಲದಲ್ಲಿ ಹತ್ತಿಯನ್ನು ಬೆಳೆದರೆ ಮಾತ್ರ ಚಂದ, ನೋಡಲು ಅದು ಅಂದ. ಅದನ್ನು ಮನೆಯಲ್ಲಿ ಬೆಳೆಯಲು ಸಾಧ್ಯವಾಗದು. ಒಂದು ಮನೆಯಲ್ಲಿ ದೀಪ ನಿತ್ಯವು ಬೆಳಗುತ್ತಿದ್ದರೆ ಚಂದ. ಹೆಣ್ಣಿಗೆ ಕುಂಕುಮವೇ ಚಂದ. ಕುಂಕುಮ ಶಕ್ತಿಯ ಸಂಕೇತ. ಒಂದು ಶಕ್ತಿ ಜೊತೆ ಮತ್ತೊಂದು ಶಕ್ತಿ ಸೇರಿದರೆ ವಿಶಿಷ್ಟ ಶಕ್ತಿಯಾಗುವಂತೆ, ಆ ವಿಶಿಷ್ಟ ಶಕ್ತಿಯಿಂದ ಸೌಂದರ್ಯಕ್ಕೆ ಕಳೆ ಬರುತ್ತದೆ. ಈ ಶಕ್ತಿ ಜೊತೆಗೆ ಎನ್ನ ಪತಿರಾಯ ಸದಾ ಜೊತೆಯಲ್ಲಿದ್ದರೆ ಮನಸ್ಸಿಗೂ ನೆಮ್ಮದಿ ಎಂದು ಹೇಳುತ್ತಾಳೆ.

ಹೀಗೆ ಪತಿ-ಪತ್ನಿ ಸಂಬಂಧದಲ್ಲಿ 'ಪ್ರೀತಿ' ಅಥವಾ 'ಒಲವು' ಕೊಡುವ ಸಾಮಗ್ರಿಯೇ ಹೊರತು, ಕೇಳಿ ಪಡೆಯುವ ಸಾಮಗ್ರಿಯಾಗಬಾರದು. ಕೊಡುವುದರಲ್ಲಿ ಇರುವಷ್ಟು ನೆಮ್ಮದಿ ಬೇರೆಲ್ಲಿ ಸಿಗದು. ಹಾಗಾಗಿಯೇ ಜನಪದರಲ್ಲಿ 'ವಿವಾಹ'ದ ಮಂಗಲ ಪ್ರಸಂಗ ಶ್ರೇಷ್ಠತೆಯಿಂದ ಕೂಡಿರುವಂಥದ್ದು. ಮದುವೆಯಂದು ಸತಿ-ಪತಿಗಳಾಗಿ ಕೈ ಹಿಡಿದಾಗ ಹೆಸರು ಕೇಳುವುದು, ಹೇಳುವುದು ಅಲ್ಲಿಂದ ಆರಂಭವಾಗಿ ತಮ್ಮ ಮುಂದಿನ ಜೀವನದುದ್ದಕ್ಕೂ ವಿವಿಧ ಪ್ರಸಂಗಗಳಲ್ಲಿ ಈ ಕ್ರಿಯೆ ಮುಂದುವರಿಯುವುದು. ಬದುಕಿನಲ್ಲಿ ಅನೇಕ ಶುಭ ಕಾರ್ಯಕ್ರಮಗಳನ್ನು ಮನುಷ್ಯ ಆಚರಿಸುತ್ತಾನೆ. ಈ ಎಲ್ಲ ಮಂಗಲ ಕಾರ್ಯಗಳಲ್ಲಿ ಒಂದು ಭಾಗವಾಗಿರುವಂತೆ ಒಡಪುಗಳೊಂದಿಗೆ ಗಂಡ-ಹೆಂಡಿರ ಹೆಸರು ಹೇಳುವ ಪರಂಪರೆ ಬೆಳೆದು ಬಂದಿದೆ.

ಇತ್ತೀಚಿನ ದಿನಗಳಲ್ಲಿ ಮದುವೆಯ ವಿಧಿ-ವಿಧಾನಗಳು ಸಂಕ್ಷಿಪ್ತವಾಗತೊಡಗಿವೆ. ಇದರಿಂದಾಗಿ ಒಡಪು ಹೇಳುವ ಬಗೆ ಕಡಿಮೆಯಾಗುತ್ತಲಿದೆ. ಹಳ್ಳಿಯಲ್ಲಿ ಕೆಲವು ಭಾಗಗಳಲ್ಲಿ ಜನಜನಿತವಾಗಿರುವ ಈ ಮನರಂಜನೆ ಉತ್ತರ ಕರ್ನಾಟಕ ಭಾಗದಲ್ಲಿ ಪ್ರಸಿದ್ಧವಾಗಿದೆ. ಹೀಗೆ ಒಡಪು ಹೇಳುವ ಕೇಳುವ ಪರಿ ಜನಪದರ ಮನರಂಜನೆಯ ಭಾವವಾಗಿ ಬೆಳೆದಿದೆ. ಈ ಪರಿ ಉಳಿಸಿಕೊಳ್ಳುವ ತುರ್ತು ನಮಗಿಂದಿದೆ.

**ಅಡಿಟಿಪ್ಪಣಿ**

೧. (ಸಂ) ಹಲಸಂಗೀ ಸೋದರರು ಗರತಿ ಹಾಡುಗಳು - (ಮುನ್ನುಡಿ ಬೇಂದ್ರೆ) ಪುಟ

೨. ದೇ.ಜ.ಗೌ, ಜಾನಪದ ಅಧ್ಯಯನ, 'ಜನಪದ ಗೀತೆಗಳು', ಪುಟ - ೨೧

೩. (ಸಂ) ಡಾ. ಬಿ.ವಿ. ವಂಸತಕುಮಾರ್, 'ಒಲುಮೆಯ ಕುಲುಮೆಯಲ್ಲಿ' , ಪುಟ - ೧೯,೨೦.

೪. ದೇ.ಜ.ಗೌ, ಜಾನಪದ ಅಧ್ಯಯನ, 'ಕಥೆಗಳು', ಪುಟ - ೯೦

೫. ದೇ.ಜ.ಗೌ, ಜಾನಪದ ಅಧ್ಯಯನ, 'ಒಗಟುಗಳು'.

೬. (ಪ್ರ ಸಂ) ಡಾ ತೀ.ನಂ. ಶಂಕರನಾರಾಯಣ (ಸಂ) ಬ. ನಲ್ಲಿಸರ ಕುಮಾರ ಸ್ವಾಮಿ (ಚಲ್ಯ) 'ಜನಪದ ಸಾಹಿತ್ಯ' ಪುಟ - ೧೦೮,೧೨೬

೭. ಡಾ ವೀರಣ್ಣ ದಂಡೆ - 'ದೇಶಿ' (ಸಂಪುಟ ೨) ಒಗಟುಗಳು - ಪುಟ - ೭೮

೮. ಜ್ಯೋತಿ ಹೊಸೂರು 'ಹೆಸರ ಹೇಳ್ತಿನಿ ಒಡಪ ಕಟ್ಟಿ' - ಪುಟ - ೧ ರಿಂದ ೨೪

೯. ಜ್ಯೋತಿ ಹೊಸೂರು 'ಹೆಸರ ಹೇಳ್ತಿನಿ ಒಡಪ ಕಟ್ಟಿ' - ಪುಟ - ೧ ರಿಂದ ೨೪

೧೦. ಜ್ಯೋತಿ ಹೊಸೂರು 'ಹೆಸರ ಹೇಳ್ತಿನಿ ಒಡಪ ಕಟ್ಟಿ' - ಪುಟ - ೧ ರಿಂದ ೨೪

೧೧. ಜ್ಯೋತಿ ಹೊಸೂರು 'ಹೆಸರ ಹೇಳ್ತಿನಿ ಒಡಪ ಕಟ್ಟಿ' - ಪುಟ - ೧ ರಿಂದ ೨೪

೧೨. ಜ್ಯೋತಿ ಹೊಸೂರು 'ಹೆಸರ ಹೇಳ್ತಿನಿ ಒಡಪ ಕಟ್ಟಿ' - ಪುಟ - ೧ ರಿಂದ ೨೪

೧೩. ಗೀತೆ, ಕಥೆ, ಗಾದೆ, ಒಗಟು ಒಡಪುಗಳ ಸಂಗ್ರಹ.



ಅಧ್ಯಾಯ-೪

## ಹಣತೆ ಮತ್ತು ಜನಪದರು

ಪ್ರಕೃತಿ ಮತ್ತು ಮನುಷ್ಯರ ನಡುವೆ ಅನುಸಾಂಧನ ಏರ್ಪಟ್ಟ ಕೂಡಲೇ ಸಂಸ್ಕೃತಿಗೆ ಒಂದು ಅರ್ಥಸಿಗುತ್ತದೆ. ಬಹುಶಃ ಈ ಮಾತು ಸತ್ಯವಿರಬಹುದು. ಏಕೆಂದರೆ ಒಂದು ವಸ್ತುವನ್ನು ಅದರ ಮೂಲಭೂತ ಗುಣದಿಂದ ಬೇರ್ಪಡಿಸಿ ಸಾಪೇಕ್ಷವಾಗಿ ನೋಡುವುದನ್ನು ಚರಿತ್ರೆಯು ಬಯಸುತ್ತದೆಯಂತೆ.

ಜನಪದರ ಜೀವನ ಪ್ರಕೃತಿಯೊಂದಿಗೆ ಅಂಟಿಕೊಂಡೇ ಸಾಗುವಂಥದ್ದು. ಅವರು ತಾವು ಮತ್ತು ನಿಸರ್ಗ ಎರಡು ಬೇರೆ ಬೇರೆ ಅಲ್ಲ ಎಂಬ ಭಾವನೆಯೊಂದಿಗೆ ಬದುಕುತ್ತಾರೆ. ಕೆಲವೊಮ್ಮೆ ಎಷ್ಟೇ ಉದ್ವೇಗಕ್ಕೆ ಒಳಗಾದರೂ, ವಾಸ್ತವ ಸತ್ಯಗಳನ್ನು ಅಷ್ಟೇ ಆಳವಾಗಿ ಅರಿತವರು. ಹಾಗಾಗಿಯೇ ಭೂಮಿ, ಗಾಳಿ, ನೀರು, ಬೆಂಕಿ ಮತ್ತು ಆಕಾಶದ ಜೊತೆ ಅನನ್ಯವಾದ ಸಂಬಂಧವನ್ನು ಪಡೆದು ಕೊಂಡಿದ್ದಾರೆ. ಕೆ.ವೈ. ನಾರಾಯಣ ಸ್ವಾಮಿಯವರು ಗುರುತಿಸುವ ಹಾಗೆ ''ನಮ್ಮ ಜನಪದ ಸಂಸ್ಕೃತಿಯಲ್ಲಿ ಜೀವನ ದರ್ಶನಗಳಲ್ಲಿ, ಆಚಾರ-ವಿಚಾರಗಳಲ್ಲಿ ''ಪಂಚ ಭೂತಗಳ ಪರಿಕಲ್ಪನೆ ಇಲ್ಲವೆಂದು ಹೇಳಬಹುದು. ಇವರ ನುಡಿಗಟ್ಟಿನಲ್ಲಿ ಇದಕ್ಕೆ ಸಂವಾದಿಯಾದ ಪದ ರಚನೆಗೊಂಡಿಲ್ಲದಿರುವುದು ಬಳಕೆಯಲ್ಲಿ ಇಲ್ಲದಿರುವುದು ಈ ಊಹೆಗೆ ಪ್ರಮುಖ ಸಾಕ್ಷಿಯಾಗಿದೆ, ಎನ್ನುತ್ತಾರೆ.[೧]

ಇವರೆ ಹೇಳುವ ಹಾಗೆ, ಜನಪದ ಪರಂಪರೆಯಲ್ಲಿ ಪಂಚಭೂತಗಳನ್ನು ಕುರಿತ ತಾರ್ಕಿಕ ಚಿಂತನೆಗಳು ದಾಖಲಾಗಿಲ್ಲ. ಇದರ ಅರ್ಥ ಅವರು ಭೂಮಿ, ನೀರು, ಗಾಳಿ, ಬೆಂಕಿ ಮತ್ತು ಆಕಾಶಗಳ ಅಸ್ತಿತ್ವ, ಉಪಯುಕ್ತತೆ ಸ್ವರೂಪ ಹಾಗೂ ವರ್ತನೆಗಳ ಬಗ್ಗೆ ಪರಿಜ್ಞಾನವಿಲ್ಲದವರು ಎಂದಲ್ಲ. ಪಂಚಭೂತಗಳ ಕುರಿತ ಆಲೋಚನೆಗಳು, ಗ್ರಹಿಕೆಗಳು ಬಿಡಿ ಬಿಡಿಯಾಗಿಯೇ ರೂಪಗೊಂಡಿವೆ, ಎಂದಿದ್ದಾರೆ.[೨]

ಜಾನಪದ ಪರಂಪರೆಯು ಶಿಷ್ಟ ಪರಂಪರೆಗಿಂತ ವಿಶಿಷ್ಟವಾಗಿ ಗುರುತಿಸಿಕೊಂಡಿದೆ. ಜನಪದರಲ್ಲಿ ಅಗ್ನಿಯು ಜ್ಯೋತ್ಯಮ್ಮಳಾಗಿ ರೂಪ ಪಡೆದಿದ್ದಾಳೆ. ಅಂದರೆ ಸ್ತ್ರೀ ಪ್ರಧಾನ ನೆಲೆಯಲ್ಲಿ ಗುರುತಿಸುವ ಜನಪದರು ಅಗ್ನಿ ಮಾತ್ರವಲ್ಲ, ಭೂಮಿ, ನೀರು, ಗಾಳಿ ಮತ್ತು ಆಕಾಶವೆಲ್ಲವೂ ಹೆಣ್ಣಾಗಿ ಪರಿವರ್ತನೆಗೊಂಡಿದೆ. ಜನಪದರು ಸ್ತ್ರೀ

ಹಿನ್ನೆಲೆಯಲ್ಲಿ ನೋಡಿದರೆ, ಶಿಷ್ಟ ಪರಂಪರೆಯೊಳಗೆ ಪುರುಷ ಪ್ರಧಾನದ ನೆಲೆಯಲ್ಲಿ ಪಂಚಭೂತಗಳ ಪರಿಕಲ್ಪನೆಯೂ ಸಂಸ್ಕೃತಿಯ ಒಂದು ಭಾಗವಾಗಿದೆ. ''ಶಿಷ್ಟರು ಅಗ್ನಿಯ ಆರಾಧಕರಾಗಿದ್ದರೂ ಈ ಪರಿಕಲ್ಪನೆಯ ಸೃಷ್ಟಿಗೆ ಕಾರಣನಾದವನು ಪುರುಷ ಎಂದು ನಂಬಿದೆ''. ಇದನ್ನು ಮಂಡಕೋಪನಿಷತ್ತಿನಲ್ಲಿ ವಿವರಿಸಲಾಗಿದೆ. ಎಂದು ಕೆ.ವೈ.ಎನ್. ಅವರು ಗುರುತಿಸುತ್ತಾರೆ.[೩]

ಜನಪದರು ಪಂಚಭೂತಗಳೊಡನೆ ಬೆಸೆದು ಕೊಂಡುರಿವುದು ಏಕ ಮುಖಿಯಾದ ಸಂಬಂಧವಲ್ಲ. ಅದು ಬಹುಮುಖಿಯಾದದ್ದು. ಅತ್ಯಂತ ಸಂಕೀರ್ಣವಾದವುಗಳು. ನಿಸರ್ಗದೊಟ್ಟಿಗೆ ಅವರಲ್ಲಿರುವ ನಡವಳಿಕೆ, ಅಕ್ಕರೆ, ಸಲಿಗೆ, ಭಯ, ಆರಾಧನೆ ಮತ್ತು ನಿರೀಕ್ಷೆಗಳು ಮುಖ್ಯವಾದವುಗಳು. ಪ್ರಕೃತಿಯಿಂದಲೇ ಜನಪದರ ಬದುಕು, ಕಲೆ, ಚಿಂತನೆಗಳು ಉಗಮಗೊಂಡಿರುವುದು. ಹಾಗಾಗಿ ಅವರು ಪ್ರಕೃತಿಯನ್ನು ''ನಿಸರ್ಗ ಮಾತೆ'' ಎಂದು ಆರಾಧಿಸುತ್ತಾರೆ. ಈ ಹಿನ್ನೆಲೆಯಲ್ಲಿ ಜನಪದರ ಸಂಸ್ಕೃತಿ ಅನ್ವೇಷಣೆ ಪ್ರಕೃತಿ ನಡುವೆ ಏರ್ಪಡುವ ಎಲ್ಲಾ ಬಗೆಯ ವಿನ್ಯಾಸಗಳನ್ನು ಈ ಅಧ್ಯಯನಕ್ಕೆ ಆಕಾರಗಳಾಗಿ ಬಳಸಿಕೊಳ್ಳುವ ಪ್ರಯತ್ನ ಮಾಡಲಾಗಿದೆ.

**ಜನಪದರಲ್ಲಿ ಹಣತೆ**

ಜನಪದರ ನಂಬಿಕೆಗಳು, ಸಂಪ್ರದಾಯಗಳು ಆಚಾರ-ವಿಚಾರಗಳಲ್ಲಿ ಹಣತೆಯ ಬಗೆಗೆ ವಿಶಿಷ್ಟವಾದ ರೂಪ ಪಡೆದುಕೊಂಡು ಅವರ ಬದುಕಿನಲ್ಲಿ ಹಾಸುಹೊಕ್ಕಾಗಿದೆ. ಹುಟ್ಟಿನಿಂದ ಸಾವಿನವರೆಗೂ ಮೂಲವಾಗಿ ಬೆಂಕಿ, ಅಗ್ನಿ, ಕಿಚ್ಚು, ಕೆಂಡ, ಕೊಳ್ಳಿ, ಕಿಡಿ, ಉರಿ, ಧಗೆ, ಸೂರ್ಯ, ಕಾವು, ಸಿಡಿಲು, ಜ್ಯೋತ್ಯಮ್ಮ ಇಷ್ಟು ರೂಪಗಳನ್ನು ಜನಪದರಲ್ಲಿ ಬಳಸಿಕೊಳ್ಳಲಾಗಿದೆ. ಬೆಂಕಿ ಎಂದು ಜನಪದರು ಬಳಸಿದರೆ, ಅಗ್ನಿ ಎಂದು ಶಿಷ್ಟರಲ್ಲಿ ಬಳಕೆಯಾಗುತ್ತದೆ. ಈ ಬೆಂಕಿಯು ಜನಪದ ಜೀವನವನ್ನು ಆವರಿಸಿಕೊಂಡಿರುವ ಪ್ರಮಾಣವನ್ನು ಊಹಿಸಬಹುದಾದರೆ. ಮೇಲೆ ಹೆಸರಿಸಿರುವ ಬೆಂಕಿ ರೂಪಗಳು ಅವುಗಳ ಬಳಕೆ ಉಪಯೋಗದ ಸಂದರ್ಭಗಳು, ಮತ್ತು ಅದರ ಗುಣಗಳಿಂದ ಪ್ರತ್ಯೇಕವಾಗಿ ತನ್ನದೇ ಆದ ಸ್ಥಾನವನ್ನು ಉಳಿಸಿಕೊಂಡು ಮೌಲ್ಯವನ್ನು ಗಳಿಸಿವೆ. ಒಟ್ಟಾರೆ ಇವುಗಳಲ್ಲಿ ಕಂಡುಬರುವ ಸಮಾನ ಗುಣವೆಂದರೆ ಸುಡುವ ಶಕ್ತಿ ಮಾತ್ರ.

ಸಿಡಿಲು, ಜ್ಯೋತ್ಯಮ್ಮ, ಧಗೆ ಇವು ಬೆಂಕಿಗಿಂತ ವಿಭಿನ್ನವಾಗಿ ತನ್ನ ಅಸ್ಥಿತ್ವವನ್ನು ಪಡೆದು ಕೊಂಡಿರುವಂಥಹವುಗಳು. ಮನುಷ್ಯನ ಚರಿತ್ರೆಯ ಹಿನ್ನೆಲೆಯಲ್ಲಿ ಬೆಂಕಿಯ ಬಳಕೆ ಒಂದು ಮಹತ್ವದ ಘಟ್ಟವಾಗಿದೆ. ಪ್ರಪಂಚದ ನಾಗರೀಕತೆಗಳು ಬೆಳೆಯುವಲ್ಲಿ ಅಗ್ನಿಯ ಉಪಭೋಗವು ಒಂದು ಭಾಗವಾಗಿ ಕಾರ್ಯ ನಿರ್ವಹಿಸಿದೆ. ಶಿಷ್ಟ ಸಂಪ್ರದಾಯಗಳಲ್ಲಿ ಅಗ್ನಿಯೇ ಸರ್ವ ಶ್ರೇಷ್ಠವಾದದ್ದು. ಜಗತ್ತಿನ ಎಲ್ಲಾ ಪ್ರಧಾನ ಸಂಸ್ಕೃತಿಗಳಲ್ಲೂ ಅಗ್ನಿಗೆ ಆದ್ಯ ಸ್ಥಾನ ಕಲ್ಪಿಸಲಾಗಿದೆ. ಅಗ್ನಿಗೆ ಶುಭ ಸಮೃದ್ಧಿ, ಫಲವಂತಿಕೆಯ ಗುಣಗಳನ್ನು ರೂಪಿಸಲಾಗಿದೆ. ವೈದಿಕ ಹಿನ್ನೆಲೆಯಲ್ಲಿ ಅಗ್ನಿಯು ಸೃಷ್ಟಿಯ ಆದಿ ಪುರುಷನೆಂದು ನಂಬಿದೆ.[೪]

ಅಗ್ನಿಯು ವಸ್ತು ಮತ್ತು ಜೀವ ಈ ಎರಡನ್ನೂ ಶುದ್ಧ ಗೊಳಿಸುವ, ಪವಿತ್ರಗೊಳಿಸುವ ಹಿನ್ನೆಲೆಯಲ್ಲಿ ಬಳಸಲಾಗುತ್ತದೆ. ಇದಕ್ಕೆ ಸಾಕ್ಷಿಯೆಂದರೆ ಚಿನ್ನವು ಒಂದು ಆಕಾರ ಪಡೆಯ ಬೇಕಾದರೆ ಮೂಲವಾಗಿ ಅಗ್ನಿಯ ಸಹಾಯಬೇಕು. ಇಲ್ಲಿ ಅದನ್ನು ಅಗ್ಗಷ್ಟಿಕೆಯ ಸಹಾಯ ಪಡೆದರೆ, ಜೀವಿಯಲ್ಲಿ ಶುದ್ಧತೆಯನ್ನು ಗುರುತಿಸಲು

ದಿವ್ಯ ಹಿಡಿಯುವ ಮೂಲಕ ಅಥವಾ ಪುರಾಣದಲ್ಲಿ ನಮಗೆಲ್ಲ ತಿಳಿದಿರುವ ಹಾಗೆ ''ಸೀತೆ ಅಗ್ನಿ ಕುಂಡಕ್ಕೆ ಬಿದ್ದು ತನ್ನ ಪರಿಶುದ್ಧತೆಯನ್ನು ಪ್ರದರ್ಶಿಸಿದ್ದು'', ನಿದರ್ಶನವಾಗಿ ನೋಡಬಹುದು.

ಜನಪದರಲ್ಲಿ 'ಇಂಥ' ಪವಿತ್ರಗೊಳಿಸುವ ಗುಣ ಕಂಡರೂ ಕೆಡುಕಿನ ವಿನಾಶದ ಚಿಹ್ನೆಯಾಗಿಯೂ ಸ್ವೀಕಾರವಾಗಿರುವುದನ್ನು ಗುರುತಿಸಬಹುದು. ಜನಪದರಲ್ಲಿ ಬಳಕೆಯಲ್ಲಿರುವ ಹಾಡು, ನಂಬಿಕೆ, ಕಥೆ, ಒಗಟು, ಗಾದೆ, ಒಡಪು, ಆಚರಣೆ, ಸಂಪ್ರದಾಯ ಈ ಎಲ್ಲಾ ವಿವರಗಳಲ್ಲಿ ಮೇಲಿನ ರೂಪಗಳಲ್ಲಿ ಕೆಡುಕಿನ, ವಿನಾಶದ, ಸಾವಿನ ಸಂಕೇತವಾಗಿ ಚಿತ್ರಿತವಾಗಿದೆ.

ಬೆಂಕಿಯು ತನ್ನನ್ನು ತಾನು ಪ್ರಕಟಿಸುವುದಕ್ಕೆ ಯಾವುದಾದರೊಂದು ಮಾಧ್ಯಮ ಬೇಕು. ಇದರ ಹುಟ್ಟು ಯಾವುದೇ ತೆರನಾಗಿರಲಿ ಅಥವಾ ಬಗೆಯಾಗಿರಲಿ (ಸಿಡಿಲು, ಕಿಡಿ, ಕಿಚ್ಚು, ಜ್ಯೋತಿ, ಅಗ್ನಿ) ಅದು ಘರ್ಷಣೆಯ ಘಟನೆಯಾಗಿರುತ್ತದೆ. ಇದಕ್ಕೆ ಸಾಕ್ಷಿಯಾಗಿ ಜನಪದರ ಬೆಂಕಿಯ ಉಗಮದ ಕುರಿತು ಬೆಂಕಿ ಪುರಾಣವನ್ನು ನೋಡಬಹುದು. ಈ ಕುರಿತಾದ ವಿವರಣೆಯನ್ನು ವಿಶ್ಲೇಷಣೆಯನ್ನು ರವರು ವಿವರಿಸುವಾಗ ಹೇಳಿದ್ದಾರೆ. ಜನಪದರಲ್ಲಿ ಬೆಂಕಿಯ ಉಗಮ ಆದಿವಾಸಿಗಳಿಂದ ದಾಖಲಾಗಿರಬಹುದು ಎಂದು ಗುರುತಿಸಬಹುದಾಗಿದೆ.

ಬೆಂಕಿಯು ಜನಪದರಲ್ಲಿ ನಡೆಯುವ ಮದುವೆ, ಶವಸಂಸ್ಕಾರ, ಪೂಜಾ ವಿಧಿಗಳಲ್ಲಿ, ಹಬ್ಬಗಳಲ್ಲಿ ಅತ್ಯಂತ ಪ್ರಮುಖ ಸ್ಥಾನ ಪಡೆದಿದ್ದು, ಮೌಲ್ಯಯುತವಾದ ನೆಲೆ ಪಡೆದುಕೊಂಡಿದೆ. ಅವರ ದಿನ ನಿತ್ಯದ ಬದುಕಿನಲ್ಲಿ ಹಾಸು ಹೊಕ್ಕಾಗಿದೆ. ವಿನಾಶದ ಹಿಂದೆಯೇ ಸೌಮ್ಯದ, ಶಾಂತಿಯ ಸಂಕೇತವಾಗಿ ಜ್ಯೋತ್ಯಮ್ಮಳಾಗಿ ಅನು ಸಂಧಾನಕ್ಕೆ ಪಾತ್ರವಾಗಿದ್ದಾಳೆ. ಜನಪದರು ಜ್ಯೋತ್ಯಮ್ಮನ ಮೂಲ ರೂಪವಾದ ಬೆಂಕಿಯ ಋಣಾತ್ಮಕ, ಧನಾತ್ಮಕ ಗುಣಗಳಿಂದ ಆಕರ್ಷಣೆಗೆ ಒಳಪಟ್ಟು ಸ್ತ್ರೀತ್ವಕ್ಕೆ ಏರಿಸಿ ದೇವತೆಯಾಗಿಸಿಕೊಂಡಿದ್ದಾರೆ. ಈ ಅಂಶವನ್ನು ಜನಪದ ಸಾಹಿತ್ಯದಿಂತ ಆಚರಣೆಗಳಿಂದ, ನಂಬಿಕೆಗಳಿಂದ ಅರಿಯಬಹುದು. ಹಣತೆಯು ಅವರ ಬದುಕಿನ ಭಾಗವಾಗಿದ್ದು ಅಲಂಕಾರ ಭೂಷಣವಾಗಿ ಮಹತ್ವದ ಸಿದ್ಧಿ ಸಾಧಿಸಿದೆ. ಇಲ್ಲಿ ಒಳ್ಳೆತನಕ್ಕೆ, ಒಳ್ಳೆಯ ಕಾರ್ಯಕ್ಕೆ, ಒಳ್ಳೆಯ ಅಂಶಗಳಿಗೆ ಸಂಕೇತವಾಗಿ ಕ್ರಿಯಾಶೀಲವಾಗಿ ಅಂದಿನಿಂದ ಇಂದಿನವರೆಗೂ ಉಳಿದುಕೊಂಡು ಆಚರಣಾ ಯೋಗ್ಯವಾದ ಹಿನ್ನೆಲೆಯಲ್ಲಿ ಹಣತೆಯ ಪ್ರಧಾನ್ಯತೆಯನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಜನಪದರಲ್ಲಿ ಜ್ಯೋತ್ಯಮ್ಮ ಸ್ವೀಕಾರಾರ್ಹವಾದ ಸಂಗತಿಯಾಗಿದೆ, ಎಂದು ತಿಳಿದು ಬರುತ್ತದೆ. ಇವರ ದೃಷ್ಟಿಯಲ್ಲಿ ಹಣತೆ ಬರಿ ಹಣತೆಯಲ್ಲಿ ಅದು ಮುತ್ತಿನ ಹಣತೆ ಈ ಹಣತೆಗೆ ಹವಳಾದ ಬತ್ತಿಯನ್ನು ಹಾಕಿ ಜ್ಯೋತಿ ಬೆಳಗಿಸುತ್ತಾರೆ.

**೪.೧. ನಂಬಿಕೆ, ಮತ್ತು ವಿಧಿ-ನಿಷೇಧಗಳು.**

ಮನುಷ್ಯನ ಸಂಸ್ಕೃತಿಯ ಅರಳುವಿಕೆಯಲ್ಲಿ ಅಗ್ನಿಯು ತನ್ನದೇ ಆದ ಪಾತ್ರ, ಪ್ರಭಾವವನ್ನು ಬೀರಿದೆ. ಬೆಂಕಿಗೆ ಉರಿಯುವ ಗುಣ ಪ್ರಕೃತಿಯಿಂದ ಬಂದ ವರ ಅಥವಾ ಅದೊಂದು ಸಹಜವಾದ ಗುಣ. ಮನುಷ್ಯನ ಬದುಕಿನಲ್ಲಿ ಅನೇಕ ವಿಷಯಗಳು ಜೀವಂತಿಕೆ ಪಡೆದಿರುವ ಹಿನ್ನೆಲೆಯ ಒಳಗೆ ಧರ್ಮವು ಒಂದಾಗಿದೆ. ಈ ಧರ್ಮದ ಕಾರಣವಾಗಿ ಮನುಷ್ಯ ತನ್ನ ಸಂಬಂಧದಲ್ಲಿ ಶುದ್ಧೀಕರಣ ಹಾಗೂ ಸಂಯೋಗ ಗುಣಗಳು ಲಕ್ಷಣವಾಗಿರುವುದನ್ನು ತೋರುತ್ತವೆ.

ಜನಪದರ ನಂಬಿಕೆಗಳಲ್ಲಿ ಮನುಷ್ಯ ಸಂಬಂಧ ಈ ಮೂಲ ಅಂಶಗಳಿಂದ ಆಧಾರವನ್ನು ಇಟ್ಟುಕೊಂಡು ಅವರ ಬದುಕಿನ ಹಿನ್ನೆಲೆಯ ಒಳಗೆ ಅನೇಕ ಬಾರಿ ಪುನರುಕ್ತಿಯಾಗಿ ಪ್ರಧಾನ ಆಶಯವುಳ್ಳದಾಗಿರುವುದನ್ನು ಗುರುತಿಸಬಹುದು. ಶುದ್ಧೀಕರಣ ಇಲ್ಲೆಲ್ಲಾ ಮೂಲತಃ ಬಾಹ್ಯ ಕ್ರಿಯೆಗೆ ಸಂಬಂಧಿಸಿದ್ದು, ಆದರೆ ಒಳಗಿನ ಕ್ರಿಯೆ ಮೂಲಭೂತವಾಗಿ ಸಂಯೋಗವಾದದ್ದು. ಬೆಂಕಿಯ ಈ ಸಂಯೋಗದ ಗುಣದಿಂದ ಅವರ (ಜನಪದರ) ಸಾಂಸ್ಕೃತಿಕ ಕಲ್ಪನೆಯ ರಚನೆಗೆ ಪ್ರಮುಖ ಪಾತ್ರವಾಗಿದೆ.

ನೀರು ಅಸ್ಪೃಶ್ಯನಿಂದ ದೂರವಾಗಿ ಉಳಿದರೆ, ಬೆಂಕಿಯು ಆ ಅಸ್ಪೃಶ್ಯನ ಅಸ್ಪೃಶ್ಯತೆಯನ್ನು ಅಳೆಯುವ ಮಾಪನವಾಗಿ ನಿಲ್ಲುತ್ತದೆ. ಹಾಗಾಗಿಯೇ ಜನಪದರಲ್ಲಿ ದಿವ್ಯ ಅಥವಾ ದಿಬ್ಬೆ ಹಿಡಿಯುವ ಆಚರಣೆ ಹುಟ್ಟಿದ್ದು. ಈ ಮೂಲಕ ಮನುಷ್ಯನ ಸರಿ ತಪ್ಪುಗಳನ್ನು ತಿದ್ದುವ ಕಾರ್ಯವನ್ನು ಅತ್ಯಂತ ಕ್ರಿಯಾಶೀಲವಾಗಿ ಮಾಡುತ್ತದೆ. ನಂಬಿಕೆ ಎಂಬುದು ಮನುಷ್ಯನಲ್ಲಿ ಬಹಳ ದೊಡ್ಡ ಅಸ್ತಿತ್ವ ಪಡೆದಿದ್ದು, ಇದಿಲ್ಲದೆ ಬದುಕೇ ಇಲ್ಲ. ಮನುಷ್ಯ ಹುಟ್ಟುವಾಗ ಒಂಟಿ, ಸಾಯುವಾಗ ಒಂಟಿ, ಆದರೆ ಈ ಎರಡರ ನಡುವೆ ಜೀವನ ಸಾಗಿಸುವಾಗ ನಂಬಿಕೆ ಬಹಳ ಮುಖ್ಯವಾದ ಪಾತ್ರವಹಿಸುತ್ತದೆ. ಅವನ ಜೀವನ ನಂಬಿಕೆ ಹಿನ್ನೆಲೆಯಲ್ಲಿ ರಚನೆಗೊಂಡಿರುತ್ತದೆ. ಅವನ ಸುತ್ತ ಇರುವ ಜನ ಸಮೂಹ, ಪ್ರಕೃತಿ (ನಿಸರ್ಗ), ದೇವರು, ಸಂಬಂಧ, ನಂಬಿ ಬದುಕುತ್ತಿರುತ್ತಾನೆ. ಆ ನಂಬಿಕೆಗೆ ಸ್ವಲ್ಪವಾದರೂ ಸುಳ್ಳು ಅಥವಾ ಹೊಡೆತಗಳು ಬಿದ್ದರೆ ಸಂಪೂರ್ಣ ವಿನಾಶದ ಅಂಚನ್ನು ತಲುಪುತ್ತಾನೆ. ಈ ಹಿನ್ನೆಲೆಯಲ್ಲಿ ಜಗತ್ತನ್ನೇ ಆಳುತ್ತಿರುವ ಈ ನಂಬಿಕೆಯು, ನಂಬಿಕೆಗಳಾಗಿ ಸಮಸ್ತ ಜೀವನಾತ್ಮಕವಾದ ಆಚರಣೆಗಳಾಗಿ ರೂಢಿ, ವಾಡಿಕೆ, ಸಂಪ್ರದಾಯಗಳ ನೆಲೆಯಲ್ಲಿ ಉಳಿಯುತ್ತದೆ.

ವಿಶ್ವರೂಪ ಪಡೆದಿರುವ ಈ ನಂಬಿಕೆಯು ನಂಬಿಕೆಗಳಾಗಿ ರೂಪ ಪಡೆದಿದ್ದು, ಆದಿಮಾನವನ ನೈಸರ್ಗಿಕ ಚೇಷ್ಟೆಗಳ ಬಗೆಗೆ ತಳೆದ ಸಾಮೂಹಿಕ ಮನೋಭಾವಗಳೇ ಕಾರಣವಾಗಿರಬಹುದು. ಪ್ರಕೃತಿಯಲ್ಲಿನ ವೈಪರೀತ್ಯಗಳು, ಅವನಲ್ಲಿ ಭಯ ಹುಟ್ಟಿಸಿರಬೇಕು. ಅಂದರೆ, ಮಿಂಚು, ಗುಡುಗು, ಸಿಡಿಲು, ಮಳೆ, ಪ್ರವಾಹ, ಚಂಡಮಾರುತ, ಜೀವ ಜಂತುಗಳ ಮರಣ, ಕಾಡ್ಗಿಚ್ಚು, ಇತ್ಯಾದಿ ಅಂಶಗಳಿಂದ ಬೆದರಿದ ಆದಿ ಮಾನವ ಯಾವುದೋ ನಿಗೂಢ ಶಕ್ತಿಯ ಕೈವಾಡವಿರಬೇಕು ಎಂದು ಆಲೋಚಿಸಿದ. ಈ ಸಂದರ್ಭದಲ್ಲಿ ಮೇಲಿನ ಅಂಶಗಳನ್ನು ಇಟ್ಟು ಕೊಂಡು ತನ್ನ ಸಮೂಹದಲ್ಲಿ ಸಮಾಲೋಚನೆ ನಡೆಸಿರಬೇಕು. ಆ ಸಮೂಹದ ಭಿನ್ನ ಭಿನ್ನ ಮನೋಧರ್ಮಗಳು ವಿಶಿಷ್ಟವಾಗಿ ಆಲೋಚನೆ ಮಾಡಿದ್ದರ ಪರಿಣಾಮವಾಗಿಯೇ, ಅವನ ಕ್ಷೇಮಕ್ಕೆ ಸಾಧನೆಗೆ ಬೇಕಾದ ವಿಧಾನೋಪಾಯಗಳನ್ನು, ಪರಿಹಾರಗಳನ್ನು ಸೂಚಿಸಿರಬೇಕು ಅಥವಾ ಕಂಡುಕೊಂಡಿರಬೇಕು. ಇವರ ಈ ಆಲೋಚನ ಲಹರಿಗೆ ಪುರಸ್ಕಾರ ನೀಡುವ ಹಿನ್ನೆಲೆಯಲ್ಲಿ ಅವನು ನಂಬಿದ್ದೆಲ್ಲ ನಂಬಿಕೆಗಳಾಗಿರಬೇಕು. ನಿಸರ್ಗದ ನಿಯಂತ್ರಣದಿಂದ ತಮ್ಮನ್ನು ರಕ್ಷಿಸಿಕೊಳ್ಳುವುದು ಸಾಧ್ಯವಿದೆ ಎಂಬ ಅರಿವು ಪಡೆದರು. ಅಂದಿನಿಂದ ನಿಸರ್ಗದೊಂದಿಗಿನ ಹೋರಾಟ ಕ್ರಿಯೆ ಆರಂಭವಾಯಿತು. ಒಟ್ಟಿನಲ್ಲಿ ಭಯ ಮತ್ತು ಭಾವಾತ್ಮಕತೆ ಎಲ್ಲಾ ನಂಬಿಕೆಗಳ ಹಿನ್ನೆಲೆಯಲ್ಲಿದ್ದು ಅವು ಅನೇಕ ವಿಧಾನಗಳಲ್ಲಿ ರೂಪ ಪಡೆದಿರಬೇಕು. ಸೃಷ್ಟಿಶಕ್ತಿ ಕಲ್ಪನೆ ಮತ್ತು ಅಂತರ್ವಾಣಿ ಮನುಷ್ಯನ ಮೂಲಭೂತ ಗುಣಗಳು. ಈ ಗುಣಗಳಿಂದಾಗಿ ಅವನ ಮನಸ್ಸಿನ ಇಷ್ಟಾನಿಷ್ಟಗಳು ಅಭಿವ್ಯಕ್ತಿಯ ರೂಪ ಪಡೆಯುತ್ತದೆ."

ನಂಬಿಕೆಗಳನ್ನು ದಿಟದ ನಂಬಿಕೆಗಳೆಂದು, ಸಟೆಯ ನಂಬಿಕೆಗಳೆಂದು, ಮೂಢನಂಬಿಕೆಗಳೆಂದು ಕರೆಯುವ ರೂಢಿಯಿದೆ. ಆಂಗ್ಲ ಭಾಷೆಯಲ್ಲಿ ಈ ಗುಂಪಿಗೆ Superstition ಎನ್ನುವ ಹೆಸರಿದೆ. ಇತ್ತೀಚೆಗೆ Beleave ಎಂದು ಬಳಕೆಗೆ ಬಂದಿದೆ. ಈ ಪದ Stare ಎನ್ನುವ ಲ್ಯಾಟಿನ್ ಮೂಲದಿಂದ ಬಂದಿದೆ. ಈ ಪದದ ನಿಜವಾದ ಅರ್ಥ 'ದೇವರ ಭಯ' ಎಂದು, ಅಸಮರ್ಪಕ ಜ್ಞಾನ, ಅಜ್ಞಾನ, ದೋಷ ಪೂರಿತ ವೀಕ್ಷಣೆ, ಇಂದ್ರಿಯಾನುಭವದ ನ್ಯೂನತೆ, ಅವಸರದ ನಿರ್ಣಯ, ಮತ್ತು ತರ್ಕವಿಚಾರಗಳ ಅಧಾರವಿಲ್ಲದ ಕಲ್ಪನೆಗಳು ಮೂಢ ಅಥವಾ ಸೆಟೆ ನಂಬಿಕೆಗಳ ಹುಟ್ಟಿಗೆ ಕಾರಣ. ಪರಸ್ಪರ ಸಂಬಂಧವಿಲ್ಲದ ವಸ್ತುಗಳಲ್ಲಿ ಸಂಬಂಧ ಕಲ್ಪಿಸಿ ಅವುಗಳಿಗೆ ಕಲ್ಪಿತ ಪರಿಣಾಮವನ್ನು ಆರೋಪಿಸುವುದರಿಂದ ನಂಬಿಕೆಗಳು ಹೆಚ್ಚಾಗುತ್ತವೆ.[೬]

ಮನುಷ್ಯ ಭೌದ್ಧಿಕವಾಗಿ ಬೆಳೆಂದಂತೆಲ್ಲ ಮೂಢನಂಬಿಕೆಗಳು ಮಾಯವಾಗುತ್ತಿದ್ದರೂ, ಅವುಗಳಲ್ಲಿ ಎಲ್ಲವೂ ಮಾಯವಾಗಿಲ್ಲ. ಅಂಥ ನಂಬಿಕೆಗಳಲ್ಲಿ ಹಣತೆಯ ಕುರಿತಾದ ನಂಬಿಕೆಯೂ ಒಂದು ಸಿದ್ಧಿಯನ್ನು ಪಡೆಯಬೇಕಾದರೆ ಯಾವಾಗ ಏನು ಮಾಡಬೇಕು ಎಂದು ಹೇಳುವುದು ಸಂಪ್ರದಾಯವಾಗುತ್ತದೆ. ಹೇಗೆ ಮಾಡಬೇಕೆಂಬುದು ಉಪಾಸನೆಯಾಗುತ್ತದೆ. ಉಪಾಸನೆಗೆ ಪೋಷಕವಾಗುವಂತೆ ಯಾವ ಕ್ರಿಯೆ ಅಥವಾ ಸಂಗತಿ ಗ್ರಾಹ್ಯ, ಯಾವುದು ತ್ಯಾಜ್ಯ ಎಂದು ಹೇಳುವುದು ವಿಧಿ ನಿಷೇಧವಾಗುತ್ತವೆ. ಮನುಷ್ಯ ತನ್ನ ನಿತ್ಯ ಜೀವನದ ಅನುಭವಗಳಿಂದ ಶುಭವಲ್ಲದ ಕೆಲವು ಘಟನಾವಳಿಗಳಿಂದ ಅನೇಕ ನಿಷೇಧಗಳನ್ನು ಮಾಡಿಕೊಂಡಿದ್ದಾನೆ. ಈ ನಿಷೇಧಗಳು ಮುಂದೆ ಒಂದರ್ಥದಲ್ಲಿ ನಂಬಿಕೆಗಳಾಗಿ ಪರಿವರ್ತನೆಗೊಂಡಿವೆ.

ಉದಾ:- "ಶುಭಕಾರ್ಯಗಳಲ್ಲಿ ದೀಪ ಆರಬಾರದು." ಇಂಥ ನಿಷೇಧಗಳು ಜನಪದರ ಬದುಕಿನ ಬಹುಭಾಗ ಆವರಿಸಿಕೊಂಡಿವೆ. ಒಂದೇ ಒಂದು ನಿಷೇಧವು ಕೌಟುಂಬಿಕ, ವೈಯುಕ್ತಿಕ, ಪ್ರಾದೇಶಿಕ ಮಟ್ಟದ ವ್ಯಾಪ್ತಿಯನ್ನು ಪಡೆದುಕೊಳ್ಳುತ್ತದೆ. ಇಂಥ ನಂಬಿಕೆಗಳು ಸಾಮಾಜಿಕ ವ್ಯವಸ್ಥೆಯಲ್ಲಿ ಹೆಚ್ಚು ಮಹತ್ವ ಸಾಧಿಸುತ್ತವೆ. ಹಾಗೂ ಮೌಲ್ಯ ಪಡೆಯುತ್ತದೆ. ಈ ಮೂಲಕ ಒಂದು ಕುಟುಂಬದಲ್ಲಿ ಅಥವಾ ಸಮಾಜದಲ್ಲಿ ಪರಂಪರೆಯ ನೆಲೆಯಲ್ಲಿ ಸ್ಥಾಪಿತವಾಗುತ್ತದೆ, ಮತ್ತು ಸಂಸ್ಕೃತಿಯ ಪರಿಧಿಗೆ ಸೇರಿಕೊಳ್ಳುತ್ತವೆ.

ಹೀಗೆ ಸಾಹಿತ್ಯೇತರ ಗುಂಪಿಗೆ ಸೇರದ ನಂಬಿಕೆಗಳು, ವಿಧಿ-ನಿಷೇಧಗಳು ಮನುಷ್ಯನ ಭಾವನೆಗಳಿಂದ ಅಥವಾ ಒಂದು ವಿಷಯಕ್ಕೆ ಸಂಬಂಧಿಸಿದಂತೆ ಅಂಟಿಕೊಳ್ಳುತ್ತವೆ. ಇದನ್ನು ಗುರುತಿಸುವಾಗ ಪರಂಪರೆಯ ಹಿನ್ನೆಲೆಯಿಂದ ಹರಿದು ಬರುವ ನದಿಯೆಂಬಂತೆ ತಿಳಿಯ ಬಹುದಾಗಿದೆ. ನಂಬಿಕೆ ಮತ್ತು ವಿಧಿ-ನಿಷೇಧಗಳ ಮೂಲ ಗುರುತಿಸಲು ಸಾಧ್ಯವಿಲ್ಲ. ಅನೂಚ್ಯವಾಗಿ ನಡೆದುಕೊಂಡು ಬರುವ ನಂಬಿಕೆ, ವಿಧಿ-ನಿಷೇಧಗಳು ಸಾರ್ವತ್ರಿಕ ಮನ್ನಣೆ ಪಡೆಯುತ್ತವೆ. ಇವುಗಳು ವಿಚಾರಗಳಿಂದ ಹುಟ್ಟಿರಬಹುದು. ಲೌಕಿಕ ಜೀವನಕ್ಕೆ ಸಂಬಂಧ ಪಟ್ಟ ನಂಬಿಕೆಗಳು ಸಾಂಸ್ಕೃತಿಕ ನಂಬಿಕೆಗಳಾಗಿ ಬಿಂಬಿಸುತ್ತವೆ.

ಹಾಗಾಗಿಯೇ ಪರಂಪರಾಗತವಾಗಿ ಸ್ವೀಕೃತವಾದ ಸಮುದಾಯಗಳಲ್ಲಿ ಪುವರಾವರ್ತಿತವಾದ ಭಾವ ರೂಪಗಳನ್ನು ನಾವು ನಂಬಿಕೆಗಳು ಎಂದು ಕರೆಯುವಲ್ಲಿ ಅರ್ಥ ಪೂರ್ಣತೆ ಇದೆ. ಇವುಗಳು ಕಷ್ಟ ನಿವಾರಣೆ, ಅಡಚಣೆಗಳ ನಾಶ, ಪರಸ್ಪರ ವಿರುದ್ಧವಾದ ಅಂಶಗಳ ಹಿನ್ನೆಲೆಯಲ್ಲಿ ಹುಟ್ಟಿವೆ. ಹಾಗೆ ಪ್ರೇರಣೆ, ಪರಸ್ಪರದಿಂದ ಒಟ್ಟಾಗಿ ಆಯಾ ಸಂಸ್ಕೃತಿಯ, ವೃತ್ತಿಯ, ಧರ್ಮದ ಮೊದಲಾದ ಗುಣಗಳಿಗನುಸಾರಿಯಾಗಿ ರೂಪಿತವಾಗುತ್ತದೆ.

ಈ ಮೇಲಿನ ಹಿನ್ನೆಲೆಯನ್ನು ಇಟ್ಟುಕೊಂಡು ಕೆಳಗಿನ ನಂಬಿಕೆಗಳನ್ನು ಅಧ್ಯಯನ ಮಾಡಲಾಗಿದೆ.

**೪.೧. ನಂಬಿಕೆ ಮತ್ತು ವಿಧಿ-ನಿಷೇಧಗಳು.**

೦೧. ಕೆಲವು ಯಾತ್ರಾ ಸ್ಥಳಗಳಲ್ಲಿ ನೀರಿನಲ್ಲಿ ಹಣತೆಗಳನ್ನು ತೇಲಿಬಿಡುವ ಸಂಪ್ರದಾಯವಿದೆ. ಹರಿಯುವ ನದಿಗೆ ಹಣತೆಯನ್ನು ತೇಲಿ ಬಿಟ್ಟರೆ ಮುತ್ತೈದೆತನ ಹೆಚ್ಚಾಗುತ್ತದೆಯೆಂಬ ನಂಬಿಕೆ ಇದೆ.

೦೨. ದೀಪ ರಾಗವನ್ನು ಹಾಡಿದ ಕೂಡಲೇ ದೀಪಗಳು ಬೆಳಗುವುದೆಂದು ನಂಬಿಕೆ ಇದೆ.

೦೩. ಜನಪದ ಕಥೆಯೊಂದರಲ್ಲಿ ರಾತ್ರಿ ಎಲ್ಲರೂ ತಮ್ಮ ತಮ್ಮ ಮನೆಯ ದೀಪಗಳನ್ನು ಆರಿಸಿದ ಮೇಲೆ ಅವೆಲ್ಲ ಒಂದು ಕಡೆ ಸೇರುತ್ತಿದ್ದವು.

೦೪. ದೀಪ ಬೆಳಗಿಸುವುದರಿಂದ ಪುಣ್ಯ ಬರುತ್ತದೆಂಬ ನಂಬಿಕೆ ಇದೆ.

೦೫. ಸಂಜೆ ಮನೆ ಮುಂದೆ ಇಡುವ ದೀಪವನ್ನು ಅಪಮೃತ್ಯ ನಿವಾರಕ್ಕೆ ಬೆಳಗಿಸುತ್ತಾರೆ.

೦೬. ದೀಪದಾನ ಮಾಡುವುದರಿಂದ ಯಮನಿಂದ ಮುಕ್ತಿ ಸಿಗುತ್ತದೆ ಎಂಬ ನಂಬಿಕೆ ಇದೆ.

೦೭. ದೀಪದ ಜ್ವಾಲೆಯನ್ನು ಅನುಸರಿಸಿ ಶುಭಾಶುಭಗಳನ್ನು ಲೆಕ್ಕ ಹಾಕುವುದೂ ಇದೆ.

೦೮. ದೀಪ ಒಣಗಿದರೆ ಸಂಪತ್ತಿನ ವ್ಯಯ, ಬಿಳಿಯ ಜ್ವಾಲೆ ಬಂದರೆ ಅನ್ನನಾಶ, ಅತಿ ಕೆಂಪು ಯುದ್ಧದ ಸಂಕೇತ, ಕಪ್ಪು ಮರಣ ಸಂಕೇತ ಎಂಬುದಾಗಿ ಹೇಳುತ್ತಾರೆ.

೦೯. ದೀಪ ಜ್ಯೋತಿ ಆರುವುದು ಅಶುಭವೆಂಬ ನಂಬಿಕೆ ಇದೆ.

೧೦. ಮದುವೆಯಾದ ಹೆಣ್ಣು ಮಗಳೊಬ್ಬಳು ತನ್ನ ಹುಟ್ಟಿದ ಮನೆಯ ದೀಪವನ್ನು ನೋಡಬಾರದು. ಇದನ್ನು ಹಂದರ ದೀಪ ನೋಡಬಾರದು ಎಂದು ಹೇಳುತ್ತಾರೆ. (ನಾಗೋಲೆ ದೀಪ)

(ಮದುವೆಯಾಗಿ ಮೂರನೇ ದಿನ ನಾಗೋಲೆ ದೀಪ ನೋಡಬಾರದು)

೧೧. ದೇವರ ಮುಂದಿರುವ ಸಾಕ್ಷಿ ದೀಪವನ್ನು ಆರಿಸಿ ನಿಜವನ್ನು ಹೇಳಿಸುವ ಪದ್ಧತಿ ಇದೆ. ದೇವರ ದೀಪವನ್ನು ಆರಿಸುವುದು ಸತ್ಯ ಹೇಳುವವನಿಗೆ ಮಾತ್ರೆಂಬ ನಂಬಿಕೆ ಇತ್ತು.

೧೨. ಆರತಿ ಮಾಡುವಾಗ ಕಳಸ ಬೀಳಬಾರದು.

೧೩. ದೀಪ ಹತ್ತಿಸಿದಾಗ ಒಬ್ಬರಿಗೊಬ್ಬರು ಸಮಸ್ಕರಿಸಬೇಕು.

೧೪. ಆರತಿ ಮಾಡುವಾಗ ಸೆರಗು ಸುಡಬಾರದು.

೧೫. ದೀಪ ಆರಿದ ಮೇಲೆ ಊಟ ಮಾಡಬಾರದು.

೧೬. ಸಂಜೆ ದೀಪ ಹಚ್ಚಿದ ಮೇಲೆ ಸ್ವಲ್ಪ ಹೊತ್ತಾದರೂ ಮನೆಯ ಬಾಗಿಲನ್ನು ತೆರದಿರಬೇಕು. ಇಲ್ಲವಾದರೆ ಮನೆಗೆ ಬರುವ ಲಕ್ಷ್ಮಿ ಹಾಗೆ ಹೊರಟು ಹೋಗುತ್ತಾಳೆ.

೧೭. ದೀಪ ಹಚ್ಚಿದ ಮೇಲೆ ಸಗಣಿಯನ್ನು ಹೊರಗೆ ಕೊಡಬಾರದು.

೧೮. ದೀಪ ಹಚ್ಚಿದ ನಂತರ ಕಸ ಗುಡಿಸಿದರೆ ಸಾಲ ಹೆಚ್ಚಾಗುತ್ತದೆ.

೧೯. ದೀಪ ಆರಿದಾಗ ಊಟ ಮಾಡಬಾರದು. ಇಲ್ಲದಿದ್ದರೆ ದೆವ್ವ ತಿಂದಹಾಗೆ.

೨೦. ಶುಭ ಕಾರ್ಯದಲ್ಲಿ ತೊಡಗಿದಾಗ ದೀಪ ಆರಬಾರದು.

೨೧. ತಲೆನೋವು ಬಂದಾಗ ಬಳೆಚೂರನ್ನು ದೀಪದಲ್ಲಿ ಬಿಸಿ ಮಾಡಿ ಹಗೆಯ ಎರಡು ಪಕ್ಕಕ್ಕೂ ಚುಟುಕಿ ಹಾಕಿದರೆ ತಕ್ಷಣ ನಿಂತು ಹೋಗುತ್ತದೆ.

೨೨. ಸತ್ತವರನ್ನು ಸಮಾಧಿ ಮಾಡಿದ ಮೇಲೆ, ಅಲ್ಲಿಗೆಬಂದಿದ್ದವರೆಲ್ಲ ಮತ್ತೆ ಮನೆಗೆ ಬಂದು ಅಲ್ಲಿ ಹಚ್ಚಿಟ್ಟಿರುವ ದೀಪವನ್ನು ನೋಡಿ ಕೈ ಮುಗಿದು ಮನೆಗೆ ಹೋಗಬೇಕು.

೨೩. ದೀಪವನ್ನು ಆರಿಸುವಾಗ, ದೀಪ ಆರಿಸು ಎನ್ನಬಾರದು, ದೀಪ ತುಂಬ ಅನ್ನಬೇಕು.

೨೪. ದೀಪವನ್ನು ಹಚ್ಚಿದ ತಕ್ಷಣ ಆರಿಸಬಾರದು.

೨೫. ದೀಪ ಹಚ್ಚಿದ ಮೇಲೆ ಹಿನ್ನಲೆ ಬಾಗಿಲು ತೆಗೆಯಬಾರದು, ತೆಗೆದರೆ ಮುಂಬಾಗಿಲಿನಿಂದ ಬರುವ ಲಕ್ಷ್ಮಿ ಹಿಂಬಾಗಿಲಿನಿಂದ ಹೋಗುತ್ತಾಳೆ.

೨೬. ದೀಪ ಹಚ್ಚಿದ ಮೇಲೆ ಆರಿಸಬಾರದು/ಕೆಡಿಸಬಾರದು.

೨೭. ಒಂದೇ ದೀಪದ ಕಂಬವನ್ನು ದೇವರಿಗೆ ಹಚ್ಚಿಡಬಾರದು. ಜೋಡಿ ಕಂಬ ಹಚ್ಚಬೇಕು.

೨೮. ಒಳ್ಳೇ ಸುದ್ದಿ ಕೇಳಿದಾಗ ದೇವರ ಮುಂದೆ ತುಪ್ಪದ ದೀಪ ಹಚ್ಚಲಾಗುತ್ತದೆ.

ನಂಬಿಕೆಗಳು ಮಾನವನ ಸರ್ವತೋಮುಖವಾದ ಸಾಂಸ್ಕೃತಿಕ ವಿಕಾಸಕ್ಕೆ ಸಾಧನಗಳಾಗಿವೆ ಎಂಬುದು ಸತ್ಯ ಸಂಗತಿ, ನಂಬಿಕೆಗಳು ಸಾಮಾನ್ಯವಾಗಿ ದೀರ್ಘವಾದ ವೀಕ್ಷಣೆಗೆ ಒಳಗಾಗಿವೆ. ಇಂದ್ರಿಯ ಜ್ಞಾನದಿಂದ, ಅನುಭವ ಪಕ್ವವಾದಾಗ, ವೈಚಾರಿಕ ವಿಚಾರಗಳಿಂದ ಚಿಂತನೆಗೆ ಒಳಪಡಿಸಿರುವುದರಿಂದ ನಂಬಿಕೆಗಳು ಇನ್ನೂ ಭದ್ರವಾದ ನೆಲ ಗಟ್ಟಿನ ಮೇಲೆ ನಿಂತಿವೆ. ಕೆಲವು ನಂಬಿಕೆಗಳು ಮೂಢ ನಂಬಿಕೆಗಳಾದರು ಮತ್ತೆ ಕೆಲವು ನಂಬಿಕೆಗಳು ಶಾಶ್ವತವಾದ ಸಾಂಸ್ಕೃತಿಕ ನೆಲೆಗಟ್ಟನ್ನು ಹಿರಿದುಮಾಡಿವೆ. ಇಂದಿನ ವೈಜ್ಞಾನಿಕ ಯುಗದಲ್ಲೂ ಕೆಲವು ನಂಬಿಕೆಗಳು ನೂರಕ್ಕೆ ನೂರರಷ್ಟು ಸತ್ಯವೆಂಬಂತೆ ಸಾಕ್ಷೀಕರಿಸಿವೆ. ಕೆಲವು ನಂಬಿಕೆಗಳು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಹರಿದು ಬಂದಂತೆ ಕಾಣುತ್ತವೆ. ಹಾಗಾಗಿಯೇ ಅವುಗಳು ಸ್ಥಿರ ಸ್ಥಾಯಿಯಾಗಿ ಉಳಿದಿರುವುದು.[೭]

ನಂಬಿಕೆಗಳು ಬಾಳಿನ ಒಂದು ಅವಿಭಾಜ್ಯ ಅಂಗಗಳಾಗಿರುವುದರಿಂದ ಅವುಗಳು ಪ್ರಯೋಜನ ಮತ್ತು ನಿಷ್ಪ್ರಯೋಜನಗಳಾದವುಗಳು. ಇಂಥ ನಂಬಿಕೆಗಳು ಅನೇಕ ಸಾಮಾಜಿಕ ಮತ್ತು ಕೌಟುಂಬಿಕ ಮೌಲ್ಯಗಳಿಂದ ವ್ಯಕ್ತವಾಗುತ್ತವೆ. ಒಂದರ್ಥದಲ್ಲಿ ಅಲಿಖಿತ ಶಾಸನಗಳು. ಆದರೆ ಲಿಖಿತ ಶಾಸನಗಳಿಗಿಂತ ಮೌಲ್ಯವಾದವುಗಳು. ಇವುಗಳ ಹಿಂದೆ ದೀರ್ಘವಾದ ಪರಂಪರೆಯೇ ಹರಿದು ಬಂದಿದೆ. ಈ ಪರಂಪರೆ ನಿಂತ ನೀರಾಗದೆ ನಿತ್ಯ ನೂತನವಾಗಿ

ಹರಿಯುವ ನದಿಯಾಗಿ ಹಾಗೆ ಕಾಲಕ್ಕೆ ತಕ್ಕಂತೆ ಬದಲಾಯಿಸುತ್ತಿವೆ. ಈ ಸಮಾಜದಲ್ಲಿ ನೀತಿ ಧರ್ಮ ಉಳಿದಿರುವುದು ಈ ನಂಬಿಕೆಗಳಿಂದ, ಹಾಗೆ ಐಕ್ಯ ಸಂಘನೆಗಳಾಗಿರುವುದು ಈ ನಂಬಿಕೆಗಳಿಂದ ಎಂದು ಹೇಳುವಲ್ಲಿ ಎರಡು ಮಾತಿಲ್ಲ.

ಒಂದೊಂದು ನಂಬಿಕೆಗಳ ಹಿಂದೆ ಒಳ್ಳೇ ಉದ್ದೇಶದ ಭಾವನೆಗಳು ಮೂರ್ತಗೊಂಡಿವೆ. ಅಂದರೆ ಒಬ್ಬ ವ್ಯಕ್ತಿ ಸಾವನ್ನು ಅಪ್ಪಿದ ಮೇಲೆ ಆ ಹೆಣದ ಪಕ್ಕ ಮಣ್ಣಿನ ಹಣತೆಯನ್ನು ಹಚ್ಚುವುದು ಒಂದು ಸಂಪ್ರದಾಯ. ಹಾಗೆ ಆ ದೀಪವನ್ನು ಹೆಣವನ್ನು ಸಮಾಧಿಗೆ ಕೊಂಡೊಯ್ಯುವವರೆಗು ಇರಿಸುತ್ತಾರೆ. ನಂತರ ಈ ಕ್ರಿಯೆ ಇಲ್ಲಿಗೆ ಮುಗಿಯುವುದಿಲ್ಲ. ಸಮಾಧಿ ಮಾಡಿದ ನಂತರ ಬಂದು ಬಾಂಧವರು ಶುಚಿಗೊಂಡು ಮತ್ತೆ ಉರಿಯುತ್ತಿದ್ದ ಹಣತೆ ದೀಪವನ್ನು ಆರಿಸದೆ ಆ ವ್ಯಕ್ತಿ ಸತ್ತ ಜಾಗದಲ್ಲಿ ಇರಿಸಿ ಪೂಜಿಸುತ್ತಿದ್ದರಂತೆ. ನಂತರದಲ್ಲಿ ಬಂದ ಬಾಂಧವರು ಈ ದೀಪವನ್ನು ನೋಡಿ ಹೋಗುವುದು ಒಂದು ಒಂದು ಆಚರಣೆ. ಈ ಆಚರಣೆ ಹಿಂದೆ ಆ ವ್ಯಕ್ತಿ ದೇಹ ಸತ್ತರೂ, ದೂರಾದರು ಅವನು ಈ ಜ್ಯೋತಿಯನ್ನು ಬೆಳಗಿಸುವುದರ ಮೂಲಕ ಶಾಶ್ವತವಾಗಿ ಇಲ್ಲೇ ನೆಲೆಗೊಳ್ಳುತ್ತಾನೆ ಎಂಬ ನಂಬಿಕೆಯಿಂದ ಈ ಕ್ರಿಯೆ ಮಾಡುತ್ತಾರೆ.

ಇದರಂತೆ ಶುಭ ಕಾರ್ಯಗಳಲ್ಲಿ ದೀಪ ಆರಬಾರದು ಅಥವಾ ದೀಪ ಆರಿಸು ಎಂದು ಹೇಳಬಾರದು. ಶುಭ ಕಾರ್ಯಗಳಲ್ಲಿ ದೀಪ ಆರಬಾರದು ಏಕೆಂದರೆ ಯಾವುದಾದರೂ ಕೆಡುಕು ಸಂಭವಿಸಬಹುದು. ಜನಪದರ ದೃಷ್ಟಿಯಲ್ಲಿ ದೀಪ, ಬೆಳಗುವುದು ಬರೀ ಕ್ರಿಯೆಯಷ್ಟೇ ಅಲ್ಲ. ಅದು ಒಂದು ಇಡೀ ಸಂದರ್ಭವನ್ನೇ ನಾಶ ಮಾಡುವಂಥದ್ದು. ಹಾಗಾಗಿ ಶುಭ ಕಾರ್ಯಗಳಲ್ಲಿ ದೀಪ ಆರಬಾರದು ಎಂಬ ನಂಬಿಕೆ ಇದೆ. ಹಾಗೆ ದೀಪ ಆರಿಸು ಎಂದು ಹೇಳುವುದು ನಿಷೇಧವಾಗಿ ಬಳಕೆಗೊಂಡ ದೀಪ ಆರಿತು ಎಂದು ಹೇಳುವುದಕ್ಕಿಂತ ದೀಪ ತುಂಬು ಎಂದು ಹೇಳುವ ಸಂದರ್ಭವು ಈ ಮೇಲಿನ ಹಿನ್ನೆಲೆಯನ್ನು ಒಳಗೊಂಡಿದೆ.

ಆರತಿ ಮಾಡುವಾಗ ಕಳಸ ಬೀಳಬಾರದು. ದೀಪ ಹತ್ತಿಸಿದಾಗ ಒಬ್ಬರಿಗೊಬ್ಬರು ನಮಸ್ಕರಿಸಬೇಕು. ಏಕೆಂದರೆ ಆರತಿ ಮಾಡುವಾಗ ಕಳಸ ಬಿದ್ದರ ಮನೆಯಲ್ಲಿ ಸಾವು ಸಂಭವಿಸಬಹುದೆಂಬ ನಂಬಿಕೆ ಅಥವಾ ಅಪಾಯಗಳ ಮುನ್ಸೂಚನೆಯನ್ನು ಸಂಕೇತಿಸುತ್ತದೆ. ಹಾಗೆ ದೀಪ ಹತ್ತಿಸಿದಾಗ ಒಬ್ಬರಿಗೊಬ್ಬರು ನಮಸ್ಕರಿಸಬೇಕು. ಕಾರಣ ದೀಪ ಸೂರ್ಯನ ಸಂಕೇತವಾಗಿದ್ದು, ಬದುಕಿನ ನಡೆಗೆ ಆಧಾರವಾಗಿರುವ ಬೆಳಕೆಂಬ ಪೂಜ್ಯ ಭಾವನೆಯೋ ಅಂತೂ ಅನೇಕ ಸಂಪ್ರದಾಯಗಳಿಗೆ ಮೂಲವಾಗಿರುವ ನಂಬಿಕೆಗಳು ಜನಪದ ಜೀವನದಲ್ಲಿ ಆಳವಾಗಿ ಬೇರೂರಿದೆ.

ಜನಪದ ನಂಬಿಕೆಗಳು ಮೂಲತಃ ತಾರ್ಕಿಕ ಹಿನ್ನೆಲೆಯುಳ್ಳ ಶಿಶುಗಳಂತಲ್ಲ, ಅವುಗಳು ತಲೆ ತಲಾಂತರಗಳಿಂದ ಬದುಕಿನ ಮೌಲಗಳೆಂಬಂತೆ ಹಿರಿಯರಿಂದ ಸ್ವೀಕರಿಸಿದಂಥವುಗಳು. ಇಲ್ಲಿ ಎಲ್ಲಾ ನಂಬಿಕೆಗಳನ್ನು ಅವೈಜ್ಞಾನಿಕ, ವೈಜ್ಞಾನಿಕ ಎಂದು ಪಟ್ಟಿ ಮಾಡಲು ಸಾಧ್ಯವಿಲ್ಲ. ಹಾಗೆ ಯಾವುದೇ ನಂಬಿಕೆಗಳಾಗಲಿ ಸಂದರ್ಭದ ಹಿನ್ನೆಲೆಯಲ್ಲಿ ರಚನೆಗೊಂಡಿರುತ್ತವೆ, ಹೊರತು ಉದ್ದೇಶ ಪೂರಕವಾಗಿ ವಿನ್ಯಾಸಗೊಳ್ಳುವುದಿಲ್ಲ. ಆದರೆ ಈ ನಂಬಿಕೆಗಳಿಗೆ ಸ್ವರೂಪವನ್ನು ಕೊಟ್ಟು ಸಾರ್ವತ್ರೀಕರಣ ಮಾಡಲಾಗಿದ್ದು ಜನಪದರ ಮೂಲಕ.

ಯಾವುದೇ ನಂಬಿಕೆಗಳಾಗಲಿ ಉದ್ದೇಶ ರಹಿತವಾಗಿ ಸೃಷ್ಟಿಗೊಂಡಿಲ್ಲ. ತಮ್ಮ ಬದುಕಿನ ಘಟನೆಗಳನ್ನು ಆಧಾರವಾಗಿಟ್ಟುಕೊಂಡು ಅವುಗಳಿಗೆ ಸರಿ ತಪ್ಪುಗಳನ್ನು ವಿವರಿಸುತ್ತ ಹೋಗುತ್ತದೆ. ಅಂದರೆ ದೀಪ ಹಚ್ಚಿದ

ನಂತರ ಕಸ ಗೂಡಿಸಬಾರದು. ಕಾರಣ ಸಾಲ ಹೆಚ್ಚಾಗುತ್ತದೆಯಂತೆ. ಇಲ್ಲಿಯೂ ವ್ಯವಹಾರಿಕ ಜಗತ್ತಿನವರು ತಮ್ಮ ವೃತ್ತಿಗೆ ಆಧಾರವಾಗಿ ಹೇಳಿದ್ದಾರೆ.

ಹುಟ್ಟು ಸಾವನ್ನು ಸಂಕೇತಿಸುವ 'ದೀಪವು' ಹಚ್ಚಿದಾಗ ಸಮೃದ್ಧಿ, ಫಲವಂತಿಕೆಯನ್ನು, ಸೃಷ್ಟಿ ಕ್ರಿಯೆಯನ್ನು ಸಂಕೇತಿಸಿದರೆ, ಆರಿಸುವುದು ವಿನಾಶದ ಕುರುಹನ್ನು ಸಂಕೇತಿಸುತ್ತದೆ. ಈ ಹಿನ್ನೆಲೆಯಲ್ಲಿ ನಮ್ಮ ಜನಪದರಲ್ಲಿ ಸತ್ತಾಗ ದೀಪ ಹಚ್ಚಿಡುವ ಸಂಪ್ರದಾಯವು ಎಲ್ಲ ಜನಾಂಗಗಳಲ್ಲೂ ಕಾಣುತ್ತೇವೆ. ಅಂದರೆ ಆತ್ಮಜ್ಯೋತಿ ಪರಿಕಲ್ಪನೆ ಇಟ್ಟುಕೊಂಡು ಜನಪದರು ಮನುಷ್ಯನನ್ನು ದೀಪದ ಮೂಲಕ ಜೀವಂತವಾಗಿರಿಸುವ ಸಲುವಾಗಿ, ಆತನ ಆತ್ಮವು ನಮ್ಮೊಡನೆ ಇರುತ್ತದೆ, ಎಂದು ನಂಬಿ, ಅವನ ಆಸೆಗಳನ್ನು ಪೂರೈಸುವವರೆಗೂ ಇರಲಿ ಎಂಬ ಆಶಯದೊಂದಿಗೆ ಆ ದಿನ ದೀಪ ಹಚ್ಚುತ್ತಾರೆ.

ಮನುಷ್ಯನ ಏಳುಬೀಳಿನ ಬದುಕಿನಲ್ಲಿ ಒಳ್ಳೆಯದೇ ಘಟಿಸಲಿ ಎಂಬ ಆಶಯಗಳೊಂದಿಗೆ ನಂಬಿಕೆಗಳು ಅಂದಿನಿಂದ ಇಂದಿನವರೆಗೂ ಬೆಳಕಿಗೂ ಬಂದಿವೆ. ಇಂದಿಗೂ ಉದಾಹರಣೆಯಾಗಿರುವ ಸಂಗತಿಗಳೆಂದರೆ, ಯಾವುದೇ ಕಾರ್ಯವನ್ನು ಆರಂಭಿಸುವ ಮೊದಲು ದೀಪ ಬೆಳಗಿಸುವ ಮೂಲಕ ಆರಂಭಿಸುತ್ತಾರೆ. ಇದು ಹುಟ್ಟಿನಿಂದ ಸಾವಿನವರೆಗೂ ಮತ್ತು ಅದರ ನಂತರವು ನಡೆಯುವ ಸಾಗುವ ಅನಂತ ಕ್ರಿಯೆಯಾಗಿದೆ. ಅರಿವಿನ, ತ್ಯಾಗದ ಸಂಕೇತವಾದ ಹಣತೆ ಶಾಂತಿ ಸಮಾಧಾನದ ಪ್ರತೀಕವು ಹೌದು. ಹಾಗಾಗಿಯೇ ಜನಪದರು ಹತ್ತು ಬೆಳ್ಳೊಡ್ಡಿ ಕೈಯ ಮುಗಿಯುತ್ತಾರೆ. ಅದು ಬಾಳಿದೆ, ಜೀವವಿದೆ ಎಂದು ನಂಬಿದವರು.

**೪.೩. ಸಂಪ್ರದಾಯಗಳು**

ಒಂದು ಸಮುದಾಯದ ಸಂಸ್ಕೃತಿಯನ್ನು ಪೋಷಿಸುವಲ್ಲಿ, ನಾಗರೀಕತೆಯನ್ನು ಬೆಳೆಸುವ ನಿಟ್ಟಿನಲ್ಲಿ ಸಂಪ್ರದಾಯ ಆಚರಣೆಗಳು ವಿಶೇಷ ಮಹತ್ವ ಪಡೆದಿವೆ. ಅವು ಬಾಳಿನ ಅವಿಭಾಜ್ಯ ಅಂಗಗಳಾದ ಸಂಗತಿಗಳಾಗಿವೆ. ಒಂದು ಸಮಾಜವನ್ನು ಒಂದು ಗೂಡಿಸುವ ಮತ್ತು ಮುಂದಕ್ಕೊಯ್ಯುವ ಶಕ್ತಿ ಪುಂಜಗಳಾಗಿವೆ. ಸಂಪ್ರದಾಯಗಳು ಮುಲತಃ ವೈಯುಕ್ತಿಕ ವಾಡಿಕೆಗಳೆಂಬುದು ಸುಸ್ಪಸ್ಟ. ಪ್ರಭಾವ ಶಾಲಿಯಾದ ವ್ಯಕ್ತಿಯೊಬ್ಬನ ವಾಡಿಕೆಗಳನ್ನು ಸುತ್ತಮುತ್ತಿನ ಜನ ಅನುಕರಿಸುವುದು ಸಹಜ. ಸಮಾಜದ ತಲೆಯಾಳಿನಂತಿರುವ ಜನರ ಆಚರಣೆ ದೋಷ ರಹಿತವಾದುದಿರಬೇಕು. ಶುಭದಾಯಕವಾದುದಿರಬೇಕು, ಸಭ್ಯತೆಯ ಕುರುಹಾಗಿರಬೇಕು, ಎಂದು ದೇ ಜವರೇಗೌಡರು ಹೇಳುತ್ತಾರೆ.

ಹಿರಿಯರೆಂದ ಮೇಲೆ ಅವರು ಹೇಳಿದ್ದೆಲ್ಲ ಅಥವಾ ನಡೆದದ್ದೆಲ್ಲ ಸರಿಯೇ, ತಪ್ಪೇ ಎಂದು ವಿಚಾರಿಸುವ ಗೋಜಿಗೆ ಯಾರು ಹೋಗುವುದಿಲ್ಲ. ಹೀಗಾಗಿಯೇ ಸಂಪ್ರದಾಯಗಳು ಸಾಮುದಾಯಿಕ ನೆಲೆಯಲ್ಲಿ ಬೇರೂರಿದೆ. ಇಡೀ ಸಮಾಜದ ಅಥವಾ ಒಂದು ನಿರ್ದಿಷ್ಟ ಪ್ರದೇಶದ ಜನತೆಯ ಅಂಗೀಕಾರ ಮುದ್ರೆಯನ್ನು ಪಡೆಯದ, ಕೇವಲ ಒಂದು ಗುಂಪಿಗೆ ಅಥವಾ ಕುಟುಂಬಕ್ಕೆ ಸೀಮಿತಗೊಂಡಿರುವ ಆಚರಣೆ ಸಂಪ್ರದಾಯವೆನಿಸಿಕೊಳ್ಳುವುದಿಲ್ಲ. ಕಾಲ ಕ್ರಮೇಣ ಅವು ಸಾಮೂಹಿಕ ಕ್ರಿಯೆಗಳಾಗಿ ಅವಿಚ್ಛಿನ್ನ ಪರಂಪರೆಯಾಗಿ ಪರಿಣಮಿಸಿದರೆ, ಸಂಪ್ರದಾಯಗಳ ಸ್ಥಾನಮಾನಗಳನ್ನು ಪಡೆಯುತ್ತದೆ.

ಸಂಪ್ರದಾಯವನ್ನು ಎರಡು ವಿಭಾಗವಾಗಿ ನೋಡಲಾಗುತ್ತದೆ. ೧. ರಾಜಕೀಯ, ೨. ಸಾಮಾಜಿಕ-ಧಾರ್ಮಿಕ ಮೊದಲನೆಯದರಲ್ಲಿ ಕಾನೂನು ಶಾಸ್ತ್ರವಾಗಿ ವಿಕಾಸಗೊಂಡರೆ, ಎರಡನೆಯದು ನೀತಿ ಶಾಸ್ತ್ರವಾಗಿ ಅರಳುತ್ತದೆ. ಮನುಷ್ಯ ಹಲವರೊಟ್ಟಿಗೆ ಬದುಕಬೇಕಾದಾಗ ಸಮಾಜದ ಭದ್ರತೆ ಮತ್ತು ಸಾಮರಸ್ಯಗಳನ್ನು ರಕ್ಷಿಸುವ ಸಲುವಾಗಿ ಕಟ್ಟುಪಾಡುಗಳು ಅನಿವಾರ್ಯವಾಗುತ್ತವೆ. ಆ ಕಟ್ಟು ಪಾಡುಗಳೇ ಬರಬರುತ್ತ ನೀತಿ ಸೂತ್ರಕಗಳಾಗುತ್ತವೆ. ಸಮಾಜವನ್ನು ನಿಯಂತ್ರಿಸುವ ಮತ್ತು ಅದನ್ನು ಸರಿ ದಾರಿಯಲ್ಲಿ ಕೊಂಡೊಯ್ಯುವ ಶಕ್ತಿ ಸಂಪ್ರದಾಯಕ್ಕಿದೆ. ಈ ಸಂಪ್ರದಾಯಗಳಿಗೆ ಎಂತಹ ದೊಡ್ಡ ವ್ಯಕ್ತಿ ಎನಿಸಿದರೂ ತಲೆಬಾಗುವಂತೆ ಮಾಡಿಕೊಳ್ಳುವ ಗುಣ ಸಂಪ್ರದಾಯಕ್ಕಿದೆ.

ಸಂಪ್ರದಾಯಗಳು ಭೌಗೋಳಿಕ ಮತ್ತು ಸಾಂಸ್ಕೃತಿಕ ಪರಿಸರದ ಹಿನ್ನೆಲೆಯಲ್ಲಿ ಜನರ ಮನೋಧರ್ಮಕ್ಕನುಸಾರಿಯಾಗಿ ಉಗಮಗೊಂಡಿವೆ. ನಂಬಿಕೆಗಳೇ ಸಂಪ್ರದಾಯಗಳಿಗೆ ಮೂಲ ಕಾರಣಗಳು. ನಂಬಿಕೆಯ ಗರ್ಭದಲ್ಲಿದ್ದ ಸಂಪ್ರದಾಯಗಳು ಕಾಲಾನಂತರದಲ್ಲಿ ಮೂರ್ತ ರೂಪ ಪಡೆದು ಮೂರ್ತವಾಗುತ್ತದೆ. ಮನುಕುಲದ ಒಳಿತೀಗಾಗಿ ಅವಶ್ಯಕವೆಂದು ತಿಳಿದು ನಂಬಿಕೆಗಳೇ ನಂತರದಲ್ಲಿ ಸಂಪ್ರದಾಯಗಳಾಗಿ, ವಿಧಿ-ನಿಷೇಧಗಳಾಗಿ ಸಾಕಾರತೆ ಪಡೆಯುತ್ತಿವೆ. ಯಾವುದಾದರೂ ಸಿದ್ಧಿಯನ್ನು ಪಡೆಯಬೇಕಾದರೆ ಯಾವಾಗ ಏನು ಮಾಡಬೇಕು ಎಂಬುದು ಸಂಪ್ರದಾಯವಾಗುತ್ತದೆ. ಸಂಪ್ರದಾಯಗಳು ಇಂಥಹ ಸಂದರ್ಭದಲ್ಲೇ ಹುಟ್ಟುತ್ತವೆ ಎಂದು ಹೇಳಲು ಸ್ಪಷ್ಟವಾಗಿ ದಾಖಲೆಗಳಿಲ್ಲ. ಅವುಗಳು ಮನುಷ್ಯನ ಪರಿಸ್ಥಿತಿಯ ಅಡಿ ಉದ್ಭವಗೊಂಡಂಥವುಗಳು. ಮನುಷ್ಯನ ಹುಟ್ಟಿನಿಂದ ಆರಂಭವಾಗಿ ಸಾವಿನ ನಂತರದವರೆಗೂ ಮುಂದುವರೆಯುವ ಒಂದು ಆಚರಣಾತ್ಮಕ ಸಂಗತಿಯಾಗಿದ್ದು, ಒಂದು ಸಮುದಾಯದಿಂದ ಮತ್ತೊಂದು ಸಮುದಾಯದವರೆಗೂ ನಿರಂತರವಾಗಿ ಹರಿಯುವ ಚಲನಾ ಶೀಲ ಪ್ರಕ್ರಿಯೆಯದ್ದು.

**೪.೩. ಸಂಪ್ರದಾಯ**

೦೧. ಆರೋಗ್ಯವಂತನಾಗಲು, ಆಯುಷ್ಯನ್ನು ಹೆಚ್ಚಿಸಿಕೊಳ್ಳಲು ಮತ್ತು ಮಕ್ಕಳನ್ನು ಪಡೆಯಲು ದೇವರಿಗೆ ಹರತೆ ದೀಪಗಳನ್ನು ಹೊತ್ತಿಸುವ ಸಂಪ್ರದಾಯವಿತ್ತು.

೦೨. ಹಿಟ್ಟಿನ ದೀಪಗಳಿಗೆ ಪ್ರಾಣಿಯ ಆಕೃತಿಯಿಂದ ಅಲಂಕರಿಸಿ ಮದುವೆ, ಹಬ್ಬಗಳಲ್ಲಿ ಹಚ್ಚುತ್ತಾರೆ. (ಮೂಲನಿವಾಸಿಗಳು)

೦೩. ಶ್ರಾವಣ ಮಾಸದಲ್ಲಿ ಹಿಟ್ಟಿನ ದೀಪಗಳನ್ನು ಉರಿಸುವ ಸಂಪ್ರದಾಯ ಕೆಲವೆಡೆ ಇದೆ.

೦೪. ಬಯಲು ಸೀಮೆಯ ಕೆಲವು ಭಾಗಗಳಲ್ಲಿ ಮದುವೆಯ ಚಪ್ಪರದ ಕಂಬವೊಂದಕ್ಕೆ ''ಹೆಂಚಿನ ದೀಪ'' ವೊಂದನ್ನು ಕಟ್ಟಿ ಮೂರು ದಿನಗಳು ಆರದೆ ಉರಿಯುವಂತೆ ನೋಡಿಕೊಳ್ಳುತ್ತಾರೆ.

೦೫. ಉದ್ಘಾಟನಾ ಸಮಾರಂಭಗಳು ದೀಪವನ್ನು ಹಚ್ಚುವುದರ ಮೂಲಕ ಪ್ರಾರಂಭವಾಗುತ್ತದೆ.

೦೬. ತುಳಸಿಕಟ್ಟೆಯ ಅಂಟಿಕೆ-ಪಂಟಿಕೆ ಸಂಪ್ರದಾಯದ ದೀಪ ನೀಡುವ ಕಾರ್ಯಕ್ರಮವನ್ನು ಗಮನಿಸಬಹುದು.

೦೭. ಹಿಂದಿನ ಕಾಲದಲ್ಲಿ ಯುದ್ಧಕ್ಕೆ ಹೋಗುವ ವೀರರನ್ನು ಮತ್ತು ಯುದ್ಧದಲ್ಲಿ ವಿಜಯಿಗಳಾಗಿ ಬಂದವರನ್ನು ದೀಪಗಳೊಡನೆ ಗೌರವಿಸುವ ಸಂಪ್ರದಾಯವಿತ್ತು.

೦೯. ಮಹಾತ್ಮಾ ಗಾಂಧಿಯವರು ದಂಡ ಯಾತ್ರೆಗೆ ಹೋಗುವಾಗ ದಾರಿಯಲ್ಲಿ ಮಹಿಳೆಯರು ಪ್ರಾರ್ಥನಾ ದೀಪಗಳೊಂದಿಗೆ ಸ್ವಾಗತಿಸುತ್ತಿದ್ದಂತೆ.

೧೦. ದೀಪಗಳನ್ನು ಹಿಡಿದುಕೊಂಡು ಮಾಡುವ ನೃತ್ಯಗಳಿವೆ.

೧೧. ಕೇಡುಗಳು ಸಂಭವಿಸಿದಾಗ ಅವುಗಳು ಪರಿಹಾರ ಆಗಲೆಂದು ಎಳ್ಳನ್ನು ಕಪ್ಪು ಬಟ್ಟೆಯಲ್ಲಿ ಹಾಕಿ ಗಂಟು ಕಟ್ಟಿ, ಹರಳೆಣ್ಣೆಯಲ್ಲಿ ಅದ್ದಿ ಅದನ್ನು ಶನಿ ದೇವರ ಮುಂದೆ ಶನಿವಾರ ಹಚ್ಚುವ ಸಂಪ್ರದಾಯವಿದೆ.

೧೨. ಭೀಮನ ಆಮಾವಾಸ್ಯೆಯಲ್ಲಿ ದೀಪದ ಕಂಬಕ್ಕೆ ಪೂಜೆ ಮಾಡುತ್ತಾರೆ.

೧೩. ಬ್ರಾಹ್ಮಣರ ಮದುವೆಯಲ್ಲಿ ಬೀಗದ ಊಟ ಮಾಡುವಾಗ ಅವರ ಮುಂದೆ ಬಾಳೆ ಕಾಯಿಯ ಹೋಳಿಗೆ ಎಣ್ಣೆ ಹಾಕಿ ದೀಪ ಹಚ್ಚುತ್ತಿದ್ದುದುಂಟು..

೧೪. ಗ್ರಾಮದೇವತೆಯ ಹಬ್ಬದಲ್ಲಿ ತಂದಿಟ್ಟು, ಮಡೆ ಅನ್ನಗಳ ಜೊತೆ ದೀಪಗಳನ್ನು ಹಚ್ಚಿಕೊಂಡು ಹೋಗುತ್ತಾರೆ.

೧೫. ವಿವಿಧ ಯಾತ್ರಾ ಸ್ಥಳಗಳಲ್ಲಿ ನೀರಿನಲ್ಲಿ (ಪುಷ್ಕರಣೆಯಲ್ಲಿ) ದೀಪಗಳನ್ನು ತೇಲಿಬಿಡುವ ಸಂಪ್ರದಾಯವಿದೆ.

೧೬. ಹಿರಿಯರ ಸತ್ತವರ ಗೋರಿಯ ಮೇಲೆ ದೀಪ ಬೆಳಗಿಸುವ ಪದ್ಧತಿ ಇದೆ.

೧೭. ದೀವಸಿ ಅಮಾವಾಸ್ಯೆಯೆಂದು ದೀವಸಿ ಎಂಬ ದೇವತೆಯನ್ನು ಮತರೈದೆಯರು ಆರಾಧಿಸುವ ಪದ್ಧತಿ ಇದೆ.

೧೮. ಭೀಮನ ಅಮಾವಾಸ್ಯೆಯೆಂದು ಕೆಲವು ಭಾಗಗಳಲ್ಲಿ ಜ್ಯೋತಿರ್ಭೀಮೇಶ್ವರನ ಹೆಸರಿನಲ್ಲಿ ದೀಪವನ್ನು ಪೂಜಿಸುವುದುಂಟು.

೧೯. ಉತ್ತರ ಕರ್ನಾಟಕದಲ್ಲಿ ದೀವಳಿಗೆ ಸಂದರ್ಭದಲ್ಲಿ ದನಗಳಿಗೆ ದೀಪ ಬೆಳಗುವ ಸಂಪ್ರದಾಯವಿದೆ.

೨೦. ಬಯಲು ಸೀಮೆಯಲ್ಲಿ ದೀಪಾವಳಿ ಹಬ್ಬದಂತು ಅಳಿಯನ ಸತ್ಕಾರದ ಸಂಪ್ರದಾಯವಿದೆ.

೨೧. ಋತು ಚಕ್ರ ಪರಿವರ್ತನೆಯ ಸಂದರ್ಭದಲ್ಲಿ ದೀಪ ಬೆಳಗಿ ಕತ್ತಲಿನಿಂದ ಬೆಳಕಿನೆಡೆಗೆ ಸಾಗುವ ಕಾರಣದಿಂದಾಗಿ ದೀಪ ಬೆಳಗುವುದುಂಟು. (ಹುಡುಗಿಗೆ)

೨೨. ಇಷ್ಟ ಸಿದ್ಧಿಯಾದಾಗ ತುಪ್ಪದ ದೀಪ, ಹೊನ್ನೆಣ್ಣೆ ದೀಪ, ನಂದಾ ದೀಪಗಳನ್ನು ಹರಕೆಯ ರೂಪದಲ್ಲಿ ಹಚ್ಚುವ ಸಂಪ್ರದಾಯವಿದೆ.

೨೩. ಮನೆಯ ಪ್ರಧಾನ ಬಾಗಿಲು ಹೆಬ್ಬಾಗಿಲು ಬಳಿ ಚಿಕ್ಕ ದೀಪಗಳನ್ನು (ಗೂಡು ದೀಪಗಳನ್ನು) ಬೆಳಗುವುದನ್ನು ಕಾಣತ್ತೇವೆ.

೨೪. ಮಾಂತ್ರಿಕರು ದೀಪವನ್ನು ಪವಿತ್ರ ಭಾವನೆಯಿಂದ ಪೂಜಿಸುತ್ತಾರೆ.

೨೫. ನಿಂಬೆ ಹಣ್ಣಿನ ತೊಗಟೆಯಿಂದ ದೀಪ ಹಚ್ಚುತ್ತಾರೆ.

೨೬. ದೀಪಾವಳಿ ಸಮಯದಲ್ಲಿ ಎಳ್ಳು ಬೆಲ್ಲದಿಂದ ಮಾಡಿದ ತಂಬಿಟ್ಟಿನ ಮೇಲೆ ದೀಪ ಬೆಳಗುತ್ತಾರೆ.

ಎಲ್ಲಿ ಒಂದು ಆಚರಣೆಯಲ್ಲಿ ಪರಂಪರೆಯ ಮುದ್ರೆ ಕಂಡು ಬರುತ್ತದೋ ಅದು ವ್ಯಕ್ತಿ ಸ್ವರೂಪವನ್ನು ದಾಟಿ ಸಮಷ್ಟಿ ರೂಪವನ್ನು ಪಡೆದುಕೊಂಡು ಸಾಮೂಹಿಕ ವ್ಯವಹಾರದಲ್ಲಿ ಆಚರಣೆಯಾಗುತ್ತದೋ ಅಲ್ಲಿ ಸಂಪ್ರದಾಯ ಎಂಬುದನ್ನು ಗುರುತಿಸಬಹುದು. ನಂಬಿಕೆಗಳಿಗೆ ಮಾನಸಿಕ ನೆಲೆಯಲ್ಲಿ ಮನ್ನಣೆ ಪಡೆಯುತ್ತದೆ. ನಮ್ಮ ಅನೇಕ ಸಂಪ್ರದಾಯಗಳ ಧಾರ್ಮಿಕ ಭಾವನೆಯಲ್ಲಿ ರಚನೆಗೊಂಡಿವೆ.

ಜನಪದರಲ್ಲಿ ಸಾಹಿತ್ಯವು ಜನಾಂಗದ ಸ್ವತ್ತು. ಈ ಸ್ವತ್ತು ಅವರ ಜೀವನಲ್ಲಿ ತುಂಬಿ ಬಿಂಬಿತವಾಗಿದೆ. ಅದರೊಳಗೆ ಸಂಪ್ರದಾಯವು ಸಾಹಿತ್ಯದ ಮತ್ತೊಂದು ಭಾಗವಾಗಿದೆ. ಈ ಸಂಪ್ರದಾಯ ಎಲ್ಲ ಜನಾಂಗಗಳಲ್ಲಿಯೂ ಕಂಡು ಬರುವ ಪದ್ಧತಿಯಾಗಿದೆ. ಜನರ ನಡೆ ನುಡಿಗಳು ವಿಶಿಷ್ಟ ರೀತಿ-ನೀತಿಗಳು, ಐತಿಹಾಸಿಕ ಸಂಗತಿಗಳು, ಒಳಗೊಂಡು ಸಂಪ್ರದಾಯಗಳು  ಬಳಕೆಯಲ್ಲಿದ್ದು ಸಾಂಸ್ಕೃತಿಕವಾಗಿ ಬಿಂಬಿತವಾಗಿವೆ. ಎಷ್ಟೋ ಸಂಪ್ರದಾಯಗಳು, ನಂಬಿಕೆಗಳು, ಆಚರಣೆಗಳು ಇವತ್ತು ವಿನಾಶವಾಗುತ್ತಿವೆ. ಇವುಗಳನ್ನು ಉಳಿಸಿಕೊಳ್ಳಬೇಕು? ಅದರ ಮೌಲ್ಯ ಇಟ್ಟು ಕೊಳ್ಳ ಬೇಕೆ? ಎಂಬುದೇಇಂದು ಚರ್ಚಿತವಾಗುತ್ತಿದೆ. ಒಟ್ಟಾರೆ ಜನರ ನಡೆನುಡಿಗಳನ್ನೊಳಗೊಂಡ ಸಂಪ್ರದಾಯಗಳ ಬಗೆಗೆ ಹೇಳುವಂಥದ್ದು ಜನಪದ ಸಂಪ್ರದಾಯಗಳಾಗುತ್ತದೆ.

ಜನಪದ ಸಂಪ್ರದಾಯಗಳು ಅಂಧ ಶ್ರದ್ಧೆಯಿಂದ ನಂಬಿಕೊಂಡು ಬಂದಿದ್ದರೂ ಆಯಾ ಕಾಲಕ್ಕೆ ತಕ್ಕಂತೆ ಅವುಗಳ ಸತ್ಯಗಳನ್ನು ಸಾರುತ್ತ ಬಂದಿವೆ. ಮೌಲ್ಯಯುತವಾದ ಸಂಪ್ರದಾಯ ಉಳಿದರೆ, ಮೌಲ್ಯ ಇಲ್ಲದ್ದು ವಿನಾಶವಾಗುತ್ತದೆ. ಹೀಗೆ ಮೌಲ್ಯಯುತವಾದದ್ದು ಹಣತೆಸಂಸ್ಕೃತಿ. ಈ ಸಂಸ್ಕೃತಿಯ ಸಂಪ್ರದಾಯಗಳು, ಅರ್ಥಗಳು ಇಂದಿಗೂ ಇಳಿದು ಬಂದಿರುವುದು  ಋತುಮಾನಕ್ಕನುಸಾರವಾಗಿ  ಬೆಳೆದುಬಂದಿವೆ.

ಯಾವುದೇ ಋತುಮಾನವಾದರೂ ಸರಿ ಹಣತೆಯ ಆರಾಧನೆಗೆ ನಿಯಮವಿಲ್ಲ. ಹುಟ್ಟಿನಿಂದ ಸಾಯುವವರೆಗಿನ ಎಲ್ಲ ಶುಭಾ ಅಶುಭಾ ಕಾರ್ಯಗಳಲ್ಲಿ ದೀಪವು ಆರಾಧನೆಗೊಳ್ಳುವುದೇ ಇದರ ವಿಶಿಷ್ಟತೆ. ಜನಪದರು ಸಂಪ್ರದಾಯಗಳನ್ನು ತಮ್ಮ ಬದುಕಿನ ಭಾಗ ಮಾಡಿಕೊಂಡವರು. ಉದಾಹರಣೆಗೆ ಶ್ರಾವಣ ಮಾಸದಲ್ಲಿ ದೀಪಗಳನ್ನು ಉರಿಸುವ ಸಂಪ್ರದಾಯ ಕೆಲೆವೆಡೆ ಇದೆ. ಹಾಗೆ ನಂದಾ ದೀಪವನ್ನು ದೇವರ ಮುಂದೆ ಉರಿಸುವ ಸಂಪ್ರದಾಯವಿದೆ. ಇದರ ಅರ್ಥ ಮನೆಯಲ್ಲಿ ಯಾವುದೇ ಅಶುಭ ಘಟಣೆಗಳು ಘಟಿಸದಿರಲಿ. ಮನೆಯಲ್ಲಿ ಬೆಳಕು ನಿತ್ಯವು ತುಂಬಿರಲಿ, ಮನೆ-ಮನೆಗಳಲ್ಲಿ ಕತ್ತಲು ತುಂಬದಿರಲಿ ಎಂದು ಜನಪದರು ನಂದಾ ದೀಪವನ್ನು ಹಚ್ಚುತ್ತಾರೆ.

ಭೀಮನ ಅಮಾವಾಸ್ಯೆಯಂದು ಕೆಲವು ಭಾಗಗಳಲ್ಲಿ ಜ್ಯೋತಿ ಭೀಮೇಶ್ವರನ ಹೆಸರಿನಲ್ಲಿ ಹಣತೆ ಪೂಜಿಸುತ್ತಾರೆ. ಇದಕ್ಕೆ ಹಿನ್ನೆಲೆಯಾಗಿ ಕಾಳಿಂಗರಾಯನ ಕಥೆಯಲ್ಲಿ ಉದ್ಧೃತವಾಗಿದೆ. ಇದರ ಅರ್ಥ ಗಂಡನಿಗೆ ಅಕಾಲ ಮೃತ್ಯು ಸಂಭವಿಸದಿರಲಿ, ತನ್ನ ಮಾಂಗಲ್ಯಕ್ಕೆ ಆ ಭೀಮೇಶ್ವರ ರಕ್ಷಣೆಯಾಗಲಿ ನಿಲ್ಲಲಿ ಎಂದು ಆರಾಧಿಸುತ್ತಾರೆ. ಈ ಒಂದು ಸಂಪ್ರದಾಯದಿಂದ ಪುರಾಣವನ್ನು ನೆನೆಪಿಗೆ ತರುವ ಕೆಲಸ ಮಾಡುತ್ತದೆ. ಇಂಥ ಅನೇಕ ಸಂಪ್ರದಾಯಗಳು ಸಿಕ್ಕುತ್ತವೆ. ಈ ಹಿನ್ನೆಲೆಯಲ್ಲಿ ಹುಟ್ಟು ಹಬ್ಬವು ಒಂದು, ಈ ಸಂದರ್ಭದಲ್ಲಿ ದೀಪಾರಾಧನೆಯಾಗುವುದು, ಹೆಣ್ಣು ಮಕ್ಕಳು ಆರತಿ ಮಾಡುವರು. ''ಪಾಂಡವರು ವನವಾಸ ಮುಗಿಸಿಕೊಂಡು ವಿಜಯದಶಮಿಯಾದ ನಂತರ ದಕ್ಷಿಣ ಭರತಖಂಡವನ್ನು ಬಿಟ್ಟು ಹಸ್ತಿನಾವತಿಯನ್ನು ಸೇರುವರೆಂದು ಪೌರಾಣಿಕ ಕಥೆಯುಂಟು. ಇದರಂತೆ ಒಕ್ಕಲಿಗನು

ಪ್ರತಿಪದೆಯ ದಿವಸ, ಸಗಣಿಯ ಪಾಂಡವರನ್ನು ಮಾಡಿ ಅವರನ್ನು ಊರಲ್ಲಿ ಬರಮಾಡಿಕೊಳ್ಳುವನು, ಪಾಂಡವರ ಹೆಜ್ಜೆ ಗುರುತುಗಳನ್ನು ಹಾಕುವರು.

ಅಂತೆಯೇ ತಮ್ಮ ಇಷ್ಟಾರ್ಥಗಳು ನೆರವೇರಲೆಂದು ದೇವರಲ್ಲಿ ದೀಪಗಳನ್ನು ಕೊಡುವರೆಂದು ಹರಕೆ ಕಟ್ಟಿಕೊಳ್ಳುವ ಅನೇಕ ಸಂಪ್ರದಾಯಗಳಿವೆ. ಇಲ್ಲವೆ ಶ್ರಾವಣ ಮಾಸದಲ್ಲಿ ಗರತಿಯರು ಹಿಟ್ಟಿನ ಸಿಂಬೆ ಹಣ್ಣಿನ, ಎಳ್ಳಿನ ದೀಪ ಬೆಳಗಿಸಿ ಆರಾಧಿಸುವ ಬಗೆಯನ್ನು ಕಾಣಬಹುದು. ಇವೆಲ್ಲವೂ ಸಂಪ್ರದಾಯಗಳ ಹಿಂದೆ ಒಳಿತಾಗಲಿ ಎಂಬ ಆಶಯದೊಂದಿಗೆ ಹುಟ್ಟಿಕೊಂಡವು. ಮನುಷ್ಯನಿಗೆ ಕಷ್ಟಗಳು ಬರುವುದು ಸಹಜ. ಆದರೆ ಆ ಕಷ್ಟಗಳನ್ನು ಧೈರ್ಯದಿಂದ ಎದುರಿಸುವಂಥ ಗಟ್ಟಿ ಮನಸ್ಸನ್ನು ತಮ್ಮಲ್ಲಿ ಉಳಿಸು, ನಮಗೆ ರಕ್ಷಣೆಯಾಗಿರು ಎಂದು ಬೇಡಿಕೊಳ್ಳುತ್ತಾ ತಮ್ಮ ಎಲ್ಲಾ ಸಂಪ್ರದಾಯಗಳನ್ನು ಪರಂಪರೆಯಿಂದ ಪರಂಪರೆಗೆ ಬೆಳೆಸುತ್ತಾ ಆರಾಧಿಸುತ್ತಾ ಮುಂದಿನವರೆಗೆ ಬಳುವಳಿಯಾಗಿ ನೀಡುತ್ತಾ ಬಂದಿದ್ದಾರೆ.

ತಮ್ಮ ಕುಟುಂಬ, ಶಾಂತಿ ನೆಮ್ಮದಿ, ಸಮೃದ್ಧಿಯಿಂದ ಇರಲಿ, ಅಲ್ಲಿ ಪ್ರೀತಿ-ನಂಬಿಕೆ, ವಿಶ್ವಾಸಗಳು ಗಟ್ಟಿಯಾಗಿ ಯಾವುದೇ ಸಂಬಂಧದ ಕೊಂಡಿ ಕಳಚದಂತೆ ಭದ್ರವಾಗಿ ಬೇರೂರಲಿ ಎಂದು ಬೇಡಿಕೊಳ್ಳುತ್ತಾ ದೇವರಲ್ಲಿ ಎಲ್ಲರಿಗೂ ಒಳಿತಾಗಲಿ, ಎಂಬ ನಿಲುವಿನೊಂದಿಗೆ ಹಣತೆ ಬೆಳಗುತ್ತಾರೆ. ಇಂಥ ಮನಸ್ಸು ಈಗ ಕಾಣಲು ಸಾಧ್ಯವೆ?

**೪.೨. ಆಚರಣೆ**

ಸಂಸ್ಕೃತಿ ಒಂದು ಜನಾಂಗದ ವರ್ತನೆಗಳ ಒಟ್ಟು ಮೊತ್ತವೆಂದು ಪರಿಗಣಿಸುವಲ್ಲಿ ಅನೇಕ ನಡವಳಿಕೆಗಳಲ್ಲಿ ನಂಬಿಕೆಗಳು ಪ್ರಧಾನ ಪಾತ್ರವಹಿಸುತ್ತವೆ. ನಂಬಿಕೆಗಳು ಒಂದು ಮಾನಸಿಕ ಒಪ್ಪಂದವಾಗಿದ್ದು ಈ ಮಾನಸಿಕ ಒಪ್ಪಂದ ಶ್ರದ್ಧೆಯನ್ನವಲಂಬಿಸಿ ಕ್ರಿಯಾತ್ಮಕವಾಯಿತೆಂದರೆ ಅದು ಆಚರಣೆಯಾಗುತ್ತದೆ.

ಬಹುತೇಕ ಆಚರಣೆಗಳು ವ್ಯಕ್ತಿಯ ಜೀವನ ಕ್ರಮದಲ್ಲಿ ಅಥವಾ ಇಡೀ ಸಮುದಾಯದ ಕಾಲಮಾನದ ಚಕ್ರದಲ್ಲಿ ಎದುರಾಗುವ ಆತಂಕದ ಸಂದರ್ಭಗಳಿಗೆ ಸಂಬಂಧಿಸಿವೆ ಎಂದು ವಿದ್ವಾಂಸರ ಅಭಿಪ್ರಾಯ. ನಂಬಿಕೆ ಸ್ಥಿರವಾದರೆ ಇದರ ಹಿಂದೆಯೇ ಆಚರಣೆಗಳು ಹರಿಯುತ್ತದೆ. ನಂಬಿಕೆಗಳು ಆಚರಣೆಗಳಾಗಲು ಸಾಧ್ಯವಿಲ್ಲ. ಆಚರಣೆಗಳು ಹೇಗೆ ಹುಟ್ಟುವುದು ಎಂದು ಖಚಿತವಾಗಿ ಹೇಳಲು ಸಾಧ್ಯವಿಲ್ಲ. ಪ್ರಕೃತಿಯ ಎದುರು ಅಸಹಾಯಕನಾಗಿ ನಿಂತ ಆದಿಮಾನವ ಅಗೋಚರ ಶಕ್ತಿಯನ್ನು ನಂಬಿದ್ದರಿಂದ ಹುಟ್ಟಿರಬಹುದು. ಈ ಅಪಾಯಗಳನ್ನು ಪರಿಹರಿಸಿಕೊಳ್ಳುವ ಹಿನ್ನೆಲೆಯಲ್ಲಿ ಆಚರಣೆ ಉಗಮವಾಗಿರಬಹುದು.

ಜನಪದರ ಜೀವನ ನಂಬಿಕೆಯನ್ನು ಆಧರಿಸಿದ್ದು ಈ ನಂಬಿಕೆಯು ರೂಪ ಪಡೆದುಕೊಳ್ಳುವಾಗ ಒಂದು ದಿನ ನಿತ್ಯದ ಸಂಪ್ರದಾಯಗಳು ಒಂದಾನೊಂದು ಸಂದರ್ಭದಲ್ಲಿ ಮಹತ್ವಪಡೆದು, ಆಚರಣೆಯ ಆಕಾರ ಪಡೆದುಕೊಳ್ಳುತ್ತವೆ. ಜನಪದರ 'ಪರಿಮಿತ' ತಿಳುವಳಿಕೆ, ವಸ್ತು ಸ್ಥಿತಿಯೊಡನೆ ಅಸಂಬದ್ಧ ಸಂಬಂಧ ಅವೈಜ್ಞಾನಿಕ ಕಲ್ಪನೆಗಳು ಭಾವೋದ್ವೇಗಳೊಡನೆ ಸೇರಿ ನಂಬಿಕೆಯ ನೆಲೆಯಲ್ಲಿ ಪಕ್ವಗೊಂಡು ಆಚರಣೆಗಳ ಮೂಲಕ ಅರಳಿ ಪರಿಮಳ ಸೂಸುತ್ತವೆ.

ಯಾವುದೇ ಆಚರಣೆ ನಿರ್ದಿಷ್ಟ ಫಲಾಪೇಕ್ಷೆಯಿಂದ ರಚನೆಗೊಂಡಿರುತ್ತದೆ. ಹಾಗೆ ಈ ಆಚರಣೆಗಳು ಸಮಷ್ಟಿಯ ಹಿನ್ನೆಲೆಯಲ್ಲಿ ಹುಟ್ಟುವುದು ಸತ್ಯವಾದ ಅಂಶ. ಕಾರಣ ಒಂದು ಆಚರಣೆಯನ್ನು ಅನುಸರಿಸುವಾಗ ಕೇವಲ ಒಂದು ಕುಟುಂಬ ಪಾಲ್ಗೊಂಡಿರುವುದಿಲ್ಲ. ಆ ಕುಟುಂಬದ ಜೊತೆಗೆ ತಮ್ಮ ಬಂಧು ಬಾಂಧವರು, ನೆರೆ ಹೊರೆಯವರು ಹಾಗೂ ಇಡೀ ಸಮದಾಯವು ಸೇರಿ ಸಾಮೂಹಿಕವಾಗಿ ಆಚರಿಸಬಹುದು. ಆಚರಣೆಗಳು ಇಂಥವರೆ ಆಚರಿಸಬೇಕು ಎಂದು ನಿಯಮಗಳು ಇಲ್ಲದಿದ್ದರೂ, ಆ ಸಮುದಾಯದಲ್ಲಿ ಬದುಕುವ ಅನೇಕ ಕುಟುಂಬಗಳು ಒಂದೇ ಜಾತಿ, ಮತ, ಪಂಗಡಗಳಿಗೆ ಸೇರಿದವರಲ್ಲ, ಹಾಗಾಗಿ ಆಚರಣೆಗಳಲ್ಲಿ ವಿಶಿಷ್ಟವಾದ ಮಹತ್ವವಿರುತ್ತದೆ. ಈ ಮಹತ್ವದ ಹಿಂದೆ ಒಂದಾಗಿ ಬಾಳೋಣ ಎಂಬ ಸಂದೇಶ ಹೊತ್ತಿರುತ್ತದೆ. ಹಾಗೆ ವಿಭಿನ್ನ ಹಿನ್ನೆಲೆಗಳನ್ನು ಹೊಂದಿರುತ್ತದೆ. ಒಟ್ಟಾರೆ ಸಂಸ್ಕೃತಿಯ ಚಚಹರೆಯನ್ನೇ ತುಂಬಿಕೊಂಡು ಅಭಿವ್ಯಕ್ತಿಸುತ್ತಾರೆ.

ಹಾಗಾಗಿಯೇ ಆಚರಣೆ ಪರಂಪರೆಯನ್ನು ಸೃಷ್ಟಿಸುವ ಶಕ್ತಿ ಹೊಂದಿದೆ. ಹಾಗೆ ಈ ಆಚರಣೆಗಳು ನಂಬಿಕೆಯಿಂದ ಆಧಾರಿತವಾದ ಆಚರಣೆಯಲ್ಲಿ ನಂಬಿಕೆಯನ್ನೇ ಒಂದು ಆಲೋಚನೆ ಎನ್ನವುದಾದರೆ ಆಚರಣೆಯು ಆ ಆಲೋಚನೆಗೆ ಕ್ರಿಯೆಯಾಗುತ್ತದೆ. ಹಾಗೆ ಪ್ರತಿಯೊಂದು ಆಚರಣೆ ಆಯಾ ಸಮಾಜದ ಬೇಕು ಬೇಡಗಳನ್ನು ಅವಲಂಬಿಸಿ ಹುಟ್ಟಿಕೊಂಡಿರುತ್ತದೆ. ಈ ಆಚರಣೆಗಳು ಸ್ಥಾಯಿಯಾಗಿ ಉಳಿಯಲು ಪುರಾಣಗಳು ಪೋಷಕಾಂಶಗಳಂತೆ ಸೃಷ್ಟಿಯಾಗುತ್ತವೆ.

ಆಚರಣೆಗೆ ವಿಶಿಷ್ಟ ರಚನಾ ವಿನ್ಯಾಸ ವಿದ್ದು ಈ ಅಂಶಗಳನ್ನು ಸಂಪ್ರದಾಯಗಳಿಂದ ಸೃಷ್ಟಿಯಾದ ಬೇರ್ಪಡಿಸಲಾಗಿದೆ. ಆಚರಣೆಯನ್ನು ಇಂಗ್ಲೀಷಿನಲ್ಲಿ ->Rituals ಎಂದು ಇದಕ್ಕೆ ಸಂವಾದಿಯಾಗಿ ಆಚರಣೆ ಎಂದು ಬಳಕೆಗೊಂಡಿದೆ. ವಿದ್ವಾಂಸರು ಈ ಕುರಿತಂತೆ ಚರ್ಚೆ ನಡೆಸಿದ್ದರು. ಇದನ್ನು ನಾಲ್ಕು ವಿಭಾಗವಾಗಿ ಗುರುತಿಸುವರು. ಅವುಗಳೇಂದರೆ, ಕೌಟುಂಬಿಕ, ಧಾರ್ಮಿಕ, ಸಾಮಾಜಿಕ, ವ್ಯವಸಾಯಿಕವಾಗಿ ವಿಂಗಡಿಸಿದರೂ ಬಹುತೇಕ ಧಾರ್ಮಿಕ, ದೈವಿಕ ಸಂಸ್ಪರ್ಶವನ್ನು ಪಡೆದಿರುತ್ತವೆ.[೮]

ಆಚರಣೆಗಳು ದೈನಂದಿನ ನಡವಳಿಗೆ ನಂಬಂಧಿಸಿದರೇ ವಿಶೇಷ ಸಂದರ್ಭಕ್ಕೆ ಸಂಬಂಧಿಸಿರುತ್ತದೆ. ಅಂದರೆ ಮನುಷ್ಯನ ಬದುಕಿನಲ್ಲಿ ವಿಶೇಷ ಸಂದರ್ಭಗಳಾದ ಮದುವೆ, ಸಾವು, ಹಬ್ಬ-ಹರಿದಿನ, ವ್ಯವಸಾಯಿಕ, ಜಗತ್ತಿನಲ್ಲಿ ಬೆಳಕು ಚಲ್ಲುತ್ತದೆ. ಇದೇ ಹಿನ್ನೆಲೆಯ ಬಳಕೆ ಹಣತೆಯ ಆಚರಣೆಯೂ ಒಂದು. ಹಣತೆಗೆ ಸಂಬಂಧಿಸಿದ ಕೆಲವು ಆಚರಣೆಗಳ ಪಟ್ಟಿಯನ್ನು ಈ ಕೆಳಗಿನಂತೆ ಗಮನಿಸಬಹುದು.

**೪.೨. ಆಚರಣೆ**

೦೧. ಕಾರ್ತಿಕ ಮಾಸದಲ್ಲಿ ಮನೆಯ ಮುಂದೆ ಸಾಲು ದೀಪಗಳನ್ನು ಉರಿಸುತ್ತಾರೆ. ಹಾಗೆ ಆಕಾಶ ದೀಪಗಳನ್ನು ಉರಿಸುತ್ತಾರೆ.

೦೨. ವರ್ಷವೆಲ್ಲ ಉರಿಸಿದ ಹಳೆಯ ದೀಪಗಳನ್ನು ತೆಗೆದು ಹೊಸ ದೀಪಗಳನ್ನು ತರುವ ಕಾರ್ಯಕ್ರಮ ಅಷಾಢ ಮಾಸದ ಅಮಾವಾಸ್ಯೆಯಂದು ಇರುತ್ತದೆ. ಈ ಪವಿತ್ರ ಕಾರ್ಯಕ್ಕೆ ದೀಪರಾತ್ರಿ ಎಂದು ಹೆಸರು. ಈ ಸಂದರ್ಭದಲ್ಲಿ ಸಾಕ್ಷಿ ದೀಪಗಳಿರುತ್ತವೆ.

೦೩. ಕಾರ್ತಿಕ, ಶ್ರಾವಣ, ಮಾಸಗಳಲ್ಲಿ ಪ್ರಸಿದ್ಧ ಯಾತ್ರ ಸ್ಥಳಗಳಲ್ಲಿ ದೀಪೋತ್ಸವಗಳು ಜರುಗುತ್ತವೆ.

೦೪. ಲಕ್ಷ ದೀಪೋತ್ಸವ, ನಿತ್ಯ ದೀಪೋತ್ಸವಗಳನ್ನು ಬೆಳಗಿಸಲಾಗುತ್ತದೆ.

೦೫. ಮದುವೆ, ಸೋಬಾನೆ ಮುಂತಾದ ಶುಭ ಕಾರ್ಯಗಳಲ್ಲಿ ದೀಪಾಲೇ ಕಂಬಗಳು ಇದ್ದೇತೀರಬೇಕು.

೦೬. ದೀಪಾವಳಿಯು ದೀಪಗಳ ವೈಭವವನ್ನು ಪ್ರತಿನಿಧಿಸುವ ಹಬ್ಬವೆಂದೇ ಹೇಳಬೇಕು.

೦೭. ದಸರಾದಲ್ಲಿ ಕಲಾವಿದರು ಆಟನೆಡೆಸುವುದಕ್ಕಿಂತ ಮುಂಚೆ ತಿಮ್ಮಪ್ಪನ ಸಂಕೇತ ಎಂದು ಹೇಳಲಾದ ದೀಪಕ್ಕೆ ಮೊದಲು ಪ್ರಾರ್ಥನೆ ಸಲ್ಲಿಸುತ್ತಾರೆ. ನಟನು ಆ ದೀಪವನ್ನು ಹಿಡಿದು ರಂಗ ಪ್ರವೇಶ ಮಾಡುತ್ತಾನೆ. ಮುಗಿಯುವವರೆಗೂ ಕೈಯಲ್ಲಿ ಹಿಡಿದಿರುತ್ತಾನೆ.

೦೮. ಹಿರಿಯರ ಅಥವಾ ಸತ್ತವರ ಗೋರಿಯ ಮೇಲೆ ದೀಪ ಬೆಳಗಿಸುವ ಪದ್ಧತಿ ಇದೆ.

೦೯. ದೀಪಾವಳಿಯಲ್ಲಿ ಕೆಲವು ಕಡೆ ಯಮನ ಪ್ರೀತ್ಯಾರ್ಥವಾಗಿ ''ಯಮ ದೀಪವನ್ನು'' ಉರಿಸುತ್ತಾರೆ.

೧೦. ದೀಪಾವಳಿಯ ಸಂಜೆ ಲಕ್ಷ್ಮಿಯು ಎಲ್ಲಿಯೂ ಅವಿತು ಕೊಳ್ಳಬಾರದೆಂದು ಎಲ್ಲಾ ಕಡೆ ದೀಪ ಬೆಳಗಿಸುತ್ತಾರೆ.

೧೧. ಬಲಿಪಾಡ್ಯಮಿಯಂದು ದೀಪ ಬೆಳಗಿಸುತ್ತಾರೆ.

೧೨. ಮಲೆನಾಡ ಭಾಗದಲ್ಲಿ ಅಂಟಿಗೆ-ಪಂಟಿಗೆ ಆಚರಣೆ.

೧೩. ಕೆಲವು ಭಾಗಗಳಲ್ಲಿ ದೀಪಾವಳಿ ಹಬ್ಬದಂದು ದೇವಿರಮ್ಮನಿಗೆ ಎಳ್ಳು ಬೆಲ್ಲದ ಆರತಿಯನ್ನು ಮಾಡುವರು.

೧೪. ಉತ್ತರ ಕರ್ನಾಟಕದಲ್ಲಿ ಪಾಂಡವರನ್ನು ಪೂಜೆ ಮಾಡುವುದು ವಾಡಿಕೆ.

೧೫. ವಿಶೇಷ ಹಬ್ಬಗಳ ಸಂದರ್ಭದಲ್ಲಿ ಮೊಗೆಕಾಯಿ, ಹಿಂಡಲಿಕಾಯಿ ಮತ್ತು ಹಿಟ್ಟನ್ನು ಬಳಸಿ ದೊಂದಿ ಹಚ್ಚಿ ದೀಪ ಬೆಳಗುವ ಪದ್ದತಿಯೂ ಇದೆ.

೧೬. ಜೈನರಿಗೂ ದೀಪಾವಳಿ ಬಹು ಪ್ರಮುಖ ಹಬ್ಬ. ಆ ದಿನ ೨೪ ನೇ ತೀರ್ಥಂಕರ ನಿರ್ಮಾಣ ಹೊಂದಿದ ದಿನ.

೨೦. ಸತ್ತಾಗ ಹೆಣದ ಪಕ್ಕ ಮಣ್ಣಿನ ಹಣತೆ ಉರಿಸಬೇಕು.

ಜನಪದರು ಹೀಗೆ ಆಚರಣೆಗೆ ಪ್ರಮುಖ ಸ್ಥಾನವನ್ನು ಕೊಟ್ಟಿದ್ದಾರೆ. ಅಂದರೆ ಅವರ ಬದುಕಿನ ಒಂದು ಅಂಗದಂತೆ ಗದಿಗೆದರಿರುವ ಹಣತೆ ಸಂಸ್ಕೃತಿ ತನ್ನದೇ ಆದ ವಿಶಿಷ್ಟ ಮೌಲ್ಯಪಡೆದಿದೆ. ಹುಟ್ಟಿದಂದಿನಿಂದ ಸಾಯುವ ನಂತರವೂ ಶಾಶ್ವತವಾದ ನೆಲೆಸುವಿಕೆಯನ್ನು ಗಳಿಸಿಕೊಂಡಿರುವ ಹಣತೆ ಅಥವಾ ದೀಪ ಸಂಸ್ಕೃತಿ ಜನಪದರ ಒಡಲೊಳಗೆ ಬೆಳಕಾಗಿ ಹರಿಯುತ್ತಿದೆ. ಅಲ್ಲದೆ ಎಂದೋ ಹುಟ್ಟಿದ ಈ ದೀಪ ಪ್ರಸ್ತುತ ಕಾಲದಲ್ಲೂ ತನ್ನದೇ ಆದ ಸ್ಥಾನಗಳಿಸಿಕೊಂಡಿರುವುದು ಒಂದು ಆಶ್ಚರ್ಯಕರ ಸಂಗತಿ ಅಲ್ಲವೆ...

ವಿಶ್ಲೇಷಣೆ ದೃಷ್ಟಿಯಿಂದ ಹಣತೆಯ ಆಚರಣೆಗೆ ಸಂಬಂಧಿಸಿದಂತೆ ಜನಪದರಲ್ಲಿ ಬಹಳ ಮುಖ್ಯವಾಗಿ ಕಾಣಿಸಿಕೊಳ್ಳುವ ಕ್ರಿಯೆ ಎಂದರೆ ದೀಪಾವಳಿ ಹಬ್ಬ. ಈ ಹಬ್ಬವನ್ನು ಒಂದೊಂದು ಜನಾಂಗದಲ್ಲಿ ಒಂದೊಂದು ರೀತಿಯಲ್ಲಿ ಆಚರಿಸುತ್ತಾರೆ. ಈ ಕುರಿತ ಹಾಗೆ, ಹಣತೆಯು ''ಅಜ್ಞಾನವನ್ನು, ಕತ್ತಲನ್ನೂ ತೊಳೆದು ಜ್ಞಾನವನ್ನೂ,

ಬೆಳಕನ್ನೂ ನೀಡುವ ಸಂಪ್ರದಾಯದ ಹಿನ್ನಲೆಯಲ್ಲಿ ಬೆಂಕಿಯ ಮಹತ್ವದ ಕಡೆಗೆ ಬೆಳಕು ಚೆಲ್ಲುತ್ತದೆ.'' ಮಣ್ಣಿನಿಂದಲೇ ಎಲ್ಲಾವೂ ಎಂದು ನಂಬಿರುವ ಜನಪದರಲ್ಲಿ ದೀಪಾವಳಿ ಒಂದು ವಿಶಿಷ್ಟ ಆಚರಣೆ. ಅದು ಭಾರತದಲ್ಲಿ ಇದೊಂದು ಜಗತ್ ಪ್ರಸಿದ್ಧ ಹಬ್ಬ. ಇಡೀ ದೇಶವೇ ಈ ಹಬ್ಬದಲ್ಲಿ ಭಾಗಿಯಾಗುತ್ತದೆ. ದೀಪ ಹಾಗೂ ಇದಕ್ಕೆ ಸಂಬಂಧಿಸಿದ ನಂಬಿಕೆಯ ಅಂಶಗಳಿಂದ ತುಂಬಿಕೊಂಡು ಈ ಸಂಪ್ರದಾಯ ಸುಗ್ಗಿ ಒಳ್ಳೆಯದನ್ನು ಹೊತ್ತು ತರಲಿ ಎಂಬ ಮುಖ್ಯ ಆಶಯದಿಂದ ಕೂಡಿರುತ್ತದೆ ಎಂದು ಡಾ.ಸ.ಚಿ. ರಮೇಶ್ ತಿಳಿಸುತ್ತಾರೆ. ''ಸಮೃದ್ಧಿಯೇ ಕೇಂದ್ರ ಬಿಂದುವಾಗಿರುವ ಹಿನ್ನೆಲೆಯಲ್ಲಿ ಪ್ರಾಕೃತಿಕ ಸಮೃದ್ಧಿಗೆ ಸ್ಪಂಧಿಸುವ ಮಾನವನ ಸಾಂಸ್ಕೃತಿಕ ಜೀವನವು ಈ ಸಂದರ್ಭದಲ್ಲಿ ಸಹಜವಾಗಿಯೇ ತನ್ನ ಚಿರಂತನ ಸಂವೇದನೆಯಾದ ಬೆಳಕಿನತ್ತ ಬೆಂಬತ್ತುವಿಕೆ, ಮೃತ್ಯುವನ್ನು ಗೆಲ್ಲುವಿಕೆ ಮತ್ತು ಅಜ್ಞಾನವನ್ನು ತೊಡೆಯುವಿಕೆಗಳೆಂಬ ಅಂಶತ್ರಯವನ್ನು ಸಂಕೇತಿಸುವಂತೆ ಸಾಮಾಜಿಕ ಹಾಗೂ ಸಾಂಸ್ಕೃತಿಕ ಸೌಲಭ್ಯಗಳಿಗಾಗಿ ಅಳವಡಿಸಿಕೊಂಡು ಮರೆಯುವ ಆರ್ಥಿಕ-ಕಾರ್ಮಿಕ ವೈಭವೋತ್ಸಾಹದ ಆಚರಣೆಯಾಗಿದೆ. ಡಾ.ಆರ್. ಗಣೇಶ್ ತಿಳಿಸುತ್ತಾರೆ''.[೯]

ವಾತ್ಸ್ಯಾಯನನ ಕಾಮಸೂತ್ರದಲ್ಲಿ ಬರುವ ''ಯಕ್ಷರಾತ್ರಿ' ದೀಪಾವಳಿ ಹಬ್ಬದ ಇಂದಿನ ರೂಪಕ್ಕೆ ಅತಿನಿಕಟ ಅತ್ಯಂತ ಪ್ರಾಚೀನ ಲಿಖಿತ ದಾಖಲೆಯೆನ್ನುವುದು ಡಾ.ವಿ. ರಾಘವನ್ನರ ಅಭಿಪ್ರಾಯ, ಯಕ್ಷ ರಾತ್ರಿ ಭೋಗ ಪ್ರಧಾನವಾದ ಹರ್ಷೋತ್ಕರ್ಷದ ಬೆಳಕಿನ ಇರುಳು. ಭೋಗ ಸಂಪದಗಳ ಅಧಿ ದೇವತೆಗಲೆನಿಸಿದ ಯಕ್ಷಕರು ವಾಣಿಜ್ಯ ಮತ್ತು ಸಾರ್ಥಕಗಳ ಸಂರಕ್ಷಕರು ಹೌದು ಎಂದು ವಿವರಿಸುತ್ತಾರೆ.

ಕತ್ತಲನ್ನು ಒತ್ತರಿಸಿ ಬೆಳಕನ್ನು ಸ್ವಾಗತಿಸುವ ಹಬ್ಬವಾದ ದೀಪಾವಳಿಯ ಆಚರಣೆಯಲ್ಲಿ ವೈವಿಧ್ಯ, ಹೂ ಕುಂಡದ ವರ್ಣರಂಡಿತ ನಕ್ಷತ್ರಗಳ ಮೇಳದಂತೆಯೇ ಆಕರ್ಷಕವಾಗಿ ಮಿನುಗುತ್ತಿರುತ್ತದೆ. ತುಳುನಾಡು, ಮಲೆನಾಡು, ಬಯಲು ಸೀಮೆಗಳಲ್ಲಿ ಜನಪದರಿಗೆ ಬೆಳಕಿನ ಹಬ್ಬವೆಂದರೆ ನೆಲ ಜನದೊಂದಿಗಿನ ನಂಟನ್ನು ವಿವರಿಸುತ್ತದೆ. ಜನಪದರಲ್ಲಿ ಇದನ್ನು ದೊಡ್ಡ ಹಬ್ಬವೆಂದೋ ಕರೆಯಯಲಾಗುತ್ತದೆ.

ನಮ್ಮ ಜನಪದರು ಪ್ರಕೃತಿಯ ಆರಾಧಕು. ಪ್ರಕೃತಿಯಲ್ಲಿ ಕಾಣಬರುವ ನೆಲ, ಆಕಾಶ, ಮಳೆ, ಕಲ್ಲು, ಗಿಡ, ಮರ, ಹುತ್ತ, ಬೆತ್ತ, ಬೆಂಕಿ, ಇತ್ಯಾದಿ ಎಲ್ಲವೂ ಅವರ ಪಾಲಿಗೆ ದೇವರೇ. ಇವರಿಗೆ ಮಳೆ ಬಂದರೆ ಒಂದು ಹಬ್ಬವಾದರೆ, ಬಾರದಿದ್ದರೆ ಮತ್ತೊಂದು ಹಬ್ಬ, ಹೀಗೆ ಆಯಾ ಋತುಮಾನಗಳಿಗನುಗುಣವಾಗಿ ಒಂದೊಂದು ಹಬ್ಬವನ್ನು ಆಚರಿಸುವುದು ಅವರ ಪರಂಪರೆಯಿಂದ ಬಂದ ನಂಬಿಕೆ. ಈ ಆಚರಣೆಯ ಮೂಲಕ ತಮ್ಮ ಸುಖ, ದುಃಖ, ಸಂತೋಷ, ನೋವು ನಲಿವು, ಆಟಗಳನ್ನು ಸಮೂಹದೊಂದಿಗೆ ಹಂಚಿಕೊಳ್ಳಲು ಅನುವು ಮಾಡಿಕೊಂಡಿದ್ದಾರೆ. ಜನಪದರ ಇಂಥ ಹಬ್ಬ ಹರಿದಿನಗಳಿಂದಲೇ ನಮ್ಮ ಜನಪದರ ಸಂಸ್ಕೃತಿ, ಪರಂಪರೆಯ ಮಹೋನ್ನತಿ ನಮಗೆ ಇಂದು ಮೂರ್ತ ಸ್ವರೂಪದಲ್ಲಿ ಕಾಣುತ್ತಿದೆ.

ಹಬ್ಬಗಳ ಆಚರಣೆಯು ಒಂದು ದೃಷ್ಟಿಯಲ್ಲಿ ವೈಜ್ಞಾನಿಕವೂ ಮತ್ತು ಶಾಸ್ತ್ರೋಕ್ತವೂ ಆಗಿದೆಯೆಂದು ಹೇಳಬಹುದು.ಇವರು ಶ್ರಮ ಜೀವಿಗಳು ಹಗಲಿರೂಳು ದುಡಿಯುವ ಪೂಜಾರಿಗಳು, ಈ ದಣಿದಜೀವಕ್ಕೆ ವಿಶ್ರಮ ಕೊಡಲು ಮನರಂಜನೆಯನ್ನು ಕೇಂದ್ರವಾಗಿ ಅರಸಿದ್ದಾರೆ. ಈ ಹರಕೆಯ ಪ್ರತಿಫಲಗಳಲ್ಲಿ ಹಬ್ಬಗಳದ್ದೂ, ಒಂದು

ಪಾಲು ಇದೆ. ಆಚರಣೆಗಳು ಒಂದು ಸಾಮೂಹಿಕವಾಗಿ ಆಚರಿಸುವಂತವುಗಳು ಇರುತ್ತವೆ. ಇಲ್ಲವೇ ಒಂದು ಕುಟುಂಬಕ್ಕೆ ಸೀಮಿತವಾಗಿಯೂ ಇರುತ್ತದೆ. ಹೀಗೆ ದೀಪಾವಳಿ ಹಬ್ಬದ ಆಚರಣೆಯು ಸಾಮೂಹಿಕವಾಗಿ ಆಚರಿಸುವ ಹಬ್ಬವಾಗಿದೆ. ಆದರೂ ಇದು ಮನೆಯಲ್ಲಷ್ಟೇ ಅಲ್ಲದೇ ಊರವರೆಲ್ಲರೂ ಸೇರಿ ಆಚರಿಸುವಂತದ್ದು, ಗೋಪೂಜೆ, ಕಿಚ್ಚು ಹಾಯಿಸುವುದು, ಹೋರಿಗಳ ಮೆರವಣಿಗೆ ಇರಬಹುದು. ಗುಲ್ಲು ಹಾಕುವುದು. ತಿಪ್ಪನ್ನ ಹಾಕುವುದು. ಹಿರಿಯರ ಪೂಜೆ, ಕೆರಕಲ ನೀಡುವುದು ಇತ್ಯಾದಿ ಹತ್ತಾರು ಬಗೆಯ ಸಂಪ್ರದಾಯಗಳನ್ನು ಒಳಗೊಂಡು ವಿಶಿಷ್ಟ ಹಬ್ಬವಾಗಿದೆ. ಈ ಹಿನ್ನೆಲೆಯನ್ನು ಆಧರಿಸಿ ಹಣತೆ ಸಂಸ್ಕೃತಿಯು ಈ ಮೂಲಕ ಕಟ್ಟಿಕೊಂಡಿರುವ ರೀತಿಯನ್ನು ಹಂತ ಹಂತವಾಗಿ ಆಚರಣೆಗಳ ಮೂಲಕ ಆಶಯಗಳ ಮೂಲಕ ನೋಡಬಹುದು.

**ತುಳುವಿನಲ್ಲಿ-> ಬಾ ಕಲ್ಕಿ ಬಲಿಯೇಂದ್ರ.....**

ತುಳುವಿನ ಪಾಡ್ದನವೊಂದರ ಪ್ರಕಾರ ಬಲೀಂದ್ರ ಭೂಮಿ ತಾಯಿಯ ಪುತ್ರ. ದೀಪಾವಳಿ ಹಬ್ಬದಲ್ಲಿ ಬಲೀಂದ್ರನಿಗೆ ಪೂಜೆ ಸಲ್ಲಿಸುತ್ತಾರೆ. ಈ ಸಂದರ್ಭದಲ್ಲಿ ಬಲೀಂದ್ರನ ಪಾಡ್ದನ ಹಾಡುತ್ತಾರೆ. ಆ ದಿನ ಇವರು ದನ ಕರುಗಳನ್ನೆಲ್ಲ ಮೈತೊಳೆದು, ಸಂಜೆ ತಮ್ಮ ಗದ್ದೆಗಳ ಬಳಿ ಅಶುಗಳೊಂದಿಗೆ ಹೋಗುತ್ತಾರೆ. ಅಲ್ಲಿ ಉರಿಯುತ್ತಿರುವ ಕೋಲುಗಳನ್ನು ನೆಟ್ಟು ಅದಕ್ಕೆ ಚೆಂದೊಳಿಗೆ, ಕುಡ್ಕಪಂರ್ದೆದ ಮೊದಲಾದ ಹೂಗಳು, ಎಲೆ, ಅಡಿಕೆ, ಅವಲಕ್ಕಿ, ತೆಂಗಿನಕಾಯಿ ಎಲ್ಲಾ ಹಾಕಿ ಆಟಿದ ಅಮಾವಾಸ್ಯೆ... ಕೊಡಿ ಪರ್ಟೊಗು ಬಲ್ಲಾ ಕಲ್ಕಿ ಬಲಿಯೇಂದ್ರ ಎಂದು ಎಲ್ಲರೂ ಕೂಗುತ್ತಾರೆ. (ಆಷಾಢದ ಅಮಾವಾಸ್ಯೆ, ಶ್ರಾವಣ ನಂತರದ ಸಂಕ್ರಮಣ ಕಳೆದ ಪ್ರಿಮಿಂತೆರೆ ತಿಂಗಳಿನ ಮೂರು ದಿನದ ಕೊಡಿ ಹಬ್ಬಕ್ಕೆ ಬಾ ಕಲ್ಕಿ ಬಲಿಯೇಂದ್ರ), ತಮ್ಮ ಮನೆಯ ಮುಂದೆ ಬಲಕಿಮರ (ಬಲೀಂದ್ರ ಮರ) ನೆಟ್ಟು ಅದರ ತುದಿಯಲ್ಲಿ ಹಣತೆ ಹಚ್ಚಿ ಪೂಜಿಸುತ್ತಾರೆ. ಇದು ತುಳುವರು ಆಚರಿಸುವ ದೀಪಾವಳಿಯ ವಿಶಿಷ್ಟ ಆಚರಣೆ.

**ಮಲೆನಾಡಿನಲ್ಲಿ-> ದೀಪ್-ದೀಪೋಳ್ಗೆ**

ದೀಪಾವಳಿಯ ಪಾಡ್ಯ, ಕರಿ, ವರ್ಷತೊಡಕು ಈ ಮೂರು ದಿನಗಳು. ಬಹಳ ಮಹತ್ತರದ ದಿನಗಳು ಮಲೆನಾಡ ಜನಕ್ಕೆ, ಬಲಿಪಾಡ್ಯಮಿಯ ದಿನದಿಂದ ಮೂರುರಾತ್ರಿಗಳಲ್ಲಿ ಊರಿನ ಉತ್ಸಾಹಿ ತರಣರು ಸಾಂಪ್ರದಾಯಕವಾಗಿ ಪೂಜೆಮಾಡಿ ಹಚ್ಚಿಕೊಂಡು ಜ್ಯೋತಿಯನ್ನು ಮನೆಯಿಂದ ಮನೆಗೆ ಒಯ್ದು ಮುಟ್ಟಿಸಿ ಹಾಡುವ ಪದ್ಧತಿಯೇ ಅಂಟಿಗೆ, ಪಂಟಿಗೆ. ಇದೊಂದು ವಿಶಿಷ್ಟ ಸಂಪ್ರದಾಯವಾಗಿದೆ. ಹಬ್ಬ ಹಾಡುವುದು, ಜ್ಯೋತಿ ಕೊಡುವುದು,ದೀಪ ನೀಡುವುದು ಎಂತಲೇ ಕೆಲವು ಭಾಗಗಳಲ್ಲಿ ಕರೆಯಲಾಗುತ್ತದೆ. ಈ ಹಬ್ಬವು ನಮಗೆ ತಿಳಿದಿರುವ ಹಾಗೆ ಶಿವಮೊಗ್ಗ, ಚಿಕ್ಕ ಮಗಳೂರು, ಚಿತ್ರದುರ್ಗ, ದಕ್ಷಿಣ ಕನ್ನಡ ಮತ್ತು ಉತ್ತರ ಕನ್ನಡ ಜಿಲ್ಲೆಯ ಕೆಲವು ಭಾಗಗಳಲ್ಲಿ ಕಂಡು ಬರುತ್ತದೆ. ಈ ಕುರಿತ ಹಾಗೆ ಚಿತ್ರದುರ್ಗ ಪ್ರದೇಶದಲ್ಲಿಯೇ ಉಗಮ ಹೊಂದಿ ಮಲೆನಾಡ ಪ್ರದೇಶಗಳಿಗೆ ಕಂಬಳಿ ವ್ಯಾಪಾರಿಗಳಿಂದ ಹರಡಿರಬಹುದೆಂಬ ಊಹೆ ಇದೆ. ಬಯಲು ನಾಡಿನ ಕೆಲವು ಭಾಗಗಳಲ್ಲಿ ಅಂಟಿಕೆ ಪಂಟಿಗೆಯನ್ನು ಹೋಲುವ ಅನೇಕ ಸಂಪ್ರದಾಯಗಳಿವೆ. ಅದರಲ್ಲಿ ಭಾಗವಂತಿಕೆ ಮೇಳ. ಇದು ದೀಪಾವಳಿಯಲ್ಲಿ ಬಯಲು ಸೀಮೆಯಲ್ಲಿ ಕಾಣಬರುವ ಆಚರಣೆಯಾಗಿದೆ.

ಮಲೆನಾಡಿನ ಜನಕ್ಕೆ ದೀಪಾವಳಿ ಸಾರ್ಥಕ ಬದುಕಿನ ಜೀವಂತಿಕೆಯ ಸಂಕೇತದ ಬೆಳಕಿನ ಹಬ್ಬ. ಅವರ ಪಾಲಿಗೆ ದೊಡ್ಡ ಹಬ್ಬ. ಇವರಿಗೆ ನರಕ ಚತುರ್ದಶಿಯೊಂದಿಗೆ ಆರಂಭ. ಅಂದೇ ನೀರು ತುಂಬುವ ಹಬ್ಬ. ಮೀಯುವ ಹಂಡೆ-ಹರವಿಗಳಿಗೆ ಜೇಡಿಕೆಮ್ಮಿ ಸಾರಣೆ ಬೂರೆ ಹಬ್ಬದೊಂದಿಗೆ ದೀಪಾವಳಿ ಆರಂಭ. ಎಲ್ಲರೂ ಎಣ್ಣೆ ಸ್ನಾನ ಮಾಡುತ್ತಾರೆ. ಆ ದಿನ ರಾತ್ರಿ ಕಳ್ಳತನಕ್ಕೆ ಒಂದು ರಾತ್ರಿ ಅನುಮತಿ ಕೊಡಬೇಕು. ಆ ರಾತ್ರಿ ಕದ್ದಿದ್ದಕ್ಕೆ ಶಿಕ್ಷೆ ಇಲ್ಲ. ಕದ್ದವರು ಸಿಕ್ಕಿ ಬೀಳಬಾರದು ಅಷ್ಟೇ. ಅದು ಅಪಶಕುನದ ಸೂಚನೆ ಎಂದು ನಂಬಿಕೆ. ಆ ರಾತ್ರಿ ಮನೆಯ ಯಜಮಾನನ ಎಚ್ಚರ. ಎರಡನೆ ದಿನ ಬಲಿಪಾಡ್ಯಮಿ, ಅಂದು ಪಾಡ್ಯ ದಿನ. ಎಣ್ಣೆ ಉಜ್ಜಿ ಮನೆ ಮಂದಿಗೆಲ್ಲ ಅಭ್ಯಂಜನದಿಂದ ಮೈತೊಳೆದು, ಹಟ್ಟಿಯ ಹಸು ಕರುಗಳಿಗೆ ಜೇಡಿ, ಕೆಮ್ಮಣ್ಣು, ಉಗನೆಸರ, ಗೋಮಾಲೆ ಚಂಡು ಹೂವಿನ ಸರಗಳ ಅಲಂಕಾರ, ಗೋಪೂಜೆ, ಕಾಲುಪೂಜೆಯ ಸಂಭ್ರಮದಿಂದ ಆಚರಿಸುತ್ತಾರೆ. ಅಂದಿನ ಮತ್ತೊಂದು ವಿಶೇಷ ಆಚರಣೆ ಬಲೀಂದ್ರ ಪೂಜೆ. ಮಹಾವಿಷ್ಣುವಿನ ಪಾದ ಹತಿಯಿಂದ ಪಾತಾಳ ಸೇರಿದ ಬಲಿಚಕ್ರವರ್ತಿ ಭೂಮಿಗೆ ಬರುತ್ತಾನೆಂಬ ನಂಬಿಕೆ. ಬಲೀಂದ್ರನಿಗೆ ತರಾವರಿ ಭಕ್ಷ್ಯ ಬೋಜ್ಯ ಸಮಾರಾಧನೆ. ಕೆಲವೆಡೆ ರೈತರು ಬೇಸಾಯದ ಸಲಕರಣೆಗಳನ್ನು ಈ ಸಂದರ್ಭದಲ್ಲಿ ಪೂಜೆ ಮಾಡುವುದುಂಟು. ಕತ್ತಲೆ ಮುಸುಕುತ್ತಿದ್ದಂತೆ ದೀಪದ, ಹಣತೆಯ ಸಾಲುಗಳು ಬೆಳಗುತ್ತಿರುತ್ತವೆ. ರಾತ್ರಿ ದೇವರಿಗೆ ಭಕ್ತಿಯಿಂದ ಪೂಜೆ ಸಲ್ಲಿಸಿ ಉರಿಯುತ್ತಿರುವ ದೇವರ ನಂದಾ ದೀಪದಿಂದ ಜ್ಯೋತಿಗಳನ್ನು ಹೊತ್ತಿಸಿಕೊಳ್ಳುತ್ತಾರೆ. ಜ್ಯೋತಿ ಹಚ್ಚುವ ಪದ ಆರಂಭಿಸಿ ತಮ್ಮ ಜ್ಯೋತಿ ಸತ್ಯದಿಂದ, ಆಯದಿಂದ ಒಪ್ಪದಿಂದ ಉರಿಯುವಂತೆ ಪ್ರಾರ್ಥಿಸುತ್ತಾ, ದೀಪ್ ದೀಪೊಳ್ಗೆ ಎಂದು ಕೂಗುವುದು ವಾಡಿಕೆ. ಹೊತ್ತಿಸಿಕೊಂಡ ಜ್ಯೋತಿ ಆರದಂತೆ ಮೈಯೆಲ್ಲಾ ಕಣ್ಣಾಗಿರಬೇಕು. ಅದು ನಂದದಂತೆ ಹೊಂಬಾಳೆ ಅಥವಾ ಅಡಿಕೆ ಹಾಳೆಯ ರಕ್ಷಣೆ ಕೊಟ್ಟು ಮುಂದೆ ನಡೆಯಬೇಕು. ಹೊತ್ತಿಸಿಕೊಂಡ ಜ್ಯೋತಿ ದಾರಿಯಲ್ಲಿ ಅಥವಾ ಯಾರಾದರ ಮನೆಯ ಮುಂದೆ ನಂದಿ ಹೋದರೆ ಅಪಶಕುನ, ಮನೆಯವರಿಗೆ ಕೇಡು ಎಂಬ ನಂಬಿಕೆ.

ಹಬ್ಬದ ಕೊನೆ ದಿನ ವರ್ಷ ತೊಡಕು ಬಲೀಂದ್ರನ ತಿಥಿಯನ್ನು ಸಾಂಕೇತಿಕವಾಗಿ ಮಾಡುತ್ತಾರೆ. ಹೀಗೆ ಮಲೆನಾಡಿನಲ್ಲಿ ದೀಪಾವಳಿ ಆಚರಣೆ ತುಂಬಾ ವಿಶಿಷ್ಟವಾಗಿ ಆಚರಿಸಲ್ಪಡುತ್ತದೆ.

**ಬೇಲೂರು ತಾಲೂಕುನಲ್ಲಿ -> ಲಕ್‌ಲಕ್ಯೋ ಭೂ ಲಕ್ಯೋ.....**

ಬೆಳೆದು ನಿಂತಿರುವ ಹಚ್ಚ ಹಸಿರಿನ ಪೈರು ಭೂಮಿ ತಾಯಿಯು ತುಂಬು ಬಸಿರಿಯಂತೆ ಕಂಗೊಳಿಸುವ ಹಿನ್ನೆಲೆಯನ್ನು ಇಟ್ಟುಕೊಂಡು ಜನಪದರು ಕಾಡಿಗೆ ಹೋಗಿ ನೂರಾರು ಬಗೆಯ ಮರಗಿಡಗಳ ಸೊಪ್ಪು ತಂದು ತಮ್ಮ ತಮ್ಮನೆ, ಗುಡಿ, ಕೊಟ್ಟಿಗೆ, ಬಾವಿ, ಸಮಾಧಿ... ಎಲ್ಲೆಡೆ ಸಿಗಿಸುತ್ತಾರೆ. ಬಲೀಂದ್ರನ ಸ್ವಾಗತಕ್ಕಾಗಿ ಬಾವಿ, ಸಮಾಧಿ... ಎಲ್ಲಾ ಕಡೆ ಕೆರಕನನ್ನು ಇಡುತ್ತಾರೆ. (ಸಗಣಿ ಉಂಡೆಗೆ, ರಾಗಿ ತೆನೆ, ಜೋಳದ ತೆನೆ, ಭತ್ತದ ತೆನೆ, ನವಣೆ ತೆನೆ, ಸಜ್ಜೆ ತೆನೆ ಆನ್ಮೆ ಹೂವು, ಮರಳಿನ ಹೂ, ಅವಕ್ಕಿ ಹೂ, ಉತ್ರಾಣಿ ಕಡ್ಡಿ, ಅಂಟಿ ಕಡಿಯ ಹುಲ್ಲು (ಹಸಿದು) ಅಣ್ಣೆ ತೆನೆಯ ಈ ಎಲ್ಲಾ ಬೆಳೆಯನ್ನು ಇಟ್ಟು ಅದನ್ನು ಅರಳಿ ಎಲೆ ಮೇಲೆ ಇಟ್ಟು ಪೂಜಿಸುತ್ತಾರೆ) ಸಂಜೆ ಮಾಡಿದ ಅಡುಗೆಯನ್ನು ಕೊಂಡು ಹೋಗಿ ತಮ್ಮ ಗದ್ದೆಗಳಲ್ಲಿ ಚೆಲ್ಲುತ್ತಾರೆ. ಸಂಜೆಯ ಹೊತ್ತಿಗೆ ಗದ್ದೆಯಲ್ಲಿ ಪಂಜುಗಳನ್ನು ಹಚ್ಚಿ ಬರುತ್ತಾರೆ. ಬೇಲೂರು ತಾಲೂಕಿನ ಗ್ರಾಮಗಳಲ್ಲಿ ರೈತರು ತಮ್ಮ ಹೊಲಗಳಿಗೆ ಹೋಗಿ ಲಕ್ ಲಕ್ಯೋ ಭೂ ಲಕ್ಯೋ| ಭೂಮಿ

ತಾಯಿ ಲಕ್ಕ್ಯೋ ಎಂದು ಕೂಗು ಹಾಕಿ ಭೂಮಿತಾಯಿಯನ್ನು ಪೂಜಿಸುವುದೂ ಉಂಟು. ಕೆಲವು ಕಡೆ ಕೆರಕನನ್ನು ತಿಮ್ಮಪ್ಪ" ಹಾಕುವುದು, ಗುಲ್ಲು ಹಾಕುವುದು ಎಂದು ಕರೆಯಲಾಗುತ್ತದೆ. ದಾವಣಗೆರೆ ಭಾಗದಲ್ಲಿ ಗುಲ್ಲು ಹಾಕುವ ಸಂಪ್ರದಾಯವಿದ್ದು ಇದನ್ನು ಹಟ್ಟಿ ಲಕ್ಕವ್ವನೆಂದು ಕರೆಯಲಾಗುತ್ತದೆ. ಮೇಲೆ ಹೇಳಿದ ಎಲ್ಲಾ ಬೆಳೆಗಳನ್ನು ಸಗಣಿಗೆ ಸಿಗಿಸಿ ಬ್ರಹ್ಮ ದಂಡೆಯನ್ನು ಇರಿಸಿ ಸಂಜೆವರೆಗೂ ಮನೆ ಮುಂದೆ ಹಾಗೆ ಇಡುತ್ತಾರೆ. (ಬಾಗಿಲು, ದೇವರ ಮನೆ, ಒಲೆ ಹತ್ತಿರ, ಒರಳು ಕಲ್ಲಿನ ಹತ್ತಿರ, ತುಳಿಸಿ ಕಟ್ಟೆ ಹತ್ತಿರ) ಸಂಜೆ ಹಣತೆ ಬೆಳಗಿ ಪೂಜಿಸುತ್ತಾರೆ. ಸಾಕು ಪ್ರಾಣಿಗಳಿಗೆ ಅಡ್ಡಗಾಚಾರ ಬರದಿರಲಿ ಎಂಬ ನಂಬಿಕೆಯಿಂದ ಅಮಾವಾಸ್ಯೆ ದಿನ ಕುಂಡಿಯ ಬಳೆಕಾಯಿಸಿ ದನ, ಎಮ್ಮೆ, ಕುರಿಗಳ ಅಳ್ಳೆ ಮೇಲೆ ಬರೆಯಂತೆ ಗುಲ್ಲು ಹಾಕುತ್ತಾರೆ.ಇದನ್ನು ಬೆದರುಗುಲ್ಲು ಅಥವಾ ಹಟ್ಟಿ ಹಬ್ಬದ ಗುಲ್ಲು ಹಾಕುವುದು ಎನ್ನುತ್ತಾರೆ. ಇದೇ ರೀತಿ ಸೋದರ ಮಾವನವರ ಕೈಯಿಂದ ಊದು ಬತ್ತಿ ಅಥವಾ ಕುಕ್ಕಿ ಬಳ್ಳಿ ಕಡ್ಡಿ ಕಾಯಿಸಿ ಮನೆ ಮಕ್ಕಳ ಹಣೆಗೂ ಹೆಬ್ಬೆರಳಿಗೂ ಬರೆ ಹಾಕುವ ಪದ್ದತಿಯೂ ಈ ಭಾಗದಲ್ಲಿದೆ.

**ಹಟ್ಟಿ ಲಕ್ಕಪ್ಪನ ಆಚರಣೆ-ದೀಪಾವಳಿಯಲ್ಲಿ ಮಾಡುವುದು**

ಕಾಗಿನೆಲೆ ಎಂಬಲ್ಲಿ ಹಟ್ಟಿ ಹಬ್ಬದಂದು ಪೂಜಿಸುವ ಹಬ್ಬ ಆಚರಣೆ ವಿಶಿಷ್ಟವಾದದ್ದು. ದಾವಣಗೆರೆ ಭಾಗಕ್ಕಿಂತ ಭಿನ್ನವಾಗಿದೆ.ಆ ದಿನ ಒಂದು ಮನೆಯಲ್ಲಿ ಚೌಕಾಕಾರದ ಸಗಣಿ ಕೋಟೆ ಕಟ್ಟಿ ನಾಲ್ಕು ಮೂಲೆಗೆ ಒಂದೊಂದು ಸಣ್ಣ ಗುರ್ಚು (ಸಗಣಿ ಉಂಡೆ) ಇಟ್ಟು ಪೂಜಿಸುತ್ತಾರೆ. ಇದನ್ನೇ ಹಟ್ಟಿ ಎಂದು ಇದರ ನಡುವೆ ಬಟ್ಟಲಿನಾಕಾರದ 'ಹಟ್ಟಿ ಲಕ್ಕವ್ವ' ಇಟ್ಟು ಅದರಲ್ಲಿ ಹಾಲು, ಮೊಸರು ಹಾಕುತ್ತಾರೆ. ಒಂದು ಕಡ್ಡಿಗೆ ಚಪ್ಪರ ಬದನೆ ಅಥವಾ ಟೊಮಟೋ ಚುಚ್ಚಿ, ಹಟ್ಟಿ ಲಕ್ಕಮ್ಮನ ಹತ್ತಿರ ಇರಿಸಿ ಪೂಜಿಸುತ್ತಾರೆ. ಇದನ್ನು ವೀರ ಬಲ್ಲಾಳ ಎಂದು ಕರೆಯುತ್ತಾರೆ. ಈ ಕಡ್ಡಿ ಸಂಪತ್ತು ಸಮೃದ್ಧಿಯ ಪ್ರತೀಕವೂ ವೀರ ಬಲ್ಲಾಳನ ಕಾಲದಲ್ಲಿನಂತೆ ಇಂದಿಗೂ ಜನರು ಸುಖ ಸಂತೋಷ ಬಯಸುತ್ತಾರೆಂದು ವಿದ್ವಾಂಸರ ಅಭಿಪ್ರಾಯವಾಗಿದೆ. ಮೈಸೂರು ಭಾಗದಲ್ಲಿ ಹೀಗೆ ಸ್ವಲ್ಪ ಭಿನ್ನ, ಅಂದರೆ ''ಹಟ್ಟಿಯ ಬದಲಾಗಿಕೋಟೆ ಕಟ್ಟಿ ನಾಲ್ಕು ಮೂಲೆಗಳಲ್ಲಿ ಚೆಂಡು ಮಲ್ಲಿಗೆ ಹೂ ಇಟ್ಟು ಅಲ್ಲಿ ವೀರ ಬಲ್ಲಾಳನಿಗೆ ಬದಲು ಮಹಾರಾಜನನ್ನು ಪೂಜಿಸುತ್ತಾರೆ. ಕೋಟೆ ಒಳಗೆ ಬಟ್ಟಲಿನಲ್ಲಿ ಹಾಲು, ಮೊಸರು ಇರಿಸುತ್ತಾರೆ.''

**ಬುಡಕಟ್ಟಿನಲ್ಲಿ ಆಚರಿಸುವ ಹಬ್ಬ -> ಹಟ್ಟಿ ಹಬ್ಬ**

ಬೆಳವಲ ಪ್ರದೇಶಗಳಲ್ಲಿ ದೀಪಾವಳಿ ಹಬ್ಬವನ್ನು ಹಟ್ಟಿ ಹಬ್ಬ ಎಂದು ಕರೆಯುತ್ತಾರೆ. ಒಂದು ಆಚರಣೆ ಆಯಾ ಪ್ರದೇಶಕ್ಕೆ ಅನುಸಾರಿಯಾಗಿ ಭಿನ್ನತೆಯಿಂದ ಕೂಡಿರುತ್ತದೆ. ಹಾಗೆ ಆ ಪ್ರದೇಶಕ್ಕೆ ತಕ್ಕಂತೆ ನಂಬಿಕೆಗಳು, ಸಂಪ್ರದಾಗಳು, ಆಚರಣೆಗಳು ಮೌಖಿಕವಾಗಿ ಹರಿದು ಬಂದಿರುತ್ತವೆ. ಹಬ್ಬವೆಂದರೆ ಸಗಣಿಯಿಂದ ಸುಮಾರು ಮೂರು ಅಡಿ ಸುತ್ತಳತೆಯ ಬಂಡಿಗಾಲಿ ಆಕಾರದ ಮಂಡಲ ರಚಿಸುತ್ತಾರೆ. ಅದರ ಒಳಗೆ ಐದು ಚಿಕ್ಕ ಅಂಕಣಗಳಲ್ಲಿ ಮೋಡಿ, ಕಸಬರಿಕೆ, ಎತ್ತಿನ ಕಣ್ಣು, ಕುಂಬಳ ಕಾಯಿಗಳನ್ನು ಇಟ್ಟು ಇವುಗಳಿಗೆ ಮಾಣು ಕಡ್ಡಿ, ಉತ್ತರಾಣಿ ಕಡ್ಡಿಗಳನ್ನಿಟ್ಟು ಹೋಳಿಗೆ ಎಡೆ ಹಾಕಿ ಪೂಜಿಸುತ್ತಾರೆ.

ಉತ್ತರ ಕರ್ನಾಟಕದ ಹಟ್ಟಿ ಹಬ್ಬದ ವಿಶೇಷತೆ ಎಂದರೆ, ಆಣಿ-ಪೀಣಿ ಹಾಗೂ ಪಾಂಡವರ ಪೂಜೆ. ಇವುಗಳ ಜೊತೆಗೆ ಭಾವು ಬಿದಿಗೆ, ಅಕ್ಕನ ಬಿದಿಗೆಗಳೂ ಉಲ್ಲೇಖನೀಯವೇ. ಇಲ್ಲಿ ಆರಂಭವಾಗುವುದೇ ಭಾವು ಬಿದಿಗೆ

ಯೊಂದಿಗೆ. ನರಕ ಚತುರ್ದಶಿಯ ಹಿಂದಿನ ದಿನ ನೀರು ತುಂಬುವ ಹಬ್ಬವೆಂಬ ಸಂಪ್ರದಾಯವಿದೆ.ಆದರೆ ಈ ಭಾಗದಲ್ಲಿ ಶ್ಯಾವಿಗೆ ಬೇಯಿಸಿದ ನೀರಿನಲ್ಲಿ ಬೇವಿನ ಸೊಪ್ಪು ಹಾಕಿ ಕಾಯಿಸಿ ಜಳಕ ಮಾಡಿ, ತಮ್ಮ ಸಹೋದರಿಯರಿಂದ ಆರತಿ ಮಾಡಿಸಿಕೊಳ್ಳುವುದು. ನಂತರ ಅಕ್ಕನ ತದಿಗೆಯೆಂದು-ಅಕ್ಕ-ತಂಗಿಯರು ಬಂದು ಹಬ್ಬ ಮಾಡಿಹೋಗುತ್ತಾರೆ. ನಂತರ ಚತುರ್ಥಿಯಂದು ಅಮ್ಮನ ತದಿಗೆ ಎಂದು ಕಳಸ ಪೂಜೆ, ಹೊಸವಸ್ತ್ರ ಇಟ್ಟು ಎಡೆ ಹಾಕಿ ಪಿತೃಪೂಜೆ ನಡೆಸಲಾಗುತ್ತದೆ. ಶಿವನಬುಟ್ಟಿ ಆಕಾಶ ಬುಟ್ಟಿ (ಗೂಡು ದೀಪ) ಗಳನ್ನುಹಚ್ಚಿ, ದೀಪೋತ್ಸವ ಮಾಡುವ ಸಂಭ್ರಮ ಸಮೂಹದ್ದಾಗಿರುತ್ತದೆ.

**ದೀಪಾವಳಿಯ ಮತ್ತೊಂದು ಆಚರಣೆ -> ಪಾಂಡವರು**

ಬಳ್ಳಾರಿ ಭಾಗದಲ್ಲಿ ಕೆರಕನನ್ನು ಹಾಕುವುದಕ್ಕೆ ಪಾಂಡವರು ಎಂದು ಕರೆಯುತ್ತಾರೆ. ಅಂದರೆ ರೈತರು ತಮ್ಮ ನಡುಮನೆಯಲ್ಲಿ ಹಟ್ಟ್ಯವ್ವನನ್ನು ರಚಿಸುವುದರೊಂದಿಗೆ ಸಗಣಿಯಲ್ಲಿ ಗುದಿಪು (ಉಂಡೆ) ಮಾಡಿ ಅದಕ್ಕೆ ಉತ್ತರಾಣಿ, ಮಾಗಿಕಡ್ಡಿ ಚುಚ್ಚಿ, ಹೋಳಿಗೆ ಹಾಕಿ ಪೂಜಿಸುವ ಪದ್ಧತಿಯು ಇದೆ. ಹಾಗೆ ಮನೆ ತಲೆಬಾಗಿಲಿನಿಂದ ದನ ಕಟ್ಟುವ ಹಕ್ಕೆಯವರೆಗೆ ಅರಿಸರ ಒಳಕಲ್ಲು, ಬೀಸೋಕಲ್ಲು, ದೇವರಕೋಣೆ, ಅಡುಗೆ ಕೋಣೆವರೆಗೂ ಸುಣ್ಣದ ತಿಳಿ ನೀರಿನಿಂದ ಎತ್ತಿನ ಹೆಜ್ಜೆ ಹೋಲುವ ಗುರುತುಗಳನ್ನು ಸಾಲಾಗಿ ಮೂಡಿಸುವುದು ಮತ್ತು ಇಲ್ಲೆಲ್ಲಾ ಪಾಂಡವರ ಪ್ರತೀಕವಾಗಿ ಮಾಡಿದ ಸಗಣಿ ಉಂಡೆಗಳನ್ನು ಇಟ್ಟು ಪೂಜಿಸುವ ಸಂಪ್ರದಾಯವಿದೆ.

**ದೀಪಾವಳಿಯ ಆಚರಣೆಯಲ್ಲಿ -> ಅಣು-ಪೀಗಿ**

ಹುಬ್ಬಳ್ಳಿ ಭಾಗದ ಕೆಲ ಹಳ್ಳಿಗಳಲ್ಲಿ ಆಯಾ ಬೀದಿಗಳಲ್ಲಿ ರಗಡೇರ (ಗರಟಿಮಸಿ) ಹುಡುಗರು ರವದಿ (ಜೋಳ)ಗರಿಗಳಿಂದ ಮಾಡಿದ ಕಂತೆ-ಕಟ್ಟಿನ ಗುದ್ದಿನಲ್ಲಿ (ಗೂಡು) ಹಣತೆ ಇಟ್ಟುಕೊಂಡು ಸಂಜೆ ವೇಳೆ ಆಣಿ-ಪೀಣಿ ಪದಗಳನ್ನು ಹಾಡುತ್ತಾರೆ. ಕೆಲವೆಡೆ ಆಪಿನ ಹುಲ್ಲಿನಿಂದ ಹೆಡೆಯಕಾರ ಹೆಣೆದು, ಅದರಲ್ಲಿ ಹಣತೆ ಇಟ್ಟುಕೊಂಡು ಹೋಗುತ್ತಾರೆ) ಮತ್ತೆ ಕೆಲವೆಡೆ ಆ ಮನೆಯ ಹಿರಿಮಗ ಹಿಟ್ಟಿನ ದೀಪದ ಮೇಲೆ ಶಣಗಿ (ಮೊರ) ಮುಚ್ಚಿ ದನಗಳಿಗೆ ದೀಪ ಕಾಣಬಾರದೆಂಬ ನಂಬಿಕೆಯಿಂದ ದನಗಳಿಗೆ ಬೆಳಗುವ ಪದ್ಧತಿ ಇದೆ.

**ಬಯಲು ಸೀಮೆಯಲ್ಲಿ ದೀಪಾವಳಿ ಆಚರಣೆ -> ದೀವಳಿಗೆ ದಂಡು**

ದೀಪಾವಳಿ ಆಚರಣೆಯ ವೈವಿಧ್ಯತೆಯನ್ನು ಪರಿಚಯಮಾಡಿಕೊಡುವ ಹಿನ್ನೆಲೆಯಲ್ಲಿ ಮತ್ತೊಂದು ಸಂಪ್ರದಾಯ ದೀವಳಿಗೆ ದಂಡು, ಅಥವಾ ಭಾಗವಂತಿಕೆ ಮೇಳ. ಇದು ಹಾಸನ ಮಂಡ್ಯ ಭಾಗದಲ್ಲಿ ಒಕ್ಕಲಿಗ ರೈತರಲ್ಲಿ ವಿಶೇಷವಾಗಿ ಕಾಣುವ ಸಂಪ್ರದಾಯ. ಈ ಸಂಪ್ರದಾಯರಲ್ಲಿ ಹಾಡು ಕಣಿತ ಎರಡು ಇರುತ್ತದೆ. ಭಾಗವತರ ಹಾಡಿಗೆ ಕೋಡಂಗಿ ವೇಷದವರು ಕುಣಿದರೆ, ತಮಟೆ ವಾದ್ಯದ ಗತ್ತಿಗೆ ಪಟಾ ಹಿಡಿದವರು ಕುಣಿಯುತ್ತಾರೆ.

**ಬುಡಕಟ್ಟು ಜನಾಂಗಗಳ ದೀಪಾವಳಿ**

ಹಿಂದೂಗಳು ಆಚರಿಸುವ ಪ್ರಮುಖ ಹಬ್ಬಗಳಲ್ಲಿ ದೀಪಾವಳಿ ಹಬ್ಬವು ಒಂದು. ಈ ಹಬ್ಬ ಹೆಸರೆ ಸೂಚಿಸುವಂತೆ ದೀಪಗಳ ಹಬ್ಬ, ಲಕ್ಷ್ಮೀ ಹಬ್ಬ, ನೀರು ತುಂಬುವ ಹಬ್ಬ, ಭರಮನ ಹಬ್ಬ ಹಟ್ಟಿ ಹಬ್ಬವೆಂದು ಕರೆಸಿಕೊಳ್ಳುತ್ತದೆ.

ಅಂದ ಹಾಗೆ ಹಟ್ಟಿ ಹಬ್ಬವೆನ್ನುವುದು ಬುಡಕಟ್ಟಿನವರು ಕರೆಯುವ ದೀಪಾವಳಿ ಹಬ್ಬವಾಗಿದ್ದು, ಹಟ್ಟಿ ಇದು ಸಂಪತ್ತಿನ ಭಂಡಾರ, ಪಶು ಪ್ರಾಣಿಗಳೇ ಈ ಜನರಿಗೆ ಮೂಲ ಸಂಪತ್ತು. ಬದುಕಿನ ನೆಲೆ. ಆದ್ದರಿಂದ ಅವರು ತಮ್ಮ ಸಂಪತ್ತಾಗಿರುವ ಪಶುಗಳನ್ನು ಪೂಜಿಸುವ ಹಿನ್ನೆಲೆಯಲ್ಲಿ ಈ ಹಬ್ಬವನ್ನು ಆಚರಿಸುತ್ತಾರೆ.

ಕರ್ನಾಟಕದ ಉತ್ತರ ಕನ್ನಡ, ಶಿವಮೊಗ್ಗ, ಬೆಳಗಾಂ ಮತ್ತು ಚಿಕ್ಕಮಗಳೂರು ಕಡೆ ವಾಸಿಸುತ್ತಿರುವ ಕಚ್ಚೆ ಗೌಳಿಗರು ಈ ಹಬ್ಬವನ್ನು ದೊಡ್ಡ ಹಬ್ಬ ಹಾಗೂ ಸಣ್ಣ ದೀಪಾವಳಿ ಎಂದು ಎರಡು ರೀತಿ ಆಚರಿಸುತ್ತಾರೆ. ದೊಡ್ಡ ದೀಪಾವಳಿಯು ಆಕಳು ಹಾಗೂ ಎಮ್ಮೆಗಳ ಹಬ್ಬವಾಗಿದ್ದು, ಬಲಿಪಾಡ್ಯದ ದಿವಸ ಹಟ್ಟಿ ಸಗಣಿಯಿಂದ ಸಾರಿಸಿ ಗೋವುಗಳನ್ನು ಮೈತೊಳೆದು ಅಲಂಕರಣ ಮಾಡಿ ಪೂಜಿಸುತ್ತಾರೆ. ನಂತರ ಜನರೆಲ್ಲಾ ಸೇರಿಕೊಂಡು.

''ದಾಗ್ಲಿ ದಿವಾಳಿ ಬನ್ ಬಾವಾಲಾ ವವಾಳಿ

ತೋರ್ಲಿ ದಿವಾಳಿ ಗಾಯ್ ಮಸಿವವಾಳಿ''

ಎಂದು ಹಾಡುತ್ತಾರೆ.

**ಲಂಬಾಣಿಯರಲ್ಲಿ-ದೀಪಾವಳಿ**

ಲಂಬಾಣಿಯರಲ್ಲೂ ಇದೇ ಬಗೆಯ ಆಚರಣೆ ಇದ್ದು ಅಮಾವಾಸೆಯ ದಿನ ರಾತ್ರಿ ತಾಂಡದ ಕೋದು ಹುಡುಗಿಯರೆಲ್ಲಸೇರಿ ತಾಂಡಾದ ನಾಯಕನ ಅನುಮತಿ ಪಡೆದು ಕೈಯಲ್ಲಿ ಹರಳೆಣ್ಣೆಯ ಆರತಿ (ಹಣತೆ) ಗಳನ್ನು ಹಿಡಿದುಕೊಂಡು.

ವರ್ಷೆ ದವಾಳಿ ಕೋಟ ದವಾಳಿ

ಬಾಪುತೋನ ಮೋರಾ

ಎಂದು ಹಾಡುತ್ತಾರೆ. ತಮ್ಮ ಕುಟುಂಬ, ತಮ್ಮ ಸಾಕು ಪ್ರಾಣಿಗಳಾದ ಆಕಳು, ಎತ್ತು ಮುಂತಾದವುಗಳಿಗೆಲ್ಲ ಆರತಿ ದೀಪಾವಳಿ ಬರುವವರೆಗೂ ಮನೆಯಲ್ಲಿ ಎಲ್ಲರೂ ಸುಖ ಸಂಮೃದ್ಧಿಯಿಂದ ಇರುವಂತಾಗಲಿ ಎಂದು ಹಾರೈಸುತ್ತಾರೆ. ನಂತರ ಮಾರನೆ ದಿನ ಹುಡುಗಿಯರು ಸೂರ್ಯ ಹುಟ್ಟುವುದಕ್ಕೆ ಮುಂಚೆ ಹೊಲಕ್ಕೆ ಹೋಗಿ ಅಲ್ಲಿ ಆವರಿಕೆ, ಬಂದರಿಕೆ, ಹೊನ್ನಿಕುಕ್ಕ ಮುಂತಾದ ಹೂಗಳನ್ನು ಸಂಗ್ರಹಿಸಿ, ಮನೆಗೆಬಂದು ಸಗಣಿ ಉಂಡೆಯನ್ನು ಮಾಡಿ ಅದರ ಮೇಲೆ ಈ ಹೂಗಳನ್ನು ಇಟ್ಟು ಪೂಜೆ ಸಲ್ಲಿಸುತ್ತಾರೆ.

ಹಲಸರಿಗೆ ದೀಪಾವಳಿಯಲ್ಲಿ ಬಲೀಂದ್ರನ ಬಲ್ಲಾಳನ ಆರಾಧನೆಯೇ ಆಗಿದೆ. ಇಲ್ಲಿ ಹಾಡುವ ಹಾಡುಗಳಿಗೆ ಬಲ್ಲಾಳನ ಪದಗಳೆಂದು ಕರೆಯುತ್ತಾರೆ. ಈ ಕ್ರಿಯೆಯನ್ನು ಮಣ್ಣಿನ ಇಲ್ಲವೇ ಕಂಚಿನ ಹಣತೆಯನ್ನು ಕೈಯಲ್ಲಿ ಒಡಿದುಕೊಂಡು ಹಟ್ಟಿಯ ಹಲಸರೆಲ್ಲ ಮುಖ್ಯಸ್ಥನ ಮನೆ ಮುಂದೆ ಸೇರಿ ಅಲ್ಲಿರುವ ತುಳಸಿ ಬಲಿಯೇಂದ್ರನ ಪೂಜೆ ನೆರವೇರಿಸಿ.

ಸುದ್ ಮುದ್ರಿಯಾಗಲಿ

ತುಂಬಿತೋಳಾಗಲಿ

ಭಕ್ತಿಕಂಬಾಗಲಿ

.............

ಬಲಿಗೋಂಡ್ರೋ

ಬಲೀಂದ್ರು ದೇವರು

ತಮ್ಮ ರಾಜ್ಯಕ್ಕೆ

ತಾವೇ ಬಂದರು.

ಎಂದು ಹಾಡುತ್ತಾರೆ. ಇದಾದ ನಂತರ ಕೈ ದೀಪಗಳನ್ನು ಹೊತ್ತಿಸಿಕೊಂಡು ಹಾಡುತ್ತ ದೇವಾಲಯ ಹಾಗೂ ಮನೆ ಮನೆಗೆ ಹೋಗಿ ಹಾಡು ಹೇಳುತ್ತಾರೆ. ದೀಪ ಹಚ್ಚುತ್ತಾರೆ. ದೀಪ ಹಚ್ಚುವಾಗ

ದುಪ್ಪಡು ದುಪ್ಪಡು ಹೋಳಿಗೆ

ಕಾಲಕ್ಕೆ ಬರುವ ದೀವಳಿಗೂ

ಹಬ್ಬಕ್ಕೆಂದು ಹೋಳಿಗೆ

ಎಂದು ಹಾಡು ಹೇಳಿ ದೀಪ ಬೆಳಗುವ ಮೂಲಕ ಶುಭ ಹಾರೆಸುತ್ತಾರೆ.

**ಹಾಲಕ್ಕಿ ಒಕ್ಕಲಿಗರಲ್ಲಿ-> ದೀಪಾವಳಿ**

ಉತ್ತರ ಕನ್ನಡ ಜಿಲ್ಲೆಯಲ್ಲಿ ರಾತ್ರಿ ಕೊಪ್ಪದ ಹೆಂಗಸರೆಲ್ಲ ಗೌಡನ ಮನೆಯಲ್ಲಿ ಸೇರಿ ಹಣೆತೆಯ ದೀಪವನ್ನು ತಯಾರಿಸಿ ಜಾಗಟೆ ಬಾರಿಸುತ್ತ ಕೇರಿಯ ಮನೆ ಮನೆಗಳಿಗೆ ಆರತಿ ಕಾಣಿಕೆ ಸ್ವೀಕರಿಸುತ್ತಾರೆ. ಕೆಲವರು ''ದನಬೆಚ್ಚುವ'' ದಿನವೆನ್ನುತ್ತಾರೆ. ಗೊಂದಲಿಗರಲ್ಲಿ ದೀಪಾವಳಿಯ ಆಚರಣೆಯು ಇದೇ ರೂಪದಲ್ಲಿ ಇದ್ದು ಇವರಲ್ಲೂ ಗೋಪೂಜೆ ಮಾಡುವ ಸಂಪ್ರದಾಯವಿದೆ.

ಹೀಗೆ ಕರ್ನಾಟಕದ ಬಹುಪಾಲು ಬುಡಕಟ್ಟಿನ ಸಮುದಾಯಗಳಲ್ಲಿ ದೀಪಾವಳಿ ಹಬ್ಬದ ಆಚರಣೆಯನ್ನು ಪಶು ಆರಾಧನೆ ಹಿನ್ನೆಲೆಯಲ್ಲಿ ಆಚರಿಸುವುದು ಕಂಡು ಬರುತ್ತದೆ.

**ದೀಪವಿರುಸುವುದು-> ದೀಪಾವಳಿಯ ಆಚರಣೆಯಲ್ಲಿ ಒಂದು**

ಬೇವಿನ ಹಟ್ಟಿಯ ಗೊಲ್ಲರು ಕಾರ್ತಿಕ ಮಾಸದ ಅಮಾವಾಸ್ಯೆಯ ಹಿಂದು ಮುಂದಿನ ಸೋಮವಾರ ಅಥವಾ ಗುರುವಾರ ತಮ್ಮ ಹಟ್ಟಿಯ ಜುಂಜಪ್ಪನ ಗುಬ್ಬದ ಮುಂದೆ ಗರುಡಗಂಭದಲ್ಲಿ ದೀಪ ಏರಿಸುತ್ತಾರೆ.

ಈ ದೀಪ ಹಚ್ಚಿದಾಗಿನಿಂದ ಇಳಿಸುವವರೆಗೆ ಹಟ್ಟಿಯ ಎಲ್ಲಾ ಭಕ್ತರ ಮನೆಯಲ್ಲಿ ತಾವಿನ ದೀಪ ಉರಿಯುತ್ತಿರಬೇಕು. ವಾರದ ನಂತರ ದೀಪ ಇಳಿಸಿದಂದು ಗುಡಿಯ ಬಳಿ ನೂರೊಂದು ದೀಪ ಹಚ್ಚುತ್ತಾರೆ. ದೀಪ ಇಳಿಸುವ ದಿನ ಕಿರು ದೀಪಾವಳಿ ಮುಂದೆ ಸಂಕ್ರಾಂತಿವರೆಗೂ ಉರಿಸುವ ದೀಪವನ್ನು ಚಿಕ್ಕ ದೀಪ ಎನ್ನುತ್ತಾರೆ.

**ಚಿಕ್ಕಮಗಳೂರು ಜಿಲ್ಲೆ -> ದೀಪಾವಳಿ ಆಚರಣೆ**

ಮಲೆನಾಡಿನ ಭಾಗದಲ್ಲಿ ಆಚರಿಸುವ ವಿಧಾನವನ್ನೇ ಈ ಭಾಗದ ಜನರು ಆಚರಿಸಿದರೂ ವಿಶೇಷವಾಗಿ ಮಾರನೆ ದಿನವಾದ ಪಾಡ್ಯದ ದಿನ 'ದೇವಿರಮ್ಮ' ಎಂಬ ದೇವಿಗೆ ಎಳ್ಳು ಬೆಲ್ಲದಲ್ಲಿ ತುಪ್ಪದ ಆರತಿಯನ್ನು ಬೆಳಗುತ್ತಾರೆ. ಇದೇ ವಿಶೇಷವಾದದ್ದು, ಆ ದೀನ ಯಾರಾದರೂ ಒಬ್ಬರು ಬೆಳಿಗ್ಗೆಯಿಂದ ಸಂಜೆ ಆರತಿ ಮಾಡುವವರೆಗೂ ಉಪವಾಸವಿದ್ದು ನಂತರ ಆರತಿ ಬೆಳಗಿ ಊಟ ಮಾಡಬೇಕು. ಇದರ ಉದ್ದೇಶ ಭಕ್ತರ ಆಸೆಗಳಿಗೆ, ಕಷ್ಟಗಳಿಗೆ ಪರಿಹಾರ ಸಿಕ್ಕುತ್ತದೆ ಎಂದು ನಂಬಿಕೊಂಡಿದ್ದಾರೆ.

ಹೀಗೆ ಭಾರತದಾದ್ಯಂತ ದೀಪಾವಳಿಯ ವಿಶಿಷ್ಟವಾಗಿ ಸಡಗರದಿಂದ, ಸಂಭ್ರಮದಿಂದ, ಅರ್ಥಪೂರ್ಣವಾಗಿ ಆಚರಿಸುವ ಈ ಹಬ್ಬ ನಾಡಿನಾದ್ಯಂತ, ದೇಶದಾದ್ಯಂತ ಆಚರಿಸುವ ಜಗತ್ ಪ್ರಸಿದ್ಧ ಹಬ್ಬವಾಗಿ ಮೆರೆಯುತ್ತಿದೆ.. ಜನಪದರು ತಮ್ಮ ಈ ಸಂಸ್ಕೃತಿಯನ್ನು ಅದರ ಮಹತ್ವವನ್ನು ಸಾರುತ್ತಲೇ ಮೌಲ್ಯವನ್ನು ಕಟ್ಟಿಕೊಟ್ಟಿದ್ದಾರೆ. .

**ಅಡಿಟಿಪ್ಪಣಿ**

೧. ಕೆ.ವೈ. ನಾರಾಯಣ ಸ್ವಾಮಿ - ನೀರದೀವಿಗೆ ಪು - ೪೪, ೬೮

೨. ಕೆ.ವೈ. ನಾರಾಯಣ ಸ್ವಾಮಿ - ನೀರದೀವಿಗೆ ಪು - ೪೪, ೬೮

೩. ಕೆ.ವೈ. ನಾರಾಯಣ ಸ್ವಾಮಿ - ನೀರದೀವಿಗೆ ಪು - ೪೪, ೬೮

೪. ಕೆ.ವೈ. ನಾರಾಯಣ ಸ್ವಾಮಿ - ನೀರದೀವಿಗೆ ಪು - ೪೪, ೬೮

೫. ಕನ್ನಡ ವಿಷಯ ವಿಶ್ವಕೋಶ, ಜಾನಪದ ದೀಪ ಸಂಸ್ಕೃತಿ (ಲೇ - ನಾಯಕ್ ಎನ್.ಆರ್.) ಪುಟ ೨೪೫

೬. ದೇ.ಜ.ಗೌ, ಜಾನಪದ ಅಧ್ಯಯನ 'ನಂಬಿಕೆಗಳು' ಪುಟ - ೩೨೪, ೩೨೮

೭. ದೇ.ಜ.ಗೌ, ಜಾನಪದ ಅಧ್ಯಯನ 'ನಂಬಿಕೆಗಳು' ಪುಟ - ೩೨೪, ೩೨೮

೮. ದೇ.ಜ.ಗೌ, ಜಾನಪದ ಅಧ್ಯಯನ 'ನಂಬಿಕೆಗಳು' ಪುಟ - ೩೨೪, ೩೨೮

೯. ಡಾ. ಆರ್. ಗಣೇಶ, 'ದೀಪಾವಳಿ ಬೆಳಕು ಗೆದ್ದ ಕಥೆ' (ಕನ್ನಡ ಪ್ರಭಾ ವಿಶೇಷಾಂಕ - ೯೮) ಪುಟ - ೮

೧೦. ಡಾ. ಟಿ. ಗೋವಿಂದರಾಜು 'ದೀಪಾವಳಿ' 'ಕನ್ನಡನಾಡಿನಲ್ಲಿ ಥರಾವಳಿ' (ಉದಯವಾಣಿ - ದೀಪಾಳಿ ವಿಶೇಷಾಂಕ ೨೦೦೦), ಪುಟ - ೪೮,೫೩ (ಉದ್ಧೃತ ಲೇಖನ)

೧೧. ನಂಬಿಕೆ ಆಚರಣೆ, ಸಂಪ್ರದಾಯಗಳ ಸಂಗ್ರಹ.



ಅಧ್ಯಾಯ-೫

## ಹಣತೆ ತಾತ್ವಿಕತೆ

ದೇವರು ಮತ, ಧರ್ಮ, ಭಕ್ತಿ, ತತ್ವ ಮುಂತಾದ ವಿಷಯಗಳು ಪರಸ್ಪರ ಸಂಬಂಧವುಳ್ಳವುಗಳು. ಲೌಕಿಕ ಅಲೌಕಿಕ ಜೀವನದಲ್ಲಿ ಮೋಕ್ಷ ಹೊಂದಬೇಕೆಂಬುದೇ ಇವುಗಳ ಗುರಿ. ಭಗವಂತನ ಮೇಲಿನ ಅತೀವ ಭಕ್ತಿಯೇ ಇದಕ್ಕೆ ಕಾರಣ. ಈ ಭಕ್ತಿ ದೇವರ ಮುಂದೆ ನಿತ್ಯವೂ ಕೂತು ತಪಸ್ಸು ಮಾಡುವುದು ಎಂದು ಭಾವಿಸುವುದಲ್ಲ. ಆ ಭಕ್ತಿ ಬದುಕಿನ ಕಾರ್ಯದೊಂದಿಗೆ ಸಂಬಂಧ ಬೆಸೆದುಕೊಂಡಿರುವಂತದ್ದು. ದೇವರನ್ನು ಕುರಿತ ಸ್ತುತಿಗಳು ಭಾವಪೂರ್ಣವಾದವುಗಳಷ್ಟೇ ಅಲ್ಲ ಮತೀಯವಾದ, ಧಾರ್ಮಿಕವಾದ ಹಾಗೂ ತಾತ್ವಿಕವಾದ ಸಂಗತಿಗಳು ಅನುಭವದಿಂದ ಭಾವ ಸೂಕ್ಷ್ಮತೆಯಲ್ಲಿ ಬೆಳೆದು ರೂಪ ಪಡೆದಂತದ್ದು. ಮನುಷ್ಯನ ಬದುಕಿನಲ್ಲಿ ಮೇಲೆ ತಿಳಿಸಿದ ದೇವರು, ಮತ, ಭಕ್ತಿ, ತತ್ವಗಳು ಹಳೆಯ ಸರಕುಗಳಂತಿದ್ದರೂ ನಿತ್ಯ ಮೌನವಾಗಿ ಬದುಕಿಗೆ ಅಂಟಿಕೊಂಡು ಬಂದಂಥವು. ಮನುಷ್ಯನಲ್ಲಿ ವೈಜ್ಞಾನಿಕ ಮತ್ತು ವೈಚಾರಿಕ ದೃಷ್ಟಿಕೋನಗಳು ಮತ್ತು ಪ್ರಜ್ಞೆಗಳು ವಿಕಾಸವಾದಂತೆಲ್ಲ ಈ ಸರಕುಗಳ ಅನಾವರಣ ವಿಶಿಷ್ಟ ರೀತಿಯಲ್ಲಿ ಬಳಕೆಯಾಗುತ್ತಿರುತ್ತದೆ. ನಿಸರ್ಗದ ಜೊತೆಗಿನ ವ್ಯಾಪಾರ, ಅದರ ಚೇಷ್ಟೆಗಳಿಂದ ಅವನಿಗೆ ಒದಗುತ್ತಿರುವ ಅಪಾಯಗಳು ತನ್ನ ಮುಂದಿನ ಭವಿಷ್ಯಕ್ಕೆ ಎಲ್ಲಿ ಕೊಡಲಿ ಪೆಟ್ಟು ಬೀಳುವದೆಂಬ ಭಯದಲ್ಲಿ ದೇವರು ಧರ್ಮದ ಕಲ್ಪನೆ ಹುಟ್ಟಿಕೊಂಡವು. ಇದಕ್ಕೆ ಅನುಸಾರಿಯಾಗಿ ಮೋಕ್ಷ, ತತ್ವ, ಆದರ್ಶ, ಮೌಲ್ಯಗಳು ಹುಟ್ಟಿಕೊಂಡವು. ಅಂದರೆ ಮನುಷ್ಯನ ಮನಸ್ಸು ಬೆಳೆದಂತೆಲ್ಲ ದೇವರಿಂದ ಮನುಷ್ಯತನವನ್ನು ರೂಪಿಸಿಕೊಂಡ. ಯಾವುದೋ ಲೋಕದಲ್ಲಿರುವ ಶಕ್ತಿಗಳು ತನಗೆ ಒದಗಿದ ಸಮಸ್ಯೆಗಳು ಎಂದು ಪರಿಭಾವಿಸಿ ಅವುಗಳು ತನ್ನ ಬಾಳನ್ನು ನಿಯಂತ್ರಿಸುತ್ತಿವೆಯೆಂದು ಊಹಿಸಿಕೊಂಡು ಅವುಗಳೊಡನೆ ಹೋರಾಟ ನಡೆಸಿ ವಿಫಲವಾದಾಗ ಅವುಗಳ ಪ್ರೀತಿ ವಿಶ್ವಾಸಗಳನ್ನು ಗಳಿಸುವ ಪ್ರಯತ್ನಕ್ಕಿಳಿದ ಅಂದಿನಿಂದ ಇಂದಿನವರೆಗೂ ಮಾನಸಿಕವಾಗಿ ಒಂದು ಹಂತದಲ್ಲಿ ವಿಶಿಷ್ಟವಾಗಿ ರೂಪಿತಗೊಂಡರು. ಮತ್ತೊಂದೆಡೆ ಅವುಗಳನ್ನು ನಿಯಂತ್ರಿಸುವ ಹಿನ್ನೆಲೆಯಲ್ಲಿ ಬಲಿ, ಯಂತ್ರ, ಮಂತ್ರ, ವಿವಿಧ ಆಚರಣೆಗಳು ಮೊದಲಾದ ಪೂಜಾವಿಧಾನಗಳನ್ನು ಬಳಸಿಕೊಂಡ. ಧರ್ಮದ ಸ್ವರೂಪವಾಗಲಿ, ತಾತ್ವಿಕ ಸೂಕ್ಷ್ಮತೆಗಳಾಗಲಿ, ಇವುಗಳನ್ನು ಸಾಮಾನ್ಯವಾಗಿ ಅರಿಯಲು ಸಾಧ್ಯವಿಲ್ಲ.

ದೇವರ ಕಲ್ಪನೆಯಲ್ಲಿಯೇ ಆಧ್ಯಾತ್ಮ, ತತ್ವ, ಧರ್ಮ ಕಾಣುತ್ತಿದ್ದಾನೆ. ಇವುಗಳಿಗೆ ಪೋಷಕವಾಗಿ ನಂಬಿಕೆಗಳು, ಸಂಪ್ರದಾಯಗಳು, ಆಚರಣೆಗಳು ಬಲಪಡಿಸುತ್ತಿವೆ. ಜೊತೆಗೆ ಅವರ ಸಾಹಿತ್ಯ ಅದನ್ನು ವಿಶಿಷ್ಟವಾಗಿ ಪ್ರಕಟಪಡಿಸುತ್ತದೆ.

ಮನುಷ್ಯನು ಬದುಕುವ ರೀತಿ-ನೀತಿಗಳ ಒಳಗೆ ಸಾಹಿತ್ಯ ಅದರ ಆಧಾರ ಸ್ತಂಭವಾಗಿ ನಿಲ್ಲುತ್ತದೆ. ಆ ಸಾಹಿತ್ಯ ಜನ ಸಮೂಹವನ್ನು ಪ್ರತಿನಿಧಿಸುತ್ತಿರುತ್ತದೆ. ಒಂದು ಜನ ಸಮೂಹ ನಂಬಿಕೊಂಡ ಜೀವನ ಮೌಲ್ಯಗಳು, ಆದರ್ಶಗಳು , ತತ್ವಗಳು, ಆಧ್ಯಾತ್ಮ ಇವುಗಳನ್ನೆಲ್ಲವನ್ನು ಅರ್ಥಮಾಡಿಕೊಳ್ಳಲು ಅವರ ಸಂಸ್ಕೃತಿಯ ವಿವಿಧ ಮುಖಗಳ ಪರಿಚಯ ಹೊಂದಲು ಅವರಲ್ಲಿ ಪ್ರಚಲಿತವಿರುವ ಮಾಧ್ಯಮವೇ ಆಧಾರ. ಈ ಮಾಧ್ಯಮವು ತನ್ನದೇ ಆದ ಮೌಲ್ಯಗಳನ್ನು ಹೊಂದಿದ್ದು ಅದನ್ನು ಸಾಹಿತ್ಯದ ಮೂಲಕ ಪ್ರಕಟಪಡಿಸುತ್ತಿರುತ್ತದೆ. ಮತ್ತು ತೀವ್ರತೆಯನ್ನು ತಂದುಕೊಡುವಲ್ಲಿ ಸಾಹಿತ್ಯ ಮತ್ತು ಕಲೆ ತುಂಬಾ ಪರಿಣಾಮಕಾರಿಯಾದ ಪಾತ್ರವಹಿಸುತ್ತದೆ. ಸಾಹಿತ್ಯ ರಚನೆ ಮೌಖಿಕವಾಗಿದ್ದರೂ ಸತ್ವಯುತವಾದದ್ದು. ಉದಾರಹರಣೆಗೆ ''ದೀಪದ ಕೆಳಗೆ ಕತ್ತಲೇ'' ಎಂಬ ಮಾತು ಅರ್ಥಪೂರ್ಣವಾದದ್ದು. ಈ ವಾಕ್ಯದ ಹಿಂದೆ ಮೌಲ್ಯಯುತವಾದ ಅರ್ಥವನ್ನು ತುಂಬಿಕೊಂಡು ಇಂದಿಗೂ ಚಲಾವಣೆಯಲ್ಲಿದೆ. ''ದೀಪದ ಕೆಳಗೆ ಕತ್ತಲೆ'' ಎನ್ನುವುದು ತ್ಯಾಗದ ಸಂಕೇತವಾಗಿದ್ದರೂ, ಇಡೀ ಬದುಕನ್ನು ಅನಾವರಣ ಮಾಡುತ್ತದೆ. ಬತ್ತಿ ತನ್ನನ್ನ ತಾನು ಉರಿಸಿಕೊಳ್ಳುತ್ತ, ಎಣ್ಣೆ ತನ್ನನ್ನ ತಾನು ಖಾಲಿಯಾಗಿಸಿಕೊಳ್ಳುತ್ತ, ಕತ್ತಲೇ ತುಂಬಿದ ಮನೆಗೆ ಬೆಳಕು ನೀಡುವಂತೆ ತನ್ನ ಕೆಳಗೆ ಕತ್ತಲೆ ಮಾಡಿಕೊಂಡು ಇಡೀ ಜಗತ್ತಿಗೆ ಬೆಳಕು ನೀಡುತ್ತದೆ. ಹೀಗೆ ಅವರ ಒಂದೊಂದು ಮಾತುಗಳು ಅರ್ಥಪೂರ್ಣವಾಗಿರುವಂತೆಯೆ ಅವರ ಬದುಕು ಅರ್ಥಗರ್ಭಿತವಾಗಿರುತ್ತದೆ. ಜನಪದರಲ್ಲಿ ಹಣತೆಯು ಒಂದು ಮೌಲ್ಯಯುತವಾದ ವಸ್ತುವಾಗಿದ್ದು, ಈ ಕುರಿತ ತಾತ್ವಿಕತೆಯನ್ನು ಜಗತ್ತಿಗೆ ಸಾರುತ್ತಿದೆ.

ಮನುಷ್ಯನ ಬದುಕಿನಲ್ಲಿ ಯಾವುದೇ ವಸ್ತು ವಿಷಯಗಳಾಗಿರಬಹುದು, ಅದು ತನ್ನದೇ ಆದ ಸಾಂಸ್ಕೃತಿಕ, ಧಾರ್ಮಿಕ ಮಹತ್ವದ ಪರ್ವಕಾಲವಾಗಿರುವಂತೆ ಆಯಾ ಕಾಲ ಧರ್ಮದ ಕ್ರಿಯಾ ಶೀಲತೆಯನ್ನು ಒಳಗೊಂಡಿರುತ್ತದೆ. ಈ ಕ್ರಿಯೆಯನ್ನು ಹಣತೆ ಸಂಸ್ಕೃತಿಯು ಹೊಂದಿದ್ದು, ಈ ಸಂಸ್ಕೃತಿಯು ಆದಿ ಮಾನವನ ಜೊತೆಯಲ್ಲಿ ಹುಟ್ಟಿ ರೂಪುಗೊಂಡು ತನ್ನದೇ ಆದ ಛಾಯೆಯ ಮೂಲಕ ಮೌಲ್ಯವನ್ನು ಕಟ್ಟಿಕೊಳ್ಳುತ್ತ ಇಂದಿನವರೆಗೂ ಉಳಿದು ಬಂದಿದೆ.

ಆದಿಮಾನವ ಬೆಂಕಿಯನ್ನು ಚಕಮಕಿ ಕಲ್ಲಿನಿಂದ ಸೃಷ್ಟಿಸಿಕೊಂಡು ಅದನ್ನು ಶಾಶ್ವತಗೊಳಿಸಿಕೊಳ್ಳಲು ವಿವಿಧ ರೀತಿಯ ಪ್ರಯತ್ನಗಳನ್ನು ತನ್ನ ಭೌದ್ದಿಕತೆಗೆ ತಕ್ಕಂತೆ ರೂಪುಕೊಡುತ್ತ ಬಂದ. ಅಂದಿನಿಂದ ಬೆಂಕಿಯು, ಅಗ್ನಿ, ಕಿಚ್ಚು, ಕೆಂಡ, ಕೊಳ್ಳಿ, ಕಿಡಿ-ಉರಿ, ಧಗೆ, ಸೂರ್ಯ, ಕಾವು, ಸಿಡಿಲು, ಹಣತೆಯಾಗಿ ಸ್ವರೂಪ ಪಡೆದುಕೊಂಡವು. ಈ ಬೆಂಕಿಯು ಮನುಷ್ಯನ ಜೀವನದಲ್ಲಿ ಆವರಿಸಿರುವ ಪ್ರಮಾಣವನ್ನು ಅಳೆಯುವುದು ತುಂಬಾ ಕಷ್ಟಕರವಾದದ್ದು. ಮೇಲಿನ ಎಲ್ಲ ಸ್ವರೂಪಗಳು ಅವನೇ ತನ್ನ ವಿಶಿಷ್ಟ ಸಂದರ್ಭಕ್ಕೆ ತಕ್ಕಂತೆ ಬಳಸಿಕೊಳ್ಳುತ್ತ ಅದರ ಅಸ್ಥಿತ್ವವನ್ನು ನೆಲೆಗೊಳಿಸುತ್ತ ಬಂದಿದ್ದಾನೆ.

ಭಾರತೀಯ ಸಂಸ್ಕೃತಿಯಲ್ಲಿ ಅಗ್ನಿಗೆ ಮಹತ್ವ ಪೂರ್ಣವಾದ ಸ್ಥಾನವಿದೆ. ವೈದಿಕರಲ್ಲಿ ಇಂದ್ರನ ನಂತರದ ಸ್ಥಾನ ಅಗ್ನಿಗೆ ಕೊಟ್ಟಿದ್ದಾರೆ. ದೇವತೆಗಳಿಗೆ ನಿರ್ಮಿತವಾಗುವ ದೀಪವು ಅಗ್ನಿಯ ಮೂಲಕವಾಗಿಯೇ ದೇವತೆಗಳಿಗೆ ತಲುಪುತ್ತದೆಯೆಂಬ ನಂಬಿಕೆ ಇದೆ. ಅಗ್ನಿಯಲ್ಲಿ (ಆವಿಷ್ಕಾರದಿಂದ) ಭೌಮಿತ, ಆಕಾಶ ಮತ್ತು ದಿವ್ಯ ಜೋತಿಗಳೆಂದು ಮೂರು ವಿಧಗಳಿರುತ್ತವೆ ಎಂದು ವೇದಗಳಲ್ಲಿ ಹೇಳಲಾಗುತ್ತದೆ. ಉಗ್ರ ಸ್ವರೂಪದಿಂದ ಕೂಡಿದ ಅಗ್ನಿಗೆ ಸೌಮ್ಯ ರೂಪತಾಳುವುದು ಜ್ಯೋತಿಯ ಮೂಲಕ. ಹಾಗಾಗಿಯೇ ಈ ದೀಪವನ್ನು ಸೂರ್ಯನ ಸಂಕೇತವೆಂದು ಆರಾಧಿಸುವುದನ್ನು ಕಾಣುತ್ತೇವೆ. ದೀಪವು ಬೆಳಕಿನ ಜೊತೆಗೆ ರಕ್ಷಣೆಯನ್ನು ನೀಡುತ್ತದೆ. ''ತಮಸೋಮ ಜ್ಯೋತಿರ್ಗಮಯ'' ಎಂಬ ಉಪನಿಷತ್ ಮಂತ್ರದಿಂದ ಪ್ರಾರ್ಥಿಸುವ ವೈದಿಕರಲ್ಲಿ ಬೆಳಕು ಬೆಂಕಿ ಹೊಳೆಯುವುದು ಎಂಬ ಅರ್ಥಗಳಿಂದ ಹುಟ್ಟಿಕೊಂಡಿದ್ದು. ದೇವರು ಅಂದರೆ ಹೊಳೆಯುವ, ಬೆಳಕಿನವ, ಬೆಂಕಿಯವನೆಂದಂತೆ ದೀಪವೆಂದರೆ ಜೀವವೂ ದೇವರೂ ಆತ್ಮವೂ ವಂಶವೂ ಚಿರಾಯುವಾಗಿ ನಮ್ಮ ಜೀವನದ ಜೀವಾಳವೇ ಆಗಿದೆ. ಹಾಗಾಗಿ ತಮ್ಮ ಜೀವನ ಮೃತ್ಯುವಿನಿಂದ ಅಮೃತತ್ತ್ವದೆಡೆಗೆ ಸಾಗುವ ಜೀವದ ಅಂತರಾಳದ ಹಂಬಲವನ್ನು ಹೊಂದುವರು. ಈ ''ತಮಸೋಮ ಜ್ಯೋತಿರ್ಗಮಯ'' ಎಂಬ ಮಂತ್ರದಲ್ಲಿ ಓ ಭಗವನ್, ನನ್ನನ್ನು ಕತ್ತಲೆಯಿಂದ ಬೆಳಕಿನೆಡೆಗೆ ನಡೆಸು ಎನ್ನುತ್ತ ಎಲ್ಲ ಅಸುರೀ ಶಕ್ತಿ ಅಳಿದು ಅಂತರಾತ್ಮನ ಆಶೋತ್ತರದ ಬೆಳಕಿನ ಬಯಕೆಯಾಗಿದೆ.[೧]

ನಮೋ ಜ್ಯೋತಿ, ಪರಂ ಜ್ಯೋತಿ
ಬಾಳಿನ ತಮವೆಲ್ಲಾ ನೀಗಿ, ಬೆಳಗುಸದಾ
ಶಾಂತಿಗಾಗಿ...............

ಎಂದು ವರ್ಣಿಸುತ್ತಾರೆ. 'ದೀಪಂ ಬ್ರಹ್ಮಸ್ವರೂಪಂ' ತಮಸ್ಸನ್ನು ಅಪಹರಿಸುತ್ತದೆ. ದೀಪದಿಂದ ಸಿದ್ಧಿ ಶಕ್ತಿಗಳನ್ನು ಕೂಡ ಸಾಧಿಸಬಹುದೆನ್ನುತ್ತಾರೆ.

ಇದರಂತೆ ಜನಪದರಲ್ಲಿ ಜ್ಯೋತಿ ಜ್ಯೋತಮ್ಮಳಾಗಿ ಪರಿವರ್ತಿತಳಾಗುತ್ತಾಳೆ. ಜನಪದರು ಸ್ತ್ರೀತತ್ವಕ್ಕೆ ಏರಿಸಿ ದೇವತೆಯಾಗಿಸಿಕೊಂಡವರು. ಅವರಿಗೆ ಪಕೃತಿಯೆ ಹೆಣ್ಣಿನ ರೂಪ ಧರಿಸಿ ನಿಂತಿರುವಂತದ್ದು ಹೆಣ್ಣಾಗಿ ಪ್ರಕೃತಿಯಲ್ಲಿ ಮುಖ್ಯ ಪಾತ್ರವಹಿಸುವಂತದೆಲ್ಲವು ಸ್ತ್ರೀ ರೂಪದಲ್ಲಿಯೇ ಆರಾಧನೆಗೆ ಒಳಪಟ್ಟಿವೆ. ಈ ಹಿನ್ನೆಲೆಯಲ್ಲಿ ಜನಪದರಲ್ಲಿ

ತೌರು ಮನೆಯ ಜ್ಯೊತಿ ತಣ್ಣಾಗೆ ಉರಿಯವ್ವ
ತಣ್ಣೀರಾಗಿ ಮಿಂದು ಮಡಿಯುಟ್ಟು ಬತ್ತೀನಿ
ತಣ್ಣಾಗಿ ಉರಿಯೇ ಜಗಜ್ಯೋತಿ.

ಜನಪದರಲ್ಲಿ ಜ್ಯೋತಿ ಬರೀ ಜ್ಯೋತಿಯಲ್ಲ. ಆಕೆ ಜಗತ್ತಿಗೆ ಬೇಕಾದ ಜಗಜ್ಯೋತಿ. ಶಾಂತಿಯನ್ನು ಕೇಂದ್ರವಾಗಿಟ್ಟುಕೊಂಡು ಜ್ಯೋತಿಯನ್ನು ನಿರ್ಮಿಸುತ್ತಾರೆ. ಜನಪದರಲ್ಲಿ ತಾಳ್ಮೆಯ ಭಾವ ಹೆಚ್ಚು. ಸಹನೆಯಿಂದಲೇ ಎಲ್ಲವನ್ನು ಸಹಿಸಿಕೊಳ್ಳುವ ಮನೋಭಾವ ಬೆಳೆಸಿಕೊಂಡಿರುವಂಥವರು. ತೌರುಮನೆಯ ಜ್ಯೋತಿ ಅಂದರೆ ಒಂದು 'ಮನೆಯ ಒಡತಿ', ಮತ್ತೊಂದೆಡೆ 'ಮನೆಯ ಜ್ಯೋತಿ'. ಈ ಎರಡನ್ನು ಒಂದಕ್ಕೊಂದು ಸಮೀಕರಿಸಿ ಕಟ್ಟಿದ್ದಾರೆ.

ಒಂದು ಮನೆಯ (ಕುಟುಂಬಕ್ಕೆ) ಕಣ್ಣಾಗಿ ಹೆಣ್ಣು ನಿಂತಿರುತ್ತಾಳೆ. ಆ ಮನೆಯ ಅಥವಾ ಆ ಕುಟುಂಬದ ಜ್ಯೋತಿ ಆಕೆ. ಆ ಜ್ಯೋತಿ ಸಮಾಧಾನ, ಶಾಂತಿ, ಸಹನೆ, ತಾಳ್ಮೆಯಿಂದ ಇದ್ದರೆ ಆಕೆಯ ಕುಟುಂಬವು ನೆಮ್ಮದಿಯಿಂದ ಇರುತ್ತದೆ. ಇಲ್ಲದೇ ಹೋದಲ್ಲಿ ಅಶಾಂತಿ ತಲೆದೊರುತ್ತದೆ. ಆ ಮನೆಯ ನೆಮ್ಮದಿಯೇ ನಾಶವಾಗಿ ಕುಟುಂಬ ಅನೇಕ ತಲ್ಲಣಗಳಿಗೆ ಕಾರಣವಾಗಿ ಬಿಡುತ್ತದೆ. ಹಾಗೇ ಮನೆಯ ದೀಪವು ಸಮಾಧಾನದಿಂದ ಉರಿಯಬೇಕು ಅದರ ಉರಿಯುವಿಕೆಯಲ್ಲೂ ಒಂದೊಂದು ಅರ್ಥವಿದೆ. ದೀಪ ಒಣಗಿದರೆ ಸಂಪತ್ತಿನ ವ್ಯಯವಾಗುತ್ತದೆ. ಅದರೊಳಗೆ ಬಿಳಿಯ ಜ್ವಾಲೆ ಹೆಚ್ಚಾದರೆ ಅನ್ನ ನಾಶವಾಗುತ್ತದೆ. ಹಾಗೆ ಅತೀ ಕೆಂಪಾಗಿದ್ದು, ಉರಿದರೆ ಯುದ್ಧದ ಸಂಕೇತವಾಗಿ ಬಹುಬೇಗ ಉರಿದು ಕಪ್ಪಾದರೆ ಮರಣದ ಸಂಕೇತವೆಂದು ನಂಬಿದ್ದಾರೆ. ಹೀಗೆ ಆ ಮನೆಯ ಹೆಣ್ಣು ಮತ್ತು ಜ್ಯೋತಿ ಎರಡೂ ತಣ್ಣಗಿರಬೇಕು ಎಂದು ಕುಟುಂಬದ ಹೆಣ್ಣು ಕಣ್ಣಾಗಿ ಮಿಂದು ಮಡಿಯುಟ್ಟು ತಣ್ಣಾಗಿ ಉರಿಯವ್ವ ಎಂದು ಬೇಡಿಕೊಳ್ಳುತ್ತಾಳೆ.

ಸ್ತ್ರೀ ತ್ಯಾಗದ ಮತ್ತೊಂದು ಪ್ರತೀಕ. ಆಕೆ ಮತ್ತೊಂದು ಮನೆಯ ಬೆಳಕು ಹೌದು. ಹಾಗಾಗಿಯೆ ಮಗು ಹುಟ್ಟಿ ಬೆಳೆದು ದೊಡ್ಡವಳಾಗಿ ಮದುವೆ ಮಾಡಿಕೊಂಡು ಗಂಡನಮನೆಗೆ ಹೋದ ಮೊದಲ ದಿನವೇ ಆಕೆಯನ್ನು ಮನೆತುಂಬುವ ಶಾಸ್ತ್ರವಾದ ಕೂಡಲೇ ದೇವರ ಮನೆಗೆ ಹೋಗಿ ಅಥವಾ ದೇವರ ಮುಂದೆ ಆಕೆಯ ಕೈಯಲ್ಲಿ ತುಪ್ಪದ ದೀಪ ಬೆಳಗಿಸುತ್ತಾರೆ. ಇದರ ಅರ್ಥ ಮನೆ ಸದಾ ಬೆಳಕಿನಿಂದ ಕೂಡಿರಲಿ, ಯಾವುದೇ ಕಷ್ಟಗಳು ಬಾರದೆ ಸುಖ ಸಮೃದ್ಧಿಯಿಂದ ಕೂಡಿರಲಿ ಎಂದು ಬಯಸುತ್ತ ಆ ಮನೆ ಪ್ರವೇಶ ಪಡೆಯುವುದಾಗಿದೆ. ಮತ್ತೊಂದು ಮನೆಯ ಬೆಳಕಾಗುವ ಹೆಣ್ಣನ್ನು ಜನಪದರು ಜ್ಯೋತಿ, ದೀಪ, ಬೆಳಕಿಗೆ ಹೋಲಿಸಿದ್ದಾರೆ, ಹರಸಿದ್ದಾರೆ ಅವರೇ ಹೇಳುವ ಹಾಗೆ,

ಬೆಳಗಾವು ಹೆಚ್ಚಾಲಿ ಬಂದಾನ ತಗ್ಗಾಲಿ
ಕೊಳಗರಲಿ ಹೊನ್ನು ಅಳೆಯಲಿ ತವರ್ಮನೆಯ
ನಡುಮನೆ ಜ್ಯೋತಿ ಉರಿಯಲಿ.

ಹೆಣ್ಣು ಹುಟ್ಟಿದರೆ ಖರ್ಚು ಹೆಚ್ಚು ಎಂದು ಬಾವಿಸುವ ಇಂದಿನ ನಮ್ಮ ಆಧುನಿಕ ಮನಸ್ಕರಲ್ಲಿ ಜನಪದರ ಆಶಯ ಎಷ್ಟರ ಮಟ್ಟಿಗೆ ತುಂಬಿತ್ತು. ಅವರಿಗೆ ಹೆಣ್ಣು ಮಗು ಜನಿಸಿದರೆ ಸಂತೋಷ ಸಂಗತಿ. ಕಾರಣ ಅವಳು ಸೀಮಿತಕ್ಕೆ ಸೇರಿದವಳಲ್ಲ ಅವಳೊಂದು ಹರಿಯುವ ನದಿಯಂತೆ. ಅದಕ್ಕಾಗಿ ಜನಪದರು ''ಬಳಗಾವು ಹೆಣ್ಣಿನಿಂದ ಹೆಚ್ಚಾಲಿ'' ಅಂದರೆ ಹೆಣ್ಣಿನಿಂದ ಮಾತ್ರ ಇದು ಸಾಧ್ಯವಾಗುವಂತದ್ದು. ಇದರಿಂದ ಆಕೆಯ ಸಂಬಂಧ ಒಂದುಕಡೆಯಿಂದ ಮತ್ತೊಂದು ಕಡೆಗೆ ವಿಸ್ತರಿಸುವಂಥದ್ದು. ಇಂಥ ಬಂಧವನ್ನು ಬಂಧಾನ ತಗ್ಗಾಲಿ ಎನ್ನುತ್ತಾರೆ. ತುಂಬಿದ ಮನಸ್ಸಿನಿಂದ ಗಂಡಿನ ಮನೆಗೆ ಹೋಗುವ ಹೆಣ್ಣುಮಗಳು ತನ್ನ ತೌರುಮನೆಯು ಚಿನ್ನವನ್ನು ಕೊಳಗದಲ್ಲಿ ಅಳೆಯುವಂತಾಗಲಿ. ತನ್ನ ಹೆತ್ತವ್ವನನ್ನು ಜ್ಯೋತಿಗೆ ಹೋಲಿಸುತ್ತಾ, ಆಕೆ ಸಂತೋಷದಿಂದ, ಸಮಾಧಾನದಿಂದ, ಪ್ರೀತಿ ವಿಶ್ವಾಸದಿಂದ, ಇರಲಿ ಎಂದು ಹಾರೈಸುತ್ತಾಳೆ.

ಇಂಥ ಮನಸ್ಥಿತಿಯು ಹೆಣ್ಣು ಮಕ್ಕಳಿಗಲ್ಲದೆ ಮತ್ತಾರಿಗೂ ಇರಲು ಸಾಧ್ಯವಿಲ್ಲ. ಅದಕ್ಕಾಗಿ ಕರುಣೆಯ ನಿಧಿಯಾಗಿರುವ ಅವಳನ್ನು ಸಾವಿರ ಕೊಳ್ಳಿ ಇದ್ದರು "ಜ್ಯೋತಿ" ನೀನು. ನಿನ್ನನ್ನು ಹೋಲುವವರು ಯಾರು? ಈ ಭೂಲೋಕದಲ್ಲಿ ಎಲ್ಲಿ ಸಿಕ್ಕಾರು? "ತಾಯಿ" ಭಾರತದಲ್ಲಿ ಜನ್ಮವೆತ್ತಿರು ಶ್ರೇಷ್ಠ ಪದ. ದೇವಲೋಕಕ್ಕೆ ಸಮಾನವಾದ ದೇವರಿಗಿಂತಲೂ ಮಿಗಿಲಾದ ಪದವಾಗಿದೆ. ಈ ತಾಯಿ ತನ್ನ ಜೀವಮಾನವಿಡಿ ಜ್ಯೋತಿಯಂತೆ, ಹಣತೆಯ ತುಂಬ ಪ್ರೀತಿ ತುಂಬಿ ಅಲ್ಲಿ ತನ್ನ ಜೀವನವನ್ನು ಮತ್ತೊಬ್ಬರಿಗಾಗಿ ತ್ಯಾಗಮಾಡಿಕೊಳ್ಳುತ್ತ, ಬೇರೆಯವರ ಸುಖ ಸಂತೋಷಗಳಲ್ಲಿ ತನ್ನ ನೆಮ್ಮದಿ ಕಾಣುತ್ತ ಬದುಕುವ ಶಾಶ್ವತ ಜೀವ ಅದು. ನಮ್ಮಲ್ಲಿ ತಾಯ್ತನದ ವರ್ಣನೆಗೆ ಪದಗಳೇ ಸಾಲದು. ಒಂದು ಹೆಣ್ಣು ಹುಟ್ಟಿದರೆ, ಆಕೆಗೆ ಮಕ್ಕಳಾದರೆ ಮಾತ್ರ 'ತಾಯಿ' ಎಂದು ಹೇಳಬೇಕಿಲ್ಲ. ನಿಜವಾಗಿ ಹೆಣ್ಣು ಮಕ್ಕಳಿಗೆ ಹುಟ್ಟನಿಂದಲೇ 'ತಾಯ್ತನ' ಎನ್ನುವುದು ರಕ್ತಗತವಾಗಿ ನಿತ್ಯನೂತನವಾಗಿ ಹರಿಯುತ್ತಿರುತ್ತದೆ. ಅದು ಯಾವ ಬಂಧನಕ್ಕೆ ಒಳಗಾಗದೆ ಹರಿಯುತ್ತಿರುತ್ತದೆ. ಇಂಥ ತಾಯ್ತನವನ್ನು ಜನಪದರ ವರ್ಣನೆಗೆ ಬಿಟ್ಟರೆ ನಮ್ಮ ಅನುಭಾವಕ್ಕೆ ಸಿಕ್ಕಲಾರವು. ಹಾಗಾಗಿಯೇ "ದೀಪವಿಲ್ಲದ ಮನೆ ರೂಪವಿಲ್ಲ" ಎಂಬ ಗಾದೆಯು ಸೃಷ್ಟಿಗೊಂಡಿದ್ದು ಇದೇ ಹಿನ್ನೆಲೆಯಲ್ಲಿ.

ಅತಿಯಾದ ಜ್ಞಾನವು ನಮ್ಮನ್ನು ಒಮ್ಮೊಮ್ಮೆ ಅಜ್ಞಾನಿಯನ್ನಾಗಿಸಬಹುದು. ಅಥವಾ ಅಜ್ಞಾನಿಯ ಅಜ್ಞಾನವು ಕೆಲವೊಮ್ಮೆ ಉಪಯೋಗಕ್ಕೆ ಬರಬಹುದು. ಒಟ್ಟಾರೆ ಅಜ್ಞಾನವನ್ನು ಪ್ರತಿನಿಧಿಸುವ ಕತ್ತಲು ಕೇಡನ್ನು ಪ್ರತಿನಿಧಿಸುತ್ತದೆ. ಕೇಡು ಅಜ್ಞಾನದ ಕೂಸು. ಕೇಡು-ಹಿತ, ಅಜ್ಞಾನ-ಅರಿವು, ಅತೃಪ್ತಿ-ತೃಪ್ತಿ, ದುಃಖ-ಸುಖ, ಮರಣ-ಅಮರತ್ವ, ಬಂಧನ-�ುಕ್ತಿ ಈ ದ್ವಂದಗಳು ಕತ್ತಲು-ಬೆಳಕಿನ ಪ್ರತೀಕವಾಗಿ ಧ್ವನಿಸುತ್ತವೆ.[೨]

ಕತ್ತಲೆ - ಬೆಳಕುಗಳೆರಡೂ ಅಪರಿಹಾರ್ಯವಾದವು. ಒಟ್ಟೊಟ್ಟಿಗೆ ಇರುವಂಥವು ಎನ್ನುವುದು ಮುಂದಿನ ಬೆಳವಣಿಗೆ. ಈ ಸೃಷ್ಟಿ ಕತ್ತಲು ಬೆಳಕುಗಳ ಸಂಗಮವೆಂದು ಹೇಳಲು ಪದ್ಮಪುರಾಣವು ರೂಪಕವೊಂದನ್ನು ಸೃಷ್ಟಿಸಿದೆ. 'ಲೋಕಾಲೋಕಾಚಲ' ಈ ರೂಪಕದಲ್ಲಿ ಲೋಕ ಎಂದರೆ, ಬೆಳಕು ಅಲೋಕ ಎಂದರೆ ಕತ್ತಲೆ ಎನ್ನುತ್ತದೆ. ಏಕಕಾಲಕ್ಕೆ ಕತ್ತಲು ಬೆಳಕುಗಳೆರಡು ಈ ಬದುಕಿನಲ್ಲಿವೆ ಎಂದು ಕಾಳಿದಾಸ ತನ್ನ ರಘುವಂಶದಲ್ಲಿ ಹೇಳುತ್ತಾನೆ. ಹೀಗೆ ಶಾಸ್ತ್ರ ಗ್ರಂಥಗಳು ಶಿಷ್ಟ ಸಾಹಿತ್ಯಕ್ಕೆ ಅನುಸಾರಿಯಾಗಿ ಕತ್ತಲು ಬೆಳಕಿನ ಹೋರಾಟ ನಡೆದಿದೆ. ಆದರೆ ಜನಪದರಲ್ಲಿ ಹಾಗಿಲ್ಲ. ಅವರು ವಾಸ್ತವವಾದಿಗಳು ಅಂದರೆ ಎಷ್ಟು ಭಾವನ ಜೀವಿಗಳೋ ಅಷ್ಟೇ ವಾಸ್ತವವಾದಿಗಳು ಕತ್ತಲು ಬೆಳಕುಗಳು ಪ್ರಕೃತಿಯ ಸಹಜ ಕ್ರಿಯೆಗಳು, ಈ ಕ್ರಿಯೆಗಳು ಬದುಕಲ್ಲಿ ಆಗುವುದು ಸಹಜ ಆಗ ಧೃತಿಗೆಡದೆ ಧೈರ್ಯದಿಂದ ಜೀವನ ಸಾಗಿಸಬೇಕು. ಒಂದರ್ಥದಲ್ಲಿ ಕತ್ತಲು ಹೇಗೆ ಸ್ಥಿರವಲ್ಲವೋ ಹಾಗೆ ಬೆಳಕೂ ಸ್ಥಿರವಲ್ಲ. ರಾತ್ರಿಹಗಲುಗಳಂತೆ ಕತ್ತಲು ಬೆಳಕುಗಳ ಸ್ಥಾನ ಪಲ್ಲಟದ ಆಟ ನಿಸರ್ಗ ಸಹಜವಾದದ್ದು. ಈ ಬದುಕಲ್ಲಿ ಕತ್ತಲು ಬಯಸದಿದ್ದರೂ ಅದು ತಪ್ಪಿದ್ದಲ್ಲ. ಈ ಜಗತ್ತು ಒಮ್ಮೊಮ್ಮೆ ಕತ್ತಲು ಬೆಳಕುಗಳ ದ್ವಂದ್ವವಾಗಿರುತ್ತದೆ. ಬೆಳಕಿನ ಏಕೋಭಾವವಾದ ಪರಮಾರ್ತ ದ್ವಂದ್ವರಹಿತ. ಅದು ಶಾಶ್ವತ ತೇಜೋ ಘನ ಎನ್ನುವುದು ಭಾರತೀಯ ದರ್ಶ. ದ್ವಂದ್ವರಹಿತವಾದ ಶಾಶ್ವತ ಬೆಳಕಿಗಾಗಿ ಹುಡುಕಾಟ ಅನಾದಿ ಕಾಲದಿಂದ ನಡೆದು ಬಂದಿದೆ. [೩]

ಜನಪದರು ತಮ್ಮ ಬದುಕನ್ನು ತಮ್ಮ ಇಷ್ಟಕ್ಕೆ ಬಂದಹಾಗೆ ರೂಪಿಸಿಕೊಂಡವರಲ್ಲ. ಅವರು ಬಂದ ಬದುಕನ್ನು ಸ್ವೀಕರಿಸಿ, ಅದರಲ್ಲಿ ಸುಖ, ದುಃಖ, ನೋವು, ನಲಿವು, ಕಷ್ಟ, ಸಂತೋಷ ಎಲ್ಲವನ್ನು ಸಮವಾಗಿ ನೋಡುವಂತವರು. ತಮಗೆ ಸರಿ ಎನ್ನಿಸಿದ ನಿರ್ಧಾರ ಮಾಡದೆ, ಸಮೂಹದಲ್ಲಿ ಇಟ್ಟು ಅದನ್ನು ಸ್ವೀಕರಿಸುವ ಮನೋಭಾವ ಹೊಂದಿದವರು. ಸಮೂಹಕ್ಕೇ ಒತ್ತುಕೊಟ್ಟಿದ್ದರಿಂದಲೆ ಅವರಲ್ಲಿ ಸಾಹಿತ್ಯ, ಕಲೆ, ವೈದ್ಯ, ಸಂಪ್ರದಾಯ, ಆಚರಣೆ, ಜ್ಞಾನ ಬೆಳಕಿಗೆ ಬಂದದ್ದು. ಆದರೂ ಅವರು ಜೀವನವನ್ನು ಹಗುರವಾಗಿ ತೆಗೆದುಕೊಂಡವರಲ್ಲ. ಜವಾಬ್ದಾರಿಯುತವಾದ ಬದುಕು ಅವರದಾಗಿತ್ತು. ಯಾವುದಕ್ಕೂ ಪಲಾಯನವಾದಿಗಳಾಗದೇ ಯಾವುದೇ ಕಪಟತನ, ಮೋಸತನಗಳಿಲ್ಲದೆ ನಿರ್ಲಜ್ಜೆಯಿಂದ ಬದುಕಿದವರು. ಅವರ ಪ್ರಕಾರ "ಜ್ಯೋತಿ ಉರಿದ ಮನೆ ನೀತಿ ಹೆಚ್ಚು". ಯಾವ ಕುಟುಂಬದಲ್ಲಿ ಜ್ಯೋತಿ ಬೆಳಗುತ್ತಿರುತ್ತದೆಯೋ ಆ ಮನೆಯ ವ್ಯಕ್ತಿಗಳು ತುಂಬುವ್ಯಕ್ತಿತ್ವವುಳ್ಳವರು, ಅವರಿಂದಲೆ ತಮಗೆ ತಮ್ಮ ಬದುಕಿಗೆ ಬೇಕಾದ ನೀತಿವುಳ್ಳವರು ಎಂದು ನಂಬಿದ್ದರು. ಹಾಗಾಗಿಯೇ ಮಲೆನಾಡ ಭಾಗದಲ್ಲಿ ಜ್ಯೋತಿಯನ್ನು ನೀತ್ಯುಳ್ಳ ಜ್ಯೋತಿ ನಡೆಮುಂದೆ ಎಂದು ಹಾಡುತ್ತ, ಬಲಿಪಾಡ್ಯಮಿಯ ದಿನದಿಂದ ಮೂರುರಾತ್ರಿಗಳಲ್ಲಿ ಊರಿನ (ಉತ್ಸಾಹಿ) ತರುಣರು ಸಾಂಪ್ರದಾಯಕವಾಗಿ ಪೂಜೆಮಾಡಿ ಹಚ್ಚಿಕೊಂಡ ಜ್ಯೋತಿಯನ್ನು ಮನೆಯಿಂದ ಮನೆಗೆ ಒಯ್ದು ಮುಟ್ಟಿಸಿ ಹಾಡುವ ಪದ್ಧತಿ ಇದೆ. ಇದನ್ನು ಅಂಟಿಗೆ-ಪಂಟಿಗೆ ಸಂಪ್ರದಾಯ ಎಂದು ಕರೆಯಲಾಗುತ್ತದೆ. ಕೆಲವು ಕಡೆ ಹಬ್ಬ ಹಾಡುವುದು, ಜ್ಯೋತಿ ಕೊಡುವುದು, ದೀಪ ನೀಡುವುದು ಎನ್ನುತ್ತಾರೆ.

ಮಲೆನಾಡಿನ ಜನರು ದೇವರಿಗೆ ಭಕ್ತಿಯಿಂದ ಪೂಜೆ ಸಲ್ಲಿಸಿ ಉರಿಯುತ್ತಿರುವ ದೇವರ ನಂದಾದೀಪದಿಂದ ಜ್ಯೋತಿಗಳನ್ನು ಹೊತ್ತಿಸಿಕೊಳ್ಳುತ್ತಾರೆ. ಜ್ಯೋತಿ ಹಚ್ಚುವ ಪದ ಅಲ್ಲಿಗೆ ಆರಂಭಿಸಿ ತಮ್ಮ ಜ್ಯೋತಿ ಸತ್ಯದಿಂದ, ಆಯದಿಂದ, ಒಪ್ಪದಿಂದ ಉರಿಯುವಂತೆ ಪ್ರಾರ್ಥಿಸಿಕೊಳ್ಳುತ್ತಾರೆ.

"ಅಂದುಳ್ಳ ಜ್ಯೋತಿ ನಡೆ ಮುಂದೇ
ಅಂದುಳ್ಳ ಜ್ಯೋತಿ ನಡೆಮುಂದೆ ನಡೆದಾರೆ
ನಿನ್ನಿಂದೇ ನಾವು ಬರುತ್ತೇವೆ."

ಮಲೆನಾಡ ಅಂಟಿಗೆ ಪಂಟಿಗೆಯ ಸಾಲುಗಳಾದ ಈ ಪದ್ಯ ಜ್ಯೋತಿಯ ಮಹತ್ವ ಸಾರುವಂಥದ್ದು. ಜ್ಯೋತಿ ಯಾವಾಗಲೂ ಇರುವಂಥದ್ದು. "ಅಂದುಳ್ಳ" ಎಂದರೆ ಹಿಂದಿನಿಂದಲೂ ಬಂದಂಥ ಈ ಸಂಪ್ರದಾಯ ಮತ್ತು ನಂದದ ದೀಪ. ಅಂದು, ಇಂದು, ಎಂದೆಂದಿಗೂ ಶಾಶ್ವತವಾಗಿ ಉಳಿಯುವಂಥದ್ದು. ಹಾಗಾಗಿ ಅಂದಿನಿಂದ ಇಂದಿನವರೆಗೂ ನೀನು ನಡೆದ ಹಾದಿಯಲ್ಲಿ ನಾವು ಸಾಗುತ್ತೇವೆ. ಹಾಗಾಗಿಯೇ ಅಂದುಳ್ಳ ಜ್ಯೋತಿ ನಡೆಮುಂದೆ. ನಿನ್ನಿಂದೇ ನಾವು ಬರುತ್ತೇವೆ. ಅಂದರೆ ಸತ್ಯ, ಧರ್ಮ, ಕಾಯಕದ ಹಿನ್ನೆಲೆಯಲ್ಲಿ ನಾವು ನ್ಯಾಯ-ನೀತಿಗಳನ್ನು ಅನುಸರಿಸುತ್ತ ಪ್ರಾಮಾಣಿಕವಾಗಿ ಬದುಕುತ್ತ ಮತ್ತೊಬ್ಬರಿಗೆ ನೆರವಾಗುತ್ತ ಬದುಕುತ್ತೇವೆ ಎಂದು ಜ್ಯೋತಿಯಲ್ಲಿ ಪ್ರಾರ್ಥಿಸಿಕೊಳ್ಳುತ್ತಿದ್ದಾರೆ. ಆದ್ದರಿಂದ;

ಮಣ್ಣಲಿ ಹುಟ್ಟೋಳೆ ಮಣ್ಣಲಿ ಬೆಳೆಯೋಳೆ
ಮಣ್ಣಲಿ ಕಣ್ಣಾ ಬಿಡವೋಳೆ ಜಗಜ್ಯೋತಿ
ಸತ್ಯದಿಂದುರಿಯೇ ನಮಗಾಗಿ

ಎಂದು ಬೇಡಿಕೊಳ್ಳುತ್ತಿದ್ದಾರೆ. ಹೀಗೆ ಮುಂದುವರಿಯುತ್ತ ಬದುಕು ಬೆಳಕು ಎರಡು ಎಷ್ಟು ಮುಖ್ಯ. ಈ ಬದುಕಿನಲ್ಲಿ ಕತ್ತಲೆ-ಬೆಳಕು ಎಂಬುದು ಮೂಲಭೂತ ಅಗತ್ಯಗಳಲ್ಲಿ ಒಂದಾಗಿದೆ. ಈ ಕತ್ತಲಿನಿಂದ ಬೆಳಕಿನೆಡೆಗೆ ಸಾಗುವ ಆಶಯ ಪುರಾಣ ಪೂರ್ವ ಕಾಲದಿಂದಲೇ ಕಾಣುತ್ತದೆ. ಈ ಕತ್ತಲು ಬೆಳಕಿನ ನಡುವೆ ಲೌಕಿಕ-ಅಲೌಕಿಕತೆಯ ಮಿಶ್ರಣವನ್ನು ನೋಡಬಹುದು. ಕತ್ತಲಿನಿಂದ ಬೆಳಕಿನೆಡೆಗೆ ಸಾಗುವ ಒಂದು ರೂಪಕವು ಅಜ್ಞಾನದಿಂದ ಜ್ಞಾನಕ್ಕೆ ಸಾಗುವುದನ್ನು ಸಂಕೇತಿಸುತ್ತದೆ. ಜ್ಞಾನವು ಆನಂದಕ್ಕೆ ಕಾರಣವಾದರೆ ಅಜ್ಞಾನವು ದುಃಖಕ್ಕೆ ಕಾರಣವಾಗುತ್ತದೆ. ಹಾಗಂದ ಮಾತ್ರಕ್ಕೆ ಅತೀಯಾದ ಜ್ಞಾನವೇ ಆಗಲಿ, ಅತಿಯಾದ ಅಜ್ಞಾನವೇ ಆಗಲಿ ಒಳ್ಳೆಯದು-ಕೆಟ್ಟದ್ದು ಎಂಬ ನಿಲುವಿಗೆ ಬರುವುದು ತಪ್ಪಾಗುತ್ತದೆ.

ದೀಪವು ಜ್ಞಾನ, ಸತ್ಯ, ನೈರ್ಮಲ್ಯ ಹಾಗೂ ತತ್ವಗಳ ಸಂಕೇತ. ದೀಪ ದಾನ ಮಾಡುವುದು ಕತ್ತಲೆಗೆ ಮದ್ದು ಇದ್ದ ಹಾಗೆ. ಆಕಾಂಕ್ಷೆಗಳಿಂದ ತುಂಬಿರುವ ಹೃದಯದ ಅಂಧಕಾರಕ್ಕೆ ದೀಪದ ಬೆಳಕು ರಾಮಬಾಣ ಇದ್ದ ಹಾಗೆ. ನಮ್ಮ ಹೃದಯವು ಹಣತೆ ಇದ್ದಹಾಗೆ ಅದರಲ್ಲಿ ಪರಮಾತ್ಮನು ಬತ್ತಿಯಾಗಿಯೂ ತದನುಗ್ರಹ ಎಣ್ಣೆಯಾಗಿಯೂ ಸ್ಥಿರವಾಗಿಯೂ ಇವೆ. ಚಿಂತನೆ ಎಂಬ ಅಗ್ನಿಯನ್ನು ಜ್ವಲಿಸಿ ಆ ಬತ್ತಿಯನ್ನು ಬಳಸಿದರೆ ಜ್ಞಾನದೀಪ ಪ್ರದೀಪವಾಗುತ್ತದೆ. ಆದ್ದರಿಂದ ಅಜ್ಞಾನಂಧಾಕಾರ ಮಾಯವಾಗುತ್ತಿದೆ. ಜ್ಞಾನದಿಂದಲೇ ಅಜ್ಞಾನದ ತಿಮಿರ ನಿವೃತ್ತಿಯಾಗುತ್ತದೆ. ಎಂದು "ಕಂಬಳಿ ಆದವಾನಿ" ಗುರುತಿಸುತ್ತಾರೆ.[9] ಇಂಥ ಬೆಳಕನ್ನು ಕುರಿತು ಜನಪದರು ಹೀಗೆ ಅನಾವರಣಮಾಡಿದ್ದಾರೆ. ಅಂದರೆ, ಅವರು ಬದುಕು ಬೆಳಕು ಎರಡು ಬೇರೆಯಾದರು ಒಂದನ್ನೊಂದು ಬಿಟ್ಟಿರಲು ಸಾಧ್ಯವಿಲ್ಲ. ಬದುಕಿಗೆ ಅದರದ್ದೇ ಆದ ಮಹತ್ವವಿದೆ. ಬೆಳಕಿಗೆ ಬದುಕಿಗಿಂತ ಹೆಚ್ಚಿನ ಮಹತ್ವ ಲಭಿಸಿದೆ. ಈ ಹಿನ್ನೆಲೆಯಲ್ಲಿ

"ಬೆಳಕು ಬಾಳುತಿರಲಿ ಬಾಳು ಬೆಳಕಾಗಿರಲಿ  
ಹೂ ಬೆಳಗಾಗ ತೆರನಂತೆ ಬಾಳಿರಲಿ  
ಬೆಳಕಿಗರಳುವ ಹೂವಾಗಿ....."

ಎನ್ನುತ್ತಾರೆ. ಬದುಕಿನ ಕೇಂದ್ರೀಕರಿಸುವ ಈ ಹಾಡು ಒಂದು ಮಹತ್ವ ಪೂರ್ಣವಾದ ಜೀವನದ ಸೊಗಡನ್ನೇ ಕಟ್ಟಿಕೊಟ್ಟಿದೆ. ಸಂಸಾರದಲ್ಲಿದ್ದುಕೊಂಡು ಸಂಸಾರದ ವ್ಯಾಮೋಹ, ಆಶೆ, ಆಮಿಶಗಳಿಗೆ ಬಲಿಯಾಗದೆ ವಿಚಾರವಂತರಾಗಿ ಕ್ರಿಯಾಶೀಲರಾಗಿ ಆಧ್ಯಾತ್ಮಿಕ ಪ್ರಜ್ಞೆಯನ್ನು ಬೆಳಸಿಕೊಂಡವರು ನಮ್ಮ ಜನಪದರು. ಬದುಕಿನ ಬೆಳಕು ಬೆಳಕಿನ ಬದುಕಿನ ಬಗ್ಗೆ ಅವರಿಗಿರುವ ಕಾಳಜಿಯನ್ನು ಎತ್ತಿಹಿಡಿದಿದ್ದಾರೆ. ಇಲ್ಲಿ ಬೆಳಕಿಗೂ ಕೂಡ ಬಾಳಿದೆ ಎಂಬುದನ್ನು ಸಾಂಕೇತಿಸುವ ಮೂಲಕ ಅರಳುವ ಕ್ರಿಯೆಗೆ ಪರಿಮಳದ ಪ್ರತಿಮೆಯನ್ನು ಸಾಕ್ಷೀಕರಿಸಿದ್ದಾರೆ.

ಆಚಾರಕರಸಾಗು ನೀತಿಗೆ ಪ್ರಭುವಾಗು  
ಮಾತಿನಲಿ ಚೂಡಾಮಣಿಯಾಗು ನನ ಕಂದ  
ಜ್ಯೋತಿಯೆ ಆಗು ಜಗಕ್ಕೆಲ್ಲ.

ಜನಪದರ ಹಾರೈಕೆ, ಆಶಯಗಳು ತುಂಬು ಹೃದಯದಿಂದ ಹರಿದಂಥವು. ಹುಟ್ಟಿದ ಮಗು ಹೇಗೆ ಬೆಳೆಯಬೇಕು ಎಂಬುದನ್ನು ಒಬ್ಬ ತಾಯಿ ಹರಸುತ್ತಿದ್ದಾಳೆ. ಆಕೆ ಮಗು ಆಚಾರಕ್ಕೆ ಅರಸನಾಗಬೇಕೆಂತೆ, ನೀತಿಗೆ ಪ್ರಭುವಾಗಿ, ಮಾತಿನಲಿ ಚೂಡಾಮಣಿಯಾಗಬೇಕಂತೆ. ಈ ಜಗತ್ತಿಗೆ ಜ್ಯೋತಿಯಾಗಿ ಬಾಳಬೇಕಂತೆ. ಇಂಥ ಹಾರೈಕೆಗಳು ಜನಪದರಲ್ಲಿನ ಉದಾತ್ತತೆಯನ್ನು ಸಾರುತ್ತವೆ. ಅಂದರೆ ಮನುಷ್ಯ ಹುಟ್ಟಿ ಬೆಳೆಯುತ್ತ ಅದು ತನ್ನ ಬದುಕಿನಲ್ಲಿ ಆಚಾರ-ವಿಚಾರಗಳನ್ನು ಸರಿಯಾಗಿ ಅಳವಡಿಸಿಕೊಳ್ಳುತ್ತ ಸತ್ಯ ಧರ್ಮದ ನೀತಿಯನ್ನು ಅನುಸರಿಸಿ ಬದುಕು. ಧರ್ಮದ ಒಡೆಯ ನೀನಾಗು, ಮಾತುಗಳು ಚೂಡಾಮಣಿ ಅಂದರೆ ಹರಳಿನಂತೆ ಮುದ್ದಾಗಿ (ಮುಗಿಕೈ) ಸತ್ಯಯುತವಾದ ಮಾತುಗಳನ್ನು ಆಡುತ್ತ ಸಜ್ಜನನಾಗಿ, ನಾಲ್ಕು ಮಂದಿಗೆ ಮಾರ್ಗದರ್ಶಕನಾಗಿ ಬಾಳು ಎಂದು ಹರಸುತ್ತಲೇ, ಜನಪದರು ಬಾಳ ಜ್ಯೋತಿಯಾಗಿ ಬೆಳಗಿರುವುದನ್ನು ಗಮನಿಸುತ್ತೇವೆ. ಇಂಥದ್ದೇ ಮತ್ತೊಂದು ಹರಕೆ

‘‘ಬಾಗಿಲು ತೆಗೆದ ಕೈಗೆ ಭಾಗ್ಯಾದ ಮಳೆ ಬಂದು
ದೀಪಕೊಂಡವರಿಗೆ ದೊರೆ ಪದವಿ ದೊರೆಯಲಿ
ದೀಪ ದೇವರನ್ನು ಕರುಣಿಸಲಿ
ಎಂಬ ಹರಕೆ ಆಶಯಗಳನ್ನು ಜನಪದ ಗೀತೆಗಳಲ್ಲಿ ಕಾಣಬಹುದು.’’

ಜನಪದರಲ್ಲಿ ಕಾಣುವ, ಅತ್ಯಂತ ಮಹತ್ವದ ಸ್ಥಾನ ಪಡೆದಿರುವ ಮತ್ತೊಂದು ವಿಷಯವೆಂದರೆ ‘‘ಆತ್ಮ ಜ್ಯೋತಿ ಪರಿಕಲ್ಪನೆ’’. ಪ್ರಕೃತಿಯಲ್ಲಿ ಹುಟ್ಟಿನ ಕ್ರಿಯೆಯಂತೆ ಸಾವಿನ ಕ್ರಿಯೆಯು ಸಹಜವಾದದ್ದು. ಹುಟ್ಟಿದ ಮೇಲೆ ಸಾಯಲೇಬೇಕು ಎನ್ನುವ ಮಾತು ಸರ್ವೇ ಸಾಮಾನ್ಯವಾದದ್ದು. ಆದರೆ ಸತ್ತ ಮೇಲು ಬದುಕುವುದು ಹೇಗೆ? ಎಂಬ ಪ್ರಶ್ನೆಯನ್ನು ಹಾಕಿಕೊಂಡರೆ ಉತ್ತರ ಹುಡುಕುವುದು ಕಷ್ಟವೇನಲ್ಲ. ಹೌದು ಈ ಜಗತ್ತಿನಲ್ಲಿ ಎಲ್ಲಕ್ಕೂ ಸಾವು ಇದ್ದೇ ಇದೆ. ಆದರೆ ಸತ್ತ ನಂತರವೂ ಉಳಿಯುವಂಥದ್ದು ನೆನಪು. ಈ ನೆನಪು ನಾವು ಬದುಕಿ ಬಾಳಿದ ರೀತಿ-ನೀತಿಗಳ ಮೇಲೆ ನಿಂತಿರುತ್ತದೆ. ಇಂಥ ರೀತಿ-ನೀತಿಗಳನ್ನು ಇಟ್ಟುಕೊಂಡು ಬದುಕಿದವರು ನಮ್ಮ ಜನಪದರು.

ಜನಪದರು ಬದುಕನ್ನು ಪ್ರೀತಿಯಿಂದ ಸಮೀಕರಿಸಿದವರು. ಅಲ್ಲಿ ಬರುವ ಯಾವುದೇ ಕಷ್ಟ-ನೋವು, ನಲಿವು ಸುಖ-ಸಂತೋಷ, ದುಃಖ-ದುಮ್ಮಾನಗಳಿರಬಹುದು ಅವುಗಳನ್ನು ವಾಸ್ತವದಿಂದ ನೋಡಿದವರು. ಈ ಹಿನ್ನೆಲೆಯಲ್ಲಿ ಸಾವನ್ನು ಕೂಡ ತುಂಬಾ ಹತ್ತಿರದಿಂದ ಕಂಡವರು. ಜನಪದರು ದೇಹದ ಬಗ್ಗೆ ವ್ಯಾಮೋಹಗೊಂಡವರಲ್ಲ. ಅವರು ದೇಹವನ್ನು ಪ್ರೀತಿಸಿದ್ದಕ್ಕಿಂತ ಆತ್ಮವನ್ನು ಪ್ರೀತಿಸಿದವರು, ಆರಾಧಿಸಿದವರು. ಇದಕ್ಕೆ ಸಾಕ್ಷಿಯಾಗಿ ಸತ್ತು ಬದುಕಿದವರು ಆರಾಧನೆಗೊಳಗಾದವರ ಪಟ್ಟಿಯನ್ನು ಉದಾಹರಿಸಬಹುದು. (ಸಾಂಸ್ಕೃತಿಕ ನಾಯಕರು, ಬಲಿಯಾದ ಸ್ತ್ರೀಯರು ಇತ್ಯಾದಿ....) ಹೀಗೆ ಜನಪದರು ಸಾವನ್ನು ಸಹಜವಾಗಿ ಕಂಡವರು. ಒಂದರ್ಥದ ವಾಸ್ತವವಾದಿಗಳು. ಜನಪದರಲ್ಲಿ ಯಾರಾದರೂ ಸತ್ತರೆ ಅವರ ಪಕ್ಕ ಹಣತೆಯನ್ನು ಹಚ್ಚುತ್ತಾರೆ. ಹಾಗೆ ಆ ದೀಪವನ್ನು ಹೆಣವನ್ನು ಮಣ್ಣುಮಾಡಿದ ಮೇಲೆ ಮನೆಯಲ್ಲಿ ಹೆಣವಿದ್ದ ಸ್ಥಳದಲ್ಲಿ ಹಣತೆಯನ್ನು ಮತ್ತೆ ಇಡುತ್ತಾರೆ. ಮಣ್ಣುಮಾಡಿ ಬಂದ ಬಂಧುಗಳೆಲ್ಲರೂ

ಸ್ನಾನ ಮುಗಿಸಿ ಆ ದೀಪಕ್ಕೆ ನಮಸ್ಕಾರಮಾಡಿ ಹೋಗಬೇಕೆಂಬ ಸಂಪ್ರದಾಯವನ್ನು ಇಂದಿಗೂ ನಾವು ಕಾಣಬಹುದಾಗಿದೆ. ಹಾಗಿದ್ದರೆ, ಹೀಗೆ ಸತ್ತ ಜಾಗದಲ್ಲಿ ಹಣತೆಯನ್ನು ಇಟ್ಟು ಪೂಜಿಸಲು ಕಾರಣವೇನು? ಎಂದು ಕೇಳಬಹುದು.

ಜನಪದರಲ್ಲಿ ಬೆಂಕಿ ಅಥವಾ ಜ್ಯೋತಿ ಎಂದರೆ ಜೀವವೂ ಹೌದು. ದೇವರೂ ಹೌದು. ಅವರ ಪ್ರಕಾರ ಆತ್ಮವೂ ಎಂದಿಗೂ ಚಿರಕಾಲವಿರಲಿ. ಇದರ ಅರ್ಥ ಈ ಪರ್ವಕಾಲದಲ್ಲಿ ಸಿರಿ ಸಮೃದ್ಧಿಯ ಜೊತೆಗೆ ಪ್ರಾರ್ಥಿಸಬೇಕಾದದ್ದು ಪೂರ್ಣ ಆಯುಷ್ಯವನ್ನು ತುಂಬಿ ಅವನು ಸ್ವರ್ಗದಲ್ಲಿ ನಿಶ್ಚಿಂತೆಯಂದಿರಲಿ ಎಂದು ಪೂಜಿಸುತ್ತಾರೆ. ಹಾಗೆ ದೇಹಕ್ಕೆ ಸಾವೇ ಅಂತ್ಯವೆಂದು ಅವರು ಎಂದಿಗೂ ಭಾವಿಸಿಕೊಂಡಿಲ್ಲ. ಸಾವಿನ ಆಚೆಯ ಜೀವವಿದೆ, ಜೀವನವಿದೆ ಎಂದು ನಂಬಿದವರು. ಈ ಆಚರಣೆಯ ಉಪನಿಷತ್ತಿನಲ್ಲಿ ಹೀಗೆ ಹೇಳಲಾಗುತ್ತದೆ. 'ಮೃತ್ಯೋರ್ಮಾ ಅಮೃತಂಗಮಯ' ಎಂಬ ಮಂತ್ರವನ್ನು ಉದ್ಧರಿಸಲಾಗುತ್ತದೆ. ಅಂದರೆ ಮೃತ್ಯುವಿನಿಂದ ಅಮೃತತ್ತ್ವದೆಡೆಗೆ ಸಾಗುವ ಜೀವದ ಅಂತರಾಳದ ಹಂಬಲ. ಅದಕ್ಕಾಗಿಯೇ ದೀಪಾವಳಿ ದಿನದಂದು ಯಮ ದೀಪವಿಟ್ಟು ಮೃತ್ಯುದೇವತೆಯನ್ನು ಸಂಪ್ರೀತಗೊಳಿಸುತ್ತಾರೆ.

ಮೃತ್ಯುವೆನ್ನುವುದು ಯಾರನ್ನೂ ಬಿಡದು. ಮೃತ್ಯುವೇ ಜೀವನದ ಮುಂದುವರಿಕೆಯ ಭಾಗ ಕೂಡ. ಈ ಮೃತ್ಯುವಿನ ಕಾಲಕ್ಕೆ ಅಸಹ್ಯವಾದ ರೋಗ ರುಜಿನಗಳಿಂದ ದೆಹಪೀಡೆಯಾಗದೆ, ಶ್ರಮಕ್ಕೀಡಾಗದೆ, ಬುದ್ಧಿ ಹೀನರಾಗದೆ ಸುಖವಾಗಿ ಸಹಜವಾಗಿ ಆಗಲೆಂದು ಯಮಧರ್ಮರಾಜನಲ್ಲಿ ಪ್ರಾರ್ಥನೆ ಮಾಡುತ್ತಾ ಸ್ವರ್ಗಕ್ಕೆ ದಾರಿದೀಪವಾಗಿಸು ಎಂದು ಬೇಡಿಕೊಳ್ಳುತ್ತಾರೆ.[೫]

ಒಟ್ಟಾರೆ ಅಜ್ಞಾನಾಂಧಕಾರವನ್ನು ತೊಲಗಿಸಿ ಜ್ಞಾನ ಜ್ಯೋತಿಯನ್ನು ಬೆಳಗಿಸಿ, ನಿತ್ಯಾ ನಿತ್ಯ ವಸ್ತು ವಿವೇಕ ಜ್ಞಾನಿಗಳಾಗಿಯೆಂದು ಯಮಧರ್ಮ ಆಶೀರ್ವಧಿಸುತ್ತಾನೆ. ಬೆಳಕಿಲ್ಲದೆ ಬಾಳಿಲ್ಲ. ಎಲ್ಲರ ಆರಾಧನೆಯು ಆಚರಣೆಯೂ ಬೆಳಕಿನ ಸಮ್ಮುಖದಲ್ಲಿ ಜರುಗುವುದು. ಮೃತ್ಯುವಿನಿಂದ ಸತ್ತಿನೆಡೆಗೆಂದರೂ ಬೆಳಕಿನೆಡೆಗೇ ಪಯಣ ಎನ್ನುತ್ತ ಜೀವನದ ಬೆಳಕೇ ಸತ್ಯ, ಹೀಗಾಗಿ ಈ ಎಲ್ಲ ಮುಖವನ್ನು ಒಳಗೊಂಡು ಹಣತೆಯು ದೇದೀಪ್ಯಮಾನವಾಗಿ, ಆಪ್ಯಾಯಮಾನವಾಗಿ ಬೆಳಗುತ್ತಿದೆ. ಹಾಗಾಗಿಯೇ ಅದು ತಮಸೋಮ ಜ್ಯೋತಿರ್ಗಮಯ.....[೬]

ನಮಗೆಲ್ಲ ತಿಳಿದಿರುವ ಗಾಯತ್ರಿ ಮಂತ್ರದಲ್ಲಿ ''ಓ ಭಗವಂತನೆ, ನನ್ನನ್ನು ಕತ್ತಲೆಯಿಂದ ಬೆಳಕಿನೆಡೆಗೆ ನಡೆಸು. ಎಲ್ಲ ಅಸುರೀಶಕ್ತಿ ಅಳಿದು ಅಂತರಾತ್ಮನ ಆಶೋತ್ತರದ ಬೆಳಕಿನ ಬಯಕೆ'' ಎಂದಿದೆ. ಎಲ್ಲರ ಜೀವನದ ಕೊನೆಯ ಆಶಯ ಉಜ್ವಲವಾಗುವುದು. ಇಲ್ಲಿ ಉಜ್ವಲವಾಗುವುದು ಎಂದರೆ ಬೆಳಕು. ಅದೇ ಆತ್ಮ ಜ್ಯೋತಿ, ಜ್ಞಾನ ಜ್ಯೋತಿ ದೀಪವು ಹೇಗೆ ತಾನುರಿದು ಬೆಳಕಾಗುವುದು ಜೀವನವೂ ಹಾಗೆಯೇ ಹಾಗಾಗಿಯೇ ''ಜ್ಯೋತಿಷಾಂ ಜ್ಯೋತರುತ್ತಮಮ್'' ಎಂದು ಹೇಳಲಾಗಿದೆ.

**ಅಡಿಟಿಪ್ಪಣಿ**


೧. ಕನ್ನಡ ವಿಷಯ ವಿಶ್ವಕೋಶ 'ಜಾನಪದ' 'ದೀಪ ಸಂಸ್ಕೃತಿ', (ಲೇ ನಾಯಕ್ ಎನ್.ಆರ್) ಪುಟ - ೨೪೫.

೨. ಡಾ. ಶ್ರೀರಾಮ ಭಟ್ಟ, 'ಬೆಳ್ಗೊಡೆಯಡಿ ರಾರಾಜಿಸಿದ ಕತ್ತಲೆ' (ಕನ್ನಡ ಪ್ರಭ ದೀಪಾವಳಿ ವಿಶೇಷಾಂಕ - ೯೮) ಪುಟ ೧೯,೨೦.

೩. ಡಾ. ಶ್ರೀರಾಮ ಭಟ್ಟ, ‘ಬೆಳ್ಗೊಡೆಯಡಿ ರಾರಾಜಿಸಿದ ಕತ್ತಲೆ’ (ಕನ್ನಡ ಪ್ರಭ ದೀಪಾವಳಿ ವಿಶೇಷಾಂಕ - ೯೮) ಪುಟ ೧೯,೨೦.

೪. (ಸಂ) ಡಾ ವೀರಣ್ಣ ದಂಡೆ ‘ದೀಪ ಸಂಸ್ಕೃತಿ’ (ಲೇ - ಕಂಬಳಿ ಆದವಾನಿ) ಪು - ೨೧೯

೫. ಶರ್ಮಾ ತದ್ದಲಸೆ, ‘ಈ ದೀಪ ಬರಿಯ ಬೆಳಕಲ್ಲ’ (ಕರ್ಮವೀರ ದೀಪಾವಳಿ ವಿಶೇಷಾಂಕ - ೨೦೦೬) ಪುಟ - ೨೦೨,೨೦೩



## ಅಧ್ಯಾಯ-೬

## ಉಪಸಂಹಾರ

ಹಣತೆ ಒಂದು ಸಾಂಸ್ಕೃತಿಕ ಅಧ್ಯಯನವಾಗಿ ರೂಪುಗೊಂಡಿದ್ದು ಈ ಪ್ರಬಂಧವು ಜನಪದರ ಆಕರವಾದ ನೆಲ ಸಂಸ್ಕೃತಿಯನ್ನು ಆಧಾರವಾಗಿದ್ದುಕೊಂಡು ಅಧ್ಯಯನ ಮಾಡುವ ಪ್ರಯತ್ನ ನಡೆದಿದೆ. ಈ ಪ್ರಬಂಧವು ಹಣತೆಯ ಮೌಲ್ಯವನ್ನು ಸಾರವಲ್ಲಿ ಜನಪದರ ಅರಿವು ಎಷ್ಟರಮಟ್ಟಿಗೆ ಪ್ರಚುರಗೊಂಡಿತ್ತು ಎಂಬುದನ್ನು ಸಾದರಪಡಿಸುವ ಪ್ರಯತ್ನ ಮಾಡಲಾಗಿದೆ. ಪ್ರಕೃತಿಯನ್ನು ಭೇದಿಸುವ 'ಬೆಂಕಿ'ಯು ತಳೆದಿರುವ ವಿಶಿಷ್ಟ ಸ್ವರೂಪ, ಜೀವನದ ಪ್ರತಿಮೆಯಾಗಿ, ತನ್ನದೇ ಆದ ಮಹತ್ವವನ್ನು ಸಾಧಿಸಿದೆ. ಈ ನೆಲೆಯಲ್ಲಿ ಸಂಸ್ಕೃತಿಯು 'ಪರಂಪರೆ ಸಂಸ್ಕೃತಿ'ಯಾಗಿ ಬೆಳೆದು ಇಂದಿಗೂ ಜೀವಂತವಾಗಿರುವುದರಿಂದ ಇದರ ವಿಶ್ಲೇಷಣೆಯನ್ನು ಮಾಡಲಾಗುತ್ತಿದೆ.

ಹಣತೆ ಬದುಕಿನಲ್ಲಿ ಸಾಕ್ಷಾತ್ಕಾರವನ್ನು ತಂದುಕೊಂಡುವಂಥದ್ದು. ಇದು ಕತ್ತಲು-ಬೆಳಕಿನ ಹೋರಾಟ. ಜೀವನವು ಅಂತೆಯೇ ಕಷ್ಟ-ಸುಖಗಳ ನೋವು-ನಲಿವುಗಳ ಹೋರಾಟ. ಹಾಗಾಗಿಯೇ ಪುರಾತನ ಗ್ರೀಕರು ಮತ್ತು ರೋಮನ್ನರು ಜಗತ್ತಿನ ಸೃಷ್ಟಿಯ ಪ್ರಮುಖ ಅಂಶಗಳಲ್ಲಿ ಬೆಳಕಿನ ಮೂರ್ತ ಆಕರದಲ್ಲಿ ಬೆಂಕಿಯೂ ಒಂದು ಎಂದು ನಂಬಿದ್ದಾರೆ. ದೀಪ ಬೆಳಗಿಸಿ ಆವಾಹನೆ ಮಾಡಿದರೆ ಯಾವ ದೇವರಾದರೂ ಸರಿ ಪ್ರಸನ್ನನಾಗುತ್ತಾನೆ. ಹಾಗಾಗಿ ದೇವರ ಪೂಜೆಗೆ ಕುಳಿತರೆ ಮೊದಲು ದೀಪಕ್ಕೆ ಪೂಜಿಸುತ್ತಾರೆ. ಈ ಕಾರಣದಿಂದಲೇ ಜನಪದರು,

"ದೀಪ ದೇವರನ್ನು ಕರುಣಿಸಲಿ" ಎಂದು ದೀಪದ ಶಕ್ತಿಯನ್ನು ತೋರಿಸಿಕೊಟ್ಟಿದ್ದಾರೆ. ಅಮವಾಸ್ಯೆಯ ಪಿತೃದಿನದ ಹಬ್ಬ ಮಾಡಿ, ಆ ದಿನ ರಾತ್ರಿ ದೀಪ ಬೆಳಗಿಸಿದರೆ ಪಿತೃದೇವತೆಗಳು ಭೂಮಿಗೆ ಇಳಿದು ಬಂದು ತಮ್ಮ ತಂತತಿಯನ್ನು ಆಶೀರ್ವದಿಸಿ ಹೋಗುತ್ತಾರೆ. ತಿಮಿರಾವಳಿಯನ್ನು ತೊಲಗಿಸುವ ದೀಪಾವಳಿಯಿಂದ ಆದಿ ಭೌದಿಕ, ಆಧ್ಯಾತ್ಮಿಕ, ಆದಿ ದೈವಿಕ ಪ್ರಯೋಜನಗಳಿವೆ ಎಂದು ಜನಪದ ಸಾಹಿತ್ಯದಲ್ಲಿ ಸಾಕ್ಷೀಕರಿಸಿದೆ.

ಈಗಾಗಲೇ ತಿಳಿಸಿರುವಂತೆ ಪಂಚಭೂತಗಳ ಪರಿಕಲ್ಪನೆ ಜನಪದರಲ್ಲಿ ಇಲ್ಲ. ಶಿಷ್ಟರಲ್ಲಿ, ಶಿಷ್ಟ ಸಾಹಿತ್ಯದಲ್ಲಿ ಉಲ್ಲೇಖವಾಗಿರುವ ಪಂಚಭೂತ ಪರಿಕಲ್ಪನೆಗೆ ವೇದಗಳು ಆಧಾರವಾಗಿವೆ. ಆದರೆ ನಿಸರ್ಗವನ್ನು ವೈಧಿಕ ಪರಂಪರೆಗಿಂತ ಜಾನಪದ ಪರಂಪರೆ ಭಿನ್ನವಾಗಿ ಪರಿಕಲ್ಪಿಸಿದೆ ಮತ್ತು ಪರಿಶೀಲಿಸಿದೆ. ಜನಪದರಿಗೆ ಪ್ರಕೃತಿಯೇ

ಹೆಣ್ಣು. ಆಕೆ ಸೃಷ್ಟಿಕರ್ತೆ ಎಂದು ನಂಬಿದವರು. ಆದ್ದರಿಂದಲೇ ಅವರು ಬೆಂಕಿಯನ್ನು ಅಗ್ನಿದೇವ, ಜ್ಯೋತಮ್ಮಳಾಗಿ ಪೂಜಿಸುತ್ತಿದ್ದಾರೆ. ಜನಪದರಲ್ಲಿ ಜ್ಯೋತಿ ಹುಟ್ಟಿನಿಂದ ಹಿಡಿದು ಸಾವಿನ ನಂತರದವರೆಗೂ ಪ್ರಮುಖ ಸಾಕ್ಷಿಯಾಗಿ ಮೆರೆಯುತ್ತದೆ. ಇಂಥ ದೈವಿಕರೂಪವಾಗಿ ನೋಡುವ ಜನಪದರಲ್ಲಿ ಆಚರಣಾತ್ಮಕವಾಗಿ, ಸಂಪ್ರದಾಯಾತ್ಮಕವಾಗಿ, ಸಾಂಸ್ಕೃತಿಕವಾಗಿ ನಂಬಿಕೆ, ವಿಧಿ ನಿಷೇಧಾತ್ಮಕವಾಗಿ ಸಾಹಿತ್ಯಕವಾಗಿ ಕುರಿತು ವಿಶ್ಲೇಷಿಸಲಾಗಿದೆ.

**ಜನಪದರಲ್ಲಿ ಹಣತೆಯ ಪರಿಕಲ್ಪನೆ.**

ಈ ಅಧ್ಯಾಯದಲ್ಲಿ ಹಣತೆಯ ಉಗಮ ವಿಕಾಸದ ಕುರಿತು ಚರ್ಚಿಸಲಾಗಿದೆ. ಈ ಮೊದಲು ಎಸ್ಕಿಮೋಗಳು ಹಾಲು ಅಥವಾ ತಿಮಿಂಗಿಲ ಎಣ್ಣೆಯಲ್ಲಿ ನೆನೆಯಿಸಿ ಒಣಗಿಸಿದ ಬತ್ತಿಯಿಂದ ದೀಪಗಳನ್ನು ಬೆಳಗಿಸುತ್ತಿದ್ದರು. ಗ್ರೀಕರು ತಮ್ಮ ಗ್ರೀಕ್ ಪದವಾದ ಲಾಂಪಸ್‌ದಿಂದಲೇ ಲಾಂಪ್ ಬಂದಿದೆನ್ನುತ್ತಾರೆ. ಅಂದರೆ ಕೈಯಲ್ಲಿ ಹಿಡಿದೊಯ್ಯಬಲ್ಲ ಲಾಟೀನು ತಯಾರಿಸಿಕೊಂಡು, ಬಳಸಿಕೊಂಡವರು. ಈ ಮಾದರಿಯ ಲಾಂಪ್ ಇಂದಿಗೂ ಬ್ರಿಟಿಷ್ ಮ್ಯೂಜಿಯಂನಲ್ಲಿದೆ.[೧] ಹೀಗೆ ಸಾಹಿತ್ಯಿಕವಾಗಿ ಮೂಲ ಸಿಕ್ಕರು ಜನಪದರಲ್ಲಿ ಹಣತೆಯು ಸೊಡರು, ಸೊಡ್ಲು ಪ್ರಣತಿ, ಪಣತಿ, ದೀಪ, ಜ್ಯೋತಿ, ದೀವಿಗೆ, ಆರತಿ, ಎಂಬ ಸ್ವರೂಪ ಪಡೆದು ಹುಟ್ಟಿದೆ. ಆದಿವಾಸಿಯರು ಚಕಮಕಿ ಕಲ್ಲಿನಿಂದ ಬೆಳಕು ಪಡೆದು, ಕಾಲಾನಂತರದಲ್ಲಿ ಮಣ್ಣಿನ ಪಾತ್ರೆಗಳಲ್ಲಿ ಹುಲ್ಲಿನಿಂದ ಬೆಸೆದ ಬತ್ತಿಗಳಿಂದ ದೀಪಗಳನ್ನು ಬಳಸುತ್ತಿದ್ದರು. ಅಂದಿನಿಂದ ದೀಪಗಳ ರೂಪ, ನೈಜವಾದ ಕಲೆಗಾರಿಕೆ ಸೃಷ್ಟಿಪಡೆಯಿತು. ರಾಜಮಂದಿರದಿಂದ ಗುಡಿಸಲಿನವರೆಗೆ, ದೇವತಾಗೃಹದಿಂದ ಭೂತಗೃಹದವರೆಗೂ ವಿವಿಧ ದೀಪಗಳು ಬೆಳಗಿಸಲ್ಪಡುತ್ತಿದ್ದವು. ಕಲ್ಲು, ಕಟ್ಟಿಗೆ, ಕಂಚು, ಮರ, ಹಿತ್ತಾಳೆ, ಬೆಳ್ಳಿ, ಬಂಗಾರ ಮೊದಲಾದ ದೀಪಗಳನ್ನು ತಯಾರಿಸಿ ತಮ್ಮ ಹಸ್ತ ಕಲಾ ನೈಪುಣ್ಯತೆಯನ್ನು ಪ್ರದರ್ಶಿಸುತ್ತಿದ್ದರು. ದೀಪಗಳ ಈ ಕಲೆಗಾರಿಗೆ ನೇಪಾಳದಿಂದ ಕನ್ಯಾಕುಮಾರಿವರೆಗೆ ವೈವಿದ್ಯಪೂರ್ಣವಾಗಿ ಗೋಚರಿಸುತ್ತವೆ.

ಉದಾ: ಹಂಸ, ನವಿಲು, ಗಣಪತಿ, ಗರುಡ, ಆಂಜನೇಯ, ನಂದಿ, ಮೊದಲಾದ ರೂಪಗಳಲ್ಲಿ ದೀಪ ಪಾತ್ರೆಗಳನ್ನು ದೀಪದ ಹಣತೆಗಳನ್ನು ತಯಾರಿಸುತ್ತಿದ್ದರು.

ಹಾಗೆ ಹಣತೆಯು, ನೀಲಾಂಜನವಾಗಿ, ದೀವಟಿಗೆ ಯಾಗಿ ಸ್ವರೂಪ ಪಡೆದುಕೊಂಡಿದೆ. ಹೀಗೆ ಹಣತೆಯ ಸ್ವರೂಪ, ಪರಿಕಲ್ಪನೆ ರಚನಾ ವಿನ್ಯಾಸವನ್ನು ಅಭ್ಯಾಸಮಾಡಲು ಅನುವುಮಾಡಿಕೊಳ್ಳಲಾಗಿದೆ.

**ಜನಪದ ಸಾಹಿತ್ಯದಲ್ಲಿ ಹಣತೆ**

ಜನಪದ ಬರೀ ಹಳ್ಳಿಯ ಜಾನಪದವಲ್ಲ, ಇದು ಜಗತ್ತಿನ ಜಾನಪದ. ವಿಶ್ವಮಾನ್ಯತೆಯನ್ನು ಪಡೆದ ಈ ಜಾನಪದವು ಸಮೂಹದಲ್ಲಿ, ಸಮಷ್ಟಿಯಲ್ಲಿ ಮೌಖಿಕವಾಗಿ ಜನ್ಮತಾಳಿದೆ. ಜನಪದರ ಯಾವುದೇ ಪರಿಕರವಿರಬಹುದು ಅದು ಆಕಾರಗೊಂಡಿದ್ದು ಚೌಕ್ಷುಕ ರೂಪ ಪಡೆದುಕೊಂಡಾಗ ಈ ಆಧಾರದಿಂದಲೇ ಇಂದಿನ ಜಾನಪದ ಅಧ್ಯಯನವು ವೈಚಾರಿಕವಾಗಿ ವೈಜ್ಞಾನಿಕವಾಗಿ ವಿಶ್ಲೇಷಣೆ ಪಡಿದುಕೊಳ್ಳುತ್ತಿದೆ. ಆದರೆ ಜನಪದವು ಜಾನಪದ ಆಕಾರವಾಗಿಪಡೆದುಕೊಳ್ಳಲು ಅನೇಕ ವಿದ್ವಾಂಸರು ಅದರಲ್ಲೂ (ಪಾಶ್ಚಾತ್ಯ) ವಿದೇಶಿ ವಿದ್ವಾಂಸರ ಪ್ರಯತ್ನ ಹೆಚ್ಚಾಗಿತ್ತು ಎಂಬುದು ಈಗಾಗಲೇ ತಿಳಿದ ವಿಷಯ. ಇದಕ್ಕೆ ಹಿನ್ನೆಲೆ ಮುನ್ನೆಲೆಗಳು ಬೇರೆ ಇದ್ದರೂ ಅವರ ಮುಲಕವೇ ಜನಪದ ಸಾಹಿತ್ಯ ಬೆಳಕಿಗೆ ಬಂದಿದ್ದು ವಾಸ್ತವದ ಸಂಗತಿ. ಹಾಗಾಗಿ ಜಾನಪದ ವಿದ್ವಾಂಸರ ಕೊಡುಗೆಯ ಫಲವಾಗಿ

ಅವರು ಸಂಗ್ರಹಿಸಿದ ಸಾಹಿತ್ಯವು ಹಣತೆಗೆ ಬೇಕಾದ ಸಾಹಿತ್ಯ ಪ್ರಕಾರಗಳನ್ನು ಆಯ್ಕೆಮಾಡಿಕೊಂಡು ಆಕಾರವಾಗಿ ಬಳಸಿಕೊಳ್ಳಲಾಗಿದೆ. ಈ ಅಧ್ಯಾಯದಲ್ಲಿ ಜನಪದ ಸಾಹಿತ್ಯದ ಪ್ರಮುಖ ಪ್ರಕಾರಗಳಾದ ಗೀತೆ, ಕಥೆ, ಗಾದೆ, ಒಗಟು ಮತ್ತು ಒಡಪುಗಳ ಕುರಿತು ವಿಶ್ಲೇಷಣೆಗೆ ಬಳಸಿಕೊಳ್ಳಲಾಗಿದೆ.

**ಹಣತೆ ಮತ್ತು ಜನಪದರು**

ವೈಧಿಕ ಪರಂಪರೆಯಲ್ಲಿ ಪಂಚಭೂತಗಳ ಪರಿಕಲ್ಪನೆಗಿಂತ ಜನಪದರು ಭೂಮಿ, ಗಾಳಿ, ನೀರು, ಬೆಂಕಿ ಮತ್ತು ಆಕಾಶದ ಜೊತೆ ಅನನ್ಯವಾದ ಸಂಬಂಧವನ್ನು ಪಡೆದುಕೊಂಡವರು. ಹಾಗಾಗಿ ಅವರಿಗೆ ಬೆಂಕಿಯ ಉಪಯುಕ್ತತೆಯ ಆಧಾರದ ಮೇಲೆ, ಅಗ್ನಿ, ಕಿಚ್ಚು, ಕೆಂಡ, ಕೊಳ್ಳಿ ಕಿಡಿ, ಉರಿ, ಧಗೆ ಸೂರ್ಯ, ಕಾವು, ಸಿಡಿಲು, ಜ್ಯೋತ್ಯಮ್ಮ, ದೀವಿಗೆಯಾಗಿ ಬಳಕೆಗೊಂಡಿದೆ. ಅಧ್ಯಯನದ ಹಿನ್ನೆಲೆಯಲ್ಲಿ ಬೆಂಕಿಯನ್ನು ಜ್ಯೋತ್ಯಮ್ಮಳಾಗಿ ಬಳಸಿಕೊಳ್ಳಲಾಗಿದೆ. ಈ ಜ್ಯೋತಿಯ ಮೇಲೆ ಇರುವ ನಂಬಿಕೆ, ವಿಧಿ ನಿಷೇಧಗಳು ಆಚರಣೆ, ಸಂಪ್ರದಾಯಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ ಮತ್ತು ಸಂಗ್ರಹಿಸಲಾಗಿದೆ. ಮತ್ತು ನಮ್ಮ ಸುತ್ತ ಮುತ್ತಲ ಹಿರಿಯರಿಂದ ಮಾಹಿತಿ ಪಡೆಯಲಾಗಿದೆ. ಈ ಅಧ್ಯಯನದಲ್ಲಿ ಜನಪದರು ಜ್ಯೋತಿಗೆ ಎಷ್ಟು ಮಹತ್ವಕೊಟ್ಟಿದ್ದಾರೆ ಮತ್ತು ಅದರ ಶಕ್ತಿಯಿಂದ ತಮ್ಮ ಬದುಕು ಹೇಗೆ ರೂಪಿತಗೊಂಡಿದೆ ಎಂಬ ಹಿನ್ನೆಲೆಯಲ್ಲಿ ಕಟ್ಟಿಕೊಡಲಾಗಿದೆ.

**ಹಣತೆಯ ತಾತ್ವಿಕತೆ**

ಯಾವುದೇ ಮನುಷ್ಯನ ಬದುಕು ಸಾಗಬೇಕಾದದ್ದು ಆದರ್ಶ, ಸತ್ಯ, ಪ್ರಾಮಾಣಿಕತೆ ತತ್ವಗಳ ಹಿನ್ನೆಲೆಯಲ್ಲಿ ಜನಪದರು ಸತ್ಯ, ಆದರ್ಶ, ಪ್ರಾಮಾಣಿಕತೆ, ತತ್ವಗಳನ್ನು ಇಟ್ಟುಕೊಂಡು ಬದುಕಿದವರು. ಅವರು ಮೋಸ, ವಂಚನೆ, ಕಪಟತನವನ್ನು ಅರಿಯದ ಮುಗ್ಧರು. ಎಲ್ಲರನ್ನು ಒಂದೇ ದೃಷ್ಟಿಯಲ್ಲಿ ನೋಡವವರು. ಅವರಲ್ಲಿ ಪ್ರೀತಿಗೆ, ಸಂಬಂಧಕ್ಕೆ, ಆಸೆಗಳಿಗೆ ಮೋಸ ಮಾಡಿಕೊಂಡವರಲ್ಲ. ನಾವು ಜನಪದವನ್ನು ಪುರುಷ ಪ್ರಧಾನ ಹಿನ್ನೆಲೆಯಲ್ಲಿ ನೋಡಿದರು, ಮಾತೃ ಪ್ರಧಾನವನ್ನು ಆರಾಧನೆಯಲ್ಲಿ ನೋಡಿದವರು. ಇವುಗಳಿಗೆ ಕಾರಣಗಳು ಇದ್ದರು, ಆ ಕಾರಣಗಳಿಗಿಂತ ಇಂದಿಗೂ ನಮಗೆ ಸ್ತ್ರೀಯರ ಆದರ್ಶಗಳು, ತ್ಯಾಗಗಳು, ಅವರ ಜೀವನ ವೃತ್ತಾಂತಗಳು ಮತ್ತೆ ಮತ್ತೆ ನೆನಪಿಗೆ ತರುತ್ತಲೇ ಇರುತ್ತವೆ. ಅಂಥ ಬದುಕನ್ನು ಅನುಭವಿಸಿದವರು. ಹಾಗಾಗಿಯೇ ಅವರು ಅನುಭಾವಿಗಳು. ಬದುಕಿನಗೆ ತುಂಬಾ ವಿಶೇಷ ಅರ್ಥಗಳನ್ನು ಕೊಟ್ಟು ಸಹಜವಾಗಿ ಉಂಡವರು. ಅವರಲ್ಲಿ ಶ್ಲೀಲ ಅಶ್ಲೀಲಗಳ ಪ್ರಶ್ನೆಗಳೇ ಇಲ್ಲ. ಎಲ್ಲವು ಸಹಜವಾದದ್ದು. ಹಾಗಾಗಿ ಹುಟ್ಟು ಸಾವಿನ ನಂತರವು ಅವರು ದೀಪಕ್ಕೆ ತಮ್ಮ ಬದುಕಿನಲ್ಲಿ ಎಷ್ಟು ಮಹತ್ವವಿದೆ ಎಂದು ತೋರಿಸಿಕೊಟ್ಟಿದ್ದಾರೆ. ಜ್ಞಾನ ದೀವಿಗೆ ಅವರ ಒಡಲಲ್ಲಿ ಇಟ್ಟುಕೊಂಡು ಅದನ್ನು ಎದೆಯಿಂದಲೆಗೆ ಸತತವಾಗಿ ಹರಿಯುವಂತೆ ಬೆಳಕನ್ನು ಹಚ್ಚುತ್ತಾರೆ. ತಮ್ಮ ಹೃದಯವೆಂಬ ಹಣತೆಯಲ್ಲಿ ದೇವರು ಬತ್ತಿಯಾಗಿಯೂ ಅವನ ಒಲುಮೆಯು ಎಣ್ಣೆಯಾಗಿಯೂ ಸ್ಥಿರವಾಗಿರುವಂತೆ, ತಮ್ಮ ಅನುಭವವೆಂಬ ಅಗ್ನಿಯನ್ನು ತಾಕಿಸಿ ಬೆಳಗಿಸಿದರೆ ಅಲ್ಲಿ ಜ್ಞಾನದ ದೀವಿಗೆ ಜಗತ್ತಿಗೆ ಬೆಳಕು ಚಲುತ್ತಿದೆ ಎಂಬ ಹಿನ್ನೆಲೆಯಲ್ಲೇ ಆತ್ಮಜ್ಯೋತಿ ಪರಿಕಲ್ಪನೆ ಹುಟ್ಟಿಕೊಂಡಿದೆ. ಸಾವು ಜೀವನದ ಒಂದು ಭಾಗ. ಈ ಸಂದರ್ಭದಲ್ಲಿ ಸತ್ತ ವ್ಯಕ್ತಿಯ ತಲೆ ಹತ್ತಿರ ದೀಪ ಹಚ್ಚುತ್ತಾರೆ. ಶವಸಂಸ್ಕಾರದ ನಂತರ ಆ ದೀಪವನ್ನು ನೋಡಿ ಕೈಮುಗಿದು ಹೋಗುತ್ತಾರೆ. ಇದೊಂದು ಸಂಪ್ರದಾಯ ಬದ್ಧ ಆಚರಣೆಯಾಗಿದ್ದು, ಆ ವ್ಯಕ್ತಿಯ ಆತ್ಮ ದೇವರಾಗಿ ಪರಿವರ್ತನೆಗೊಂಡು ನೆಲೆಸಿರುತ್ತದೆ.

ಹಾಗಾಗಿ ಆತನ ಆತ್ಮಕ್ಕೆ ಕೈ ಮುಗಿದು ಹೋಗುತ್ತಾರೆ ಎಂಬ ವಿಶ್ಲೇಷಣೆಯ ನೆಲೆಯನ್ನು ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ.

ಒಟ್ಟಾರೆಯಾಗಿ ಹಣತೆ : ಸಂಕಥನ ಎಂಬ ಶಿರ್ಷಿಕೆಯ ಅಡಿಯಲ್ಲಿ ತಾತ್ವಿಕತೆಯವರೆಗೆ ವ್ಯಾಪ್ತಿಯನ್ನು ಹಾಕಿಕೊಳ್ಳಲಾಗಿದೆ. ಈ ವಿಷಯಕ್ಕೆ ಸಂಬಂಧಿಸಿದಂತೆ ಜನಪದರ ಹಿನ್ನೆಲೆ ಕುರಿತಾದ ಅಧ್ಯಯನಗಳು ಈ ವರೆಗೆ ನಡೆದಿಲ್ಲವಾದ್ದರಿಂದ ಅಧ್ಯಯನಕ್ಕೆ ಆಯ್ಕೆಮಾಡಿಕೊಳ್ಳಲಾಗಿದೆ. ಹಣತೆ:ಸಂಕಥನ ಎಂಬ ವಿಷಯವು ವಿಶ್ವವ್ಯಾಪ್ತಿಯಾದದ್ದು. ಯಾಕೆಂದರೆ ಪ್ರತಿಯೊಂದು ಜನಾಂಗದಿಂದ ಹಿಡಿದು ಪ್ರತಿಯೊಂದು ದೇಶದಲ್ಲೂ ಈ ಕುರಿತಾದ ಆಚರಣೆ, ನಂಬಿಕೆ, ಸಂಪ್ರದಾಯಗಳಿವೆ. ಈ ಮೂಲಕ ಅವರದ್ದೇ ಆದ ತಾತ್ವಿಕತೆಯನ್ನು ಕೊಟ್ಟಿರುತ್ತಾರೆ. ಭಾರತೀಯ ಹಿನ್ನೆಲೆಯಲ್ಲಿ ಧಾರ್ಮಿಕವಾಗಿ ಬಹಳ ವಿಶಿಷ್ಟ ಸ್ಥಾನ ಪಡೆದಿರುವ 'ಹಣತೆಯ ಸಂಕಥನ'ವು ಇನ್ನು ಹೆಚ್ಚಿನ ಅಧ್ಯಯನ ನಡೆಯಬೇಕಾಗಿದೆ.

ಹಣತೆಯ ಪ್ರಾಮುಖ್ಯತೆ ಕುರಿತು ಸಾಹಿತ್ಯದ ಮತ್ತಿತರ ಪ್ರಕಾರಗಳನ್ನು ಸಂಗ್ರಹಿಸಿ ಅಧ್ಯಯನಿಸಬೇಕಾಗಿದೆ. ಹಾಗೆ ಆಚರಣೆ, ನಂಬಿಕೆ, ಸಂಪ್ರದಾಯಗಳ ಕುರಿತು ಸಂಗ್ರಹ ಕಾರ್ಯ ಇನ್ನು ಸಾಗಬೇಕಾಗಿದೆ. ಮತ್ತು ತೌಲನಿಕವಾಗಿ ಚರ್ಚೆ, ವಿಶ್ಲೇಷಣೆ ನಡೆಸುವ ಅಗತ್ಯವಿದ್ದು ತಾತ್ವಿಕತೆಯು ಆಧ್ಯಾತ್ಮಿಕ ಹಿನ್ನೆಲೆಯಲ್ಲಿ ಅಧ್ಯಯನ ನಡೆಯಬೇಕಾಗಿದೆ. ಮುಖ್ಯವಾಗಿ ದೀಪಾವಳಿಯ ಆಚರಣೆಯೂ ಪ್ರಾಂತ್ಯವಾದ ಹಿನ್ನೆಲೆ ಮತ್ತು ಜನಾಂಗದ ಹಿನ್ನೆಲೆಯಲ್ಲಿ ಇನ್ನೂ ಕ್ಷೇತ್ರಕಾರ್ಯ ನಡೆಯಬೆಕಾಗಿದೆ. ಈ ಮೂಲಕ ಹಣತೆ : ಸಂಕಥನವು ಸಮಗ್ರವಾಗಿ ಸಂಕಥನವಾಗಿ ರೂಪಪಡೆಯಲು ಸಾಧ್ಯವಾಗುತ್ತದೆ.

ಒಂದು ಸಂಸ್ಕೃತಿಯ ಅಂಗವಾಗಿರುವ ಹಣತೆಯು ಸಾಮಾಜಿಕವಾಗಿ, ರಾಜಕೀಯವಾಗಿ ಆರ್ಥಿಕವಾಗಿ ಹೇಗೆ ಮಹತ್ವ ಸಾಧಿಸಿದೆ? ಮತ್ತು ಚಾರಿತ್ರಿಕವಾದ ರೂಪವನ್ನು ವಿವರಿಸಬೇಕಾಗಿದೆ. ಹೀಗೆ ಜನಪದರು ಹಣತೆಯನ್ನು ಪ್ರಧಾನವಾಗಿ ಪರಿಗಣಿಸಿ ಹಣತೆಗೆ ಒಂದು ವಿಶಿಷ್ಟವಾದ ಪ್ರಭೆಯನ್ನು ಕಟ್ಟಿಕೊಟ್ಟಿದ್ದಾರೆ. ಈ ಹಿಂದೆ ಧಾರ್ಮಿಕರಣವಾಗಿದ್ದ ಆಚರಣೆ, ಸಂಪ್ರದಾಯಗಳು ಇಂದು ಆಧುನೀಕರಣಗೊಂಡು ಹೊಸ ರೂಪ, ತಿರುವು ಮೌಲ್ಯಗಳನ್ನು ಕಂಡುಕೊಂಡಿದೆ. ಆಧುನಿಕ ಯುಗದಲ್ಲಿ ದೀಪಗಳ ವಿನ್ಯಾಸವು ಬದಲಾಗಿದ್ದು ಆರ್ಥಿಕತೆಯ ಹಿನ್ನೆಲೆಯನ್ನು ಆಧರಿಸಿ ಅದನ್ನೇ ನಂಬಿ ಜೀವನಸಾಗಿಸುವ ನಗರ ಜನಪದರ ಕುರಿತಾಗಿ ಮಾಹಿತಿ ಕಲೆಹಾಕಬೇಕಿದೆ.

ಈಗ ಕಲೆ ಹಾಕಿರುವ ಮಾಹಿತಿಯಲ್ಲಿ ಜನಪದರ ಸಾಂಸ್ಕೃತಿಕ, ತಾತ್ವಿಕ, ಸಾಮಾಜಿಕ ಆಶಯಗಳನ್ನು ವಿಶ್ಲೇಷಿಸುವ ಅವುಗಳ ರಚನೆ, ಪ್ರಯೋಗ, ಸಂದರ್ಭಗಳನ್ನು ಆಧರಿಸಿ ವಿವರಿಸುವ ಪ್ರಯತ್ನಮಾಡಲಾಗಿದೆ.

**ಅಡಿಟಿಪ್ಪಣಿ**

೧. ಸಂ ಡಾ ವೀರಣ್ಣ ದಂಡೆ, 'ದೀಪ ಸಂಸ್ಕೃತಿ' (ಲೇ - ಕಂಬಳಿ ಆದವಾನಿ), ಪುಟ - ೨೨೦.



# ೧. ಗ್ರಂಥಸೂಚಿ

೧. ಆಯ್ದು ಗಾದೆಗಳು, (ಸಂ) ಡಾ.ಶಾಲಿನಿ ರಘುನಾಥ, ಪ್ರ.ಭಾರತೀ ಪ್ರಕಾಶನ, ಸರಸ್ವತೀಪುರಂ ಮೈಸೂರು, ೭೦೦೦

೨. ಉತ್ತರ ಕರ್ನಾಟಕದ ಒಗಟುಗಳು, (ಜಾನಪದ ಸಾಹಿತ್ಯ) (ಸಂ) ಡಾ.ಎಮ್.ಎಸ್.ಲಠ್ಠೆ, ಪ್ರ.ಸತೀಶ ಪ್ರಕಾಶನ, ಕಲಬುರ್ಗಿ, ೧೯೭೪.

೩. ಒಗಟುಗಳು ಸಂಕಲನ, (ಸಂ) ಜಂಜುನೇರ್ಲೆಣ್ಣು ಜಣ್ಣ ಬಿದ್ದಾನೆ, ಮೈಲಹಳ್ಳಿ ರೇವಣ್ಣ, ಎನ್.ಆರ್.ಎ.ಎಮ್.ಎಚ್.ಪ್ರಕಾಶನ ಕೋಟೇಶ್ವರ.ದ.ಕ, ೧೯೯೭

೪. ಒಲುಮೆಯ ಕುಲುಮೆಯಲ್ಲಿ (ಸಂ) ಬಿ.ವಿ.ವಸಂತಕುಮಾರ್, ಪ್ರ.ನೇಕಾರ ಪ್ರಕಾಶನ ಗುರುಮಂದಿರ ರಸ್ತೆ ಸೊರಬ, ೨೦೦೫

೫. ಒಗಟುಗಳು (ಸಂ) ಎಚ್.ಜೆ.ಲಕ್ಕಪ್ಪಗೌಡ, ಪ್ರ.ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೩೬. ಕನ್ನಡ ಜಾನಪದ ವಿಶ್ವಕೋಶ, (ಸಂ) ಚಂದ್ರಶೇಖರ ಕಂಬಾರ, ಪ್ರ.ಕನ್ನಡ ಸಾಹಿತ್ಯ ಪರಿಷತ್ತು

೬. ಕನ್ನಡ ಜಾನಪದ ವಿಶ್ವಕೋಶ, (ಸಂ) ಚಂದ್ರಶೇಖರ ಕಂಬಾರ, ಪ್ರ.ಕನ್ನಡ ಸಾಹಿತ್ಯ ಪರಿಷತ್ತು

೭. ಕನ್ನಡ ಗಾದೆಗಳ ಸಮೀಕ್ಷೆ, (ಸಂ) ನ. ತಪಸ್ವಿಕುಮಾರ್, ಪ್ರ.ಗೃಹಸರಸ್ವತಿ ಗ್ರಂಥಮಾಲೆ, ಪ್ರಸಾರಂಗ, ಮೈಸೂರು

೮. ಕನ್ನಡ ಜಾನಪದ ಗೀತೆಗಳು, ಸಂಪಾದಕ-ಬಿ.ಎಸ್. ಗದಗಿ ಮಠ, ಪ್ರ.ಕರ್ನಾಟಕ, ವಿ.ವಿ. ಧಾರವಾಡ. ೧೯೬೩

೯. ಕನ್ನಡ ಜನಪದ ಸಾಹಿತ್ಯ ಭಂಡಾರ, (ಗೃಹಿಣಿ ಗೀತೆಗಳು) ಸಂಪುಟ ೨. (ಸಂ) ಮತಿಘಟ್ಟ ಕೃಷ್ಣ ಮೂರ್ತಿ, ಪ್ರ.ಮತಿಘಟ್ಟ ಕೃಷ್ಣ ಮೂರ್ತಿ, ಬೆಂಗಳೂರು, ೧೯೮೨

೧೦. ಕರಾವಳಿ ಜಾನಪದ, (ಸಂ) ಪ್ರೊ.ಎ.ವಿ. ನಾವಡ, ಪ್ರ.ಸ್ವಾಗತ ಸಮಿತಿ, ೭೪ನೆಯ ಅಖಿಲ ಭಾರತ, ಕನ್ನಡ ಸಾಹಿತ್ಯ ಸಮ್ಮೇಳನ, ಉಡುಪಿ, ೨೦೦೭

೧೧. ಕನ್ನಡ ಸಂಕ್ಷಿಪ್ತ ವ್ಯಾಕರಣ, (ಸಂ) ಕೆ.ಕುಶಾಲಪ್ಪಗೌಡ, ಪ್ರ.ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

೧೨. ಕನ್ನಡ ವಿಷಯ ವಿಶ್ವಕೋಶ ಜಾನಪದ ಪ್ರ.ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೨೦೦೬

೧೩. ಕಥೆಕೇಳಿ ಗುಬಲಾಡಿ (ಸಂ) ಜಿ.ನ.ಹಳ್ಳಿ ಸಿದ್ಧಲಿಂಗಪ್ಪ, ಪ್ರ.ಸಂ.ಹಂಪ ನಾಗರಾಜಯ್ಯ, ಪ್ರ.ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು, ೧೯೮೧

೧೪. ಕರಾವಳಿ ಕಥೆಗಳು (ಒಬ್ಬಳೇ ಹೇಳಿದ ಜನಪದ ಕಥೆಗಳು), (ಸಂ) ಎಲ್.ಆರ್.ಹೆಗಡೆ, ಪ್ರ.ಜ್ಞಾನಸಾಧನ ಗ್ರಂಥಮಾಲೆ, ಸಾಹಿತ್ಯ ಬಂಡಾರ, ಕುಮುಟಾ ಉತ್ತರ ಕನ್ನಡ ಜಿಲ್ಲೆ, ೧೯೭೮

೧೫. ಕನ್ನಡ ಸಾವಿರದ ಒಗಟುಗಳು.

೧೬. ಕೌತುಕದ ಒಗಟುಗಳು (ಸಂ) ಶ್ರೀಮತಿ ವಾಣಿಶ್ರೀ ಎಸ್ ಪಾಟೀಲ ಮೆ.ಪಿ.ಸಿ ಶಾಬಾದಿಮಠ ಬುಕ್ ಡಿಪೋ ಮತ್ತು ಪ್ರಕಾಶಕರು ಗದಗ

೧೭. ಗದ್ದಗಿಮಠ ಬರಹಗಳು (ಸಂ) ಡಾ.ಬಿ.ಎಸ್.ಗದ್ದಗಿಮಠ, ಪ್ರ.ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೧೯೮೮

೧೮. ಗಾದೆಗಳು, (ಸಂ) ಎ.ಕೆ.ರಾಮಾನುಜನ್, ಪ್ರ.ಕರ್ನಾಟಕ ವಿಶ್ವವಿದ್ಯಾಲಯ ಪ್ರಸಾರಂಗ, ಧಾರವಾಡ.

೧೯. ಜನಪದ ಸಾಹಿತ್ಯ, (ಸಂ) ಚಂದ್ರಶೇಖರ ಕಂಬಾರ.

೨೦. ಜನಪದ ಗೀತೆಗಳು, (ಸಂ) ಜೀ.ಎನ್. ಚಂದ್ರಶೇಖರ ಹೇಳೆ, ಶ್ರೀ ಗಣೇಶ ಪ್ರಕಾಶನ ಬೆಂಗಳೂರು ೫೩.

೨೧. ಜನಪದ ಗೀತೆಗಳು, (ಸಂ) ಶ್ರೀಮತಿ ವಾಣಿಶ್ರೀ ಎಸ್ ಪಾಟೀಲ್ ಗುಂಡೂರ, ಮೆ.ಪಿ.ಸಿ ಶಾಬಾದಿಮಠ ಬುಕ್ ಡಿಪೋ ಮತ್ತು ಪ್ರಕಾಶಕರು ಗದಗ

೨೨. ಜನಪದ ಗೀತಾಂಜಲಿ, (ಕನ್ನಡ ಜಾನಪದ ಗೀತೆಗಳ ಸಂಕಲನ) (ಸಂ) ದೇ.ಜವರೇಗೌಡ, ಪ್ರ.ಸಾಹಿತ್ಯ ಅಕಾಡೆಮಿ ನವದೆಹಲಿ,೧೯೭೮

೨೩. ಜನಪದ ಒಗಟು ಕಥೆಗಳು (ಸಂ) ಕುರುವ ಬಸವರಾಜ, ಪ್ರ.ಅಂತರಂಗ ಪ್ರಕಾಶನ, ಶಿವಮೊಗ್ಗ ಜಿಲ್ಲೆ, ೧೯೮೯

೨೪. ಜನಪದ ಮತ್ತು ಗಿರಿಜನರ ಕಥೆಗಳು (ಸಂ) ಡಾ.ಎಲ್.ಆರ್.ಹೆಗಡೆ, ಪ್ರ.ಸಾಹಿತ್ಯ ಅಕಾಡೆಮಿ, ನವದೆಹಲಿ, ೧೯೯೦

೨೫. ಜಾನಪದ ಕರ್ನಾಟಕ, ಸಂಚಿಕೆ ೧. ಸಂಪುಟ ೨, ಪ್ರ.ಪ್ರಸಾರಂಗ, ಕನ್ನಡ ವಿ.ವಿ.ಹಂಪಿ,

೨೬. ಜಾನಪದ ಪರಿಭಾವನೆ, (ಸಂ) ಅಂಬಳಿಕೆಹಿರಿಯಣ್ಣ, ಪ್ರ.ಸಂವಹನ ಪ್ರಕಾಶನ, ಮೈಸೂರು, ೨೦೦೧

೨೭. ಜಾನಪದ ತತ್ತ್ವ ಮತ್ತು ಸತ್ತ್ವ, (ಸಂ)ಸಿ.ಪಿ.ಕೆ, ಪ್ರ.ತುಳುಕಿನ ವೆಂಕಣ್ಣಯ್ಯ ಸಾರಕ, ಗ್ರಂಥ ಮಾಲೆ, ಮೈಸೂರು, ೨೦೦೪,

೨೮. ಜಾನಪದ: ೧೯೯೨, (ಸಂ) ಡಾ. ವೀರಣ್ಣ ದಂಡೆ. ಪ್ರ.ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು-೦೨, ೧೯೯೫, (ಲೇ-ದೀಪ ಸಂಸ್ಕೃತಿ-ಲೇ-ಕಂಬಳಿ ಆದವಾನಿ)

೨೯. ಜಾನಪದ ಸಂಭ್ರಮ, (ಸಂ) ಡಾ.ಪಿ.ಕೆ. ರಾಜಶೇಖರ್, ಪ್ರ.ಕರ್ನಾಟಕ ಸರ್ಕಾರ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೩

೩೦. ಜಾನಪದ: ಸ್ವರೂಪ ಮತ್ತು ಸಾಹಿತ್ಯ, (ಸಂ) ಪ್ರೊ.ಡಿ. ಲಿಂಗಯ್ಯ, ಡಾ.ಕೆ.ಆರ್. ಸಂಧ್ಯಾರೆಡ್ಡಿ, ಪ್ರ.ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು, ೨೦೦೬

೩೧. ಜಾನಪದ ಸಂಕೀರ್ಣ, ಸಂಪಾದಕ-ರಾಗೌ, ಪ್ರ.ಗಂಗಾ ಪ್ರಕಾಶನ, ಬೆಂಗಳೂರು, ೧೯೭೪

೩೨. ಜಾ. ಸಾಹಿತ್ಯ ದರ್ಶನ-೧೦, ಲೇ-ಹಟ್ಟೀಹಬ್ಬ-ಲೇ-ಬಸವರಾಜ ನೆಲ್ಲೀಸರ

೩೩. ಜಾನಪದ ಸಾಹಿತ್ಯ ದರ್ಶನ, (ಸಂ) ಡಾ.ಎಸ್.ಎಂ.ವೃಕ್ಷಬೇಂದ ಸ್ವಾಮಿ, ಪ್ರ.ಪ್ರಸಾರಂಗ, ಕರ್ನಾಟಕ ವಿ.ವಿ. ಧಾರಾವಾಡ, ೧೯೮೭

೩೪ ಜಾನಪದ ಕರ್ನಾಟಕ, (ಸಂ) ಡಾ.ಮಂಜುನಾಥ ಬೇವಿನಕಟ್ಟಿ, ಪ್ರ.ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೨

೩೫. ಜಾನಪದ ಗಂಗೋತ್ರಿ, (ಸಂ) ಎಚ್.ಜೆ. ಲಕ್ಕಪ್ಪಗೌಡ, ಡಾ.ದೇವೇಂದ್ರಕುಮಾರ ಹಕಾರಿ, ಪ್ರ.ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ೧೯೯೭

೩೬. ಜಾನಪದ ಸಾಹಿತ್ಯ, (ಸಂ) ತೀ.ನಂ. ಶಂಕರನಾರಾಯಣ, ಬಸವರಾಜನೆಲ್ಲಿಸರ, ಸಿ.ಎಸ್. ಶಿವಕುಮಾರ ಸ್ವಾಮಿ, ಪ್ರ.ಪ್ರಸಾರಾಂಗ, ಕುವೆಂಪು ವಿಶ್ವವಿದ್ಯಾನಿಲಯ, ೨೦೦೩

೩೭. ಜಾನಪದ ಗಂಗೋತ್ರಿ (ಸಂ) ಬೈರೇಗೌಡ, ಪ್ರ.ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೯೭

೩೮. ಜಾನಪದ ಗಂಗೋತ್ರಿ, (ಸಂ) ಎಚ್.ಜೆ.ಲಕ್ಕಪ್ಪಗೌಡ, ಎಂ.ಜಿ.ಈಶ್ವರಪ್ಪ, ವ.ನಂ.ಶಿವರಾಮ, ಪ್ರ.ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡಮಿ, ಬೆಂಗಳೂರು, ೧೯೯೭

೩೯. ಜಾನಪದ (ಸಂ) ಬಸವರಾಜ ನೆಲ್ಲಿಸರ, ಪ್ರ.ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೯೬

೪೦. ಜಾನಪದ ಗಂಗೋತ್ರಿ (ಸಂ) ಜಿ.ಶಂ.ಪರಮಶಿವಯ್ಯ, ಹ.ಕ.ರಾಜೇಗೌಡ, ಪ್ರ.ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೯೩

೪೧. ಜಾನಪದ ೧೯೯೬, (ಸಂ) ರಂಗಾರೆಡ್ಡಿ ಕೋಡೀರಾಂಪುರ, ಪ್ರ.ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೯೫

೪೨. ಜಾನಪದ ಗಂಗೋತ್ರಿ, (ಸಂ) ಎಚ್.ಜೆ.ಲಕ್ಕಪ್ಪಗೌಡ, ಎ.ಜಿ.ಈಶ್ವರಪ್ಪ, ದ.ನ.ಶಿವರಾಂ, ಪ್ರ.ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೯೭

೪೩. ಜಾನಪದ ಒಡಪುಗಳು (ಸಂ) ಬಿ.ಎಸ್.ಭಜಂತ್ರಿ, ಪ್ರ.ಚೈತನ್ಯ ಪ್ರಕಾಶನ, ಪಂಚಗಾಂವ, ೧೯೯೫

೪೪. ಜಾನಪದ ಗೀತೆಗಳು, ಪ್ರ.ಲಲಿತ ಪ್ರಕಾಶನ, ಹುಬ್ಬಳ್ಳಿ, ೧೯೮೬

೪೫. ಜಾನಪದ ಗಂಗೋತ್ರಿ (ಪ್ರ.ಸಂ) ಡಾ. ಜೀ.ಶಂ. ಪ, (ಸಂ) ಹ.ಕ. ರಾಜೇಗೌಡ, ಓ.ಚಿ. ಬೋರಲಿಂಗಯ್ಯ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು-೭

೪೬. ಜಾನಪದ ಕೆಲವು ಮುಖಗಳು, (ಸಂ) ಡಾ. ಜೀ.ಶಂ. ಪ, ಚೇತನ ಬುಕ್ ಹೌಸ್, ಮೈಸೂರು.

೪೭. ಜುಂಜಪ್ಪ, (ಸಂ) ಚಲುವರಾಜು, ಪ್ರ.ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೧೯೯೭

೪೮. ತಂಬೂರಿ ಸಂಪ್ರದಾಯದ ಕಾವ್ಯಗಳು (ಸಂ) ಅಂಬಳಿಕೆ ಹಿರಿಯಣ್ಣ ಪ್ರ.ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೮೦

೪೯. ದೇಸಿ ಸಂಸ್ಕೃತಿ, ಲೇ.ಡಿ.ಬಿ. ನಾಯಕ, ಪ್ರ.ಬಂಜಾರ ಪ್ರಕಾಶನ, ಗುಲಬರ್ಗ, ೨೦೦೨

೫೦. ದೀಪಸ್ತಂಭಗಳು, ಪಿಎಚ್.ಡಿ ಪ್ರಬಂಧ ಡಾ.ಗೀತಾಂಜಲಿ, ಕನ್ನಡ ವಿವಿ ಹಂಪಿ, ವಿದ್ಯಾರಣ್ಯ, ೨೦೦೭

೫೧. ದೇಸಿ, ಸಂಪುಟ ೨, (ಸಂ) ಡಾ. ವೀರಣ್ಣ ದಂಡೆ, ಪ್ರಕಾಶನ-ಭಾಗ್ಯಶ್ರೀ ಎಂತರ ಪ್ರೈಸಸ್, ವಿಜಯನಗರ, ಬೆಂಗಳೂರು, ೨೦೦೩

೫೨. ನಮ್ಮ ಸುತ್ತಿನ ನಂಬಿಕೆಗಳು, (ಸಂ) ಡಿ.ಕೆ.ರಾಜೇಂದ್ರ, ಪ್ರ.ಕನ್ನಡ ಅಧ್ಯಯ ಸಂಸ್ಥೆ, ಮೈಸೂರು ವಿ.ವಿ. ಪ್ರಸಾರಂಗ, ೧೯೭೩

೫೩. ನಮ್ಮ ಗಾದೆಗಳು, (ಸಂ) ರಾಮೇಗೌಡ ಪ್ರ.ಕನ್ನಡ ಅಧ್ಯಯನ ಸಂಸ್ಥೆ, ಮೈ.ವಿ.ವಿ. ಪ್ರಸಾರಾಂಗ, ಮೈಸೂರು.

೫೪. ನಮ್ಮ ಮಸ್ಲಿಂ ಹಿನ್ನೆಲೆಯ ಜಾನಪದ ಕಥೆಗಳು (ಸಂ) ಡಾ.ಎಂ.ಎಸ್.ಶೇಖರ್, ಪ್ರ.ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೨೦೦೧

೫೫. ನಾನು ಯಾರು, (ಸಂ) ಜಿ.ವಿ.ಡಿ. (ಪ್ರ.ಸಂ) ಹಂ.ಪ.ನಾ. ಪ್ರ.ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೨

೫೬. ನೀರದೀವಿಗೆ, (ಸಂ) ಕೆ.ವೈ.ನಾರಾಯಣಸ್ವಾಮಿ, ಪ್ರ.ಲೋಹಿಯಾ ಪ್ರಕಾಶನ, ಬಳ್ಳಾರಿ, ೨೦೦೦

೫೭. ನೀತ್ಯುಳ್ಳ ಜೋತಿ ನಡೆಮುಂದೆ (ಅಂಟಿಗೆ ಪಂಟಿಗೆ ಹಾಡುಗಳು) (ಸಂ) ಜಿ.ಕೆ.ರಮೇಶ, ಪ್ರ.ಚಕೋರ ಪ್ರಕಾಶನ, ತೀರ್ಥಹಳ್ಳಿ, ೧೯೯೬

೫೮. ಪಡಿನೆರಳು (ಜನಪದ ಕಥಾಸಂಕಲನ) (ಸಂ) ಡಿ.ಲಿಂಗಯ್ಯ ಪ್ರ.ಕನ್ನಡ ಕಲಾ ಸಂಘ, ರಿ, ಶಿಡ್ಲಘಟ್ಟ, ೧೯೭೧

೫೯. ಬಿಹಾರಿ ಒಗಟುಗಳು ಭಾರತೀಯ ಪರಂಪರೆ ಹಾಗೂ ಸಾಹಿತ್ಯದಲ್ಲಿ ಒಗಟು, (ಸಂ) ಮುದುರ್ಗ ಭಾಗವತ್ ಕನ್ನಡಕ್ಕೆ-ಡಾ.ಬಿ.ವಿ. ವಿವೇಕರೈ.

೬೦. ಭಾರತದ ಹಬ್ಬಗಳು, (ಸಂ) ಪ್ರೊ.ಡಿ.ಟಿ. ರಂಗಸ್ವಾಮಿ, ಪ್ರ.ಮನೋಹರ ಘಾಣೇಕರ ಸಮಾಜ ಪ್ರಸ್ತಕಾಲಯ ಧಾರಾವಾಡ ೧, ೨೦೦೩

೬೧. ಮಕ್ಕಳ ಒಡಪುಗಳು, (ಸಂ) ಡಾ ಶಂಭಾ ಜೊಶೀ, ಪ್ರಕಾಶನ-ಮಾನವ ಧರ್ಮ ಪ್ರತಿಷ್ಠಾನ ಧಾರವಾಡ, ೧೯೪೦\೨೦೦೩

೬೨. ಮಂಟೇಸ್ವಾಮಿ, (ಸಂ) ಪ್ರೊ. ಹಿ.ಚಿ.ಬೋರಲಿಂಗಯ್ಯ, ಪ್ರ.ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ ಕಮಲಾಪುರ. ೧೯೯೭.

೬೩. ಮಲ್ಲಿಗೆ ಮೊಗ್ಗು ಸುರಿದಾವೆ (ಚಿಕ್ಕಮಗಳೂರು ಜೀ ಜನಪದ ಸಂಪುಟ) ಸಂ ಎಚ್.ಜೆ. ಲಕ್ಕಪ್ಪಗೌಡ, ಬಸವರಾಜ ನೆಲ್ಲಿಸರ, ಚೈತ್ರಶ್ರೀ ೯೩, ತರೀಕೆರೆ, ಚಿಕ್ಕಮಂಗಳೂರು ಜಿ, ೧೯೯೩

೬೪. ಸಿರಿಗನ್ನಡ ಒಡಪುಗಳು (ಸಂ) ಡಾ.ಎಂ.ಎಸ್.ವಾಲಿ, ಪ್ರ.ಭುವನೇಶ್ವರಿ ಪ್ರಕಾಶನ, ವಿಜಾಪುರ, ೧೯೯೧

೬೫. ಸುವರ್ಣ ಸಂಚಯ, (ಪ್ರ.ಸಂ) ಪ್ರೊ.ಡಿ.ಜವರೇಗೌಡ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ೧೯೬೭

೬೬. ಸುವರ್ಣ ಜಾನಪದ, (ಸಂ) ಪ್ರ ಎಚ್.ಜೆ. ಲಕ್ಕಪ್ಪಗೌಡ, ಹಿ.ಶಿ.ರಾಮಚಂದ್ರೇಗೌಡ, ಕೃಷಿಮೂರ್ತಿ ಹನೂರು, ಪ್ರ.ಕರ್ನಾಟಕ ಜಾನಪದ ಯಕ್ಷಗಾನ ಅಕಾಡೆಮಿ ಬೆಂಗಳೂರು, ೧೧೯೮

೬೭. ಸೋಬಾನೆ ಪದಗಳು, (ಸಂ)ಸ್ವಾಮಿಗೌಡ ಕನ್ನಡ ಪಂಡಿತ, ಪ್ರ.ಶ್ರೀ ಶಾರದಾ ಪುಸ್ತಕ ಭಂಡಾರ, ಆಲೂರು ಕರ್ನಾಟಕ ತಾಲ್ಲೂಕು.

೬೮. ಹವ್ಯಕ ಗಾದೆಗಳು, (ಸಂ) ಶ್ರೀ ಕೃಷ್ಣ ಭವ ಅತೀಕ, ಜೆ. ಪ್ರ.ಕರ್ನಾಟಕ ಸಂಘ, ಪುತ್ತೂರು. ದಕ್ಷಿಣ ಕನ್ನಡ, ೧೯೮೫.

೬೯. ಹಲಸಂಗಿ ಹಾಡು (ಸಂ) ಹಲಸಂಗಿ ಗೆಳೆಯರು, ಪ್ರ.ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೦

೭೦. ಹಾಡು ಚೆಲ್ಯಾವೆ ನಾಡಿಗೆ ಜನಪದ ಕಲಾ ಸಂಪುಟ, (ಸಂ) ಕೆ.ಆರ್, ಕೃಷ್ಣ ಸ್ವಾಮಿ, ಪ್ರ.ಜಾನಪದ ಅಕಾಡೆಮಿ, ಕದಂಬ ಕಾರ್ಡು ರಸ್ತೆ, ರಾಜಾಜಿನಗರ, ಬೆಂಗಳೂರು, ೧೯೫೫

೭೧. ಹೆಸರ ಹೇಳ್ತೀನಿ ಒಡಪ ಕಟ್ಟಿ, (ಸಂ) ಜ್ಯೋತಿ ಹೊಸೂರು, ಪ್ರ.ಜಾನಪದ ಮಂಟಪ ಹಾರೊಗೇರಿ, ಬೆಳಗಾವಿ, ೧೯೭೧

## ಪತ್ರಿಕೆಗಳು

೧. ಸಾಪ್ತಾಹಿಕ ಪುರವಣಿ (ಪ್ರಜಾವಾಣಿ ದಿ.೭.೧೧.೨೦೦೪) ಲೇಖನ. ದೇವಳಿಗೆ ಹಬ್ಬಕ್ಕೆ ಕೈಲಾಸದ ಅಕ್ಕ ಬಾವಾಜಿ ಕರೆತಂದ

೨. ಸಾಪ್ತಾಹಿಕ ಪುರವಣಿ (ಪ್ರಜಾವಾಣಿ ದಿ.೨೧.೧೦.೨೦೦೬) ದೀವಳಿಗೆ ಸಿರಿಬೆಳಗು,

೩. ಸಾಪ್ತಾಹಿಕ ಪುರವಣಿ (ಪ್ರಜಾವಾಣಿ ದಿ.೦೪.೧೧.೨೦೦೭) ಬೆಳಗು ಬಾ ಹಣತೆಯನು

೪. ಸಾಪ್ತಾಹಿಕ ಪುರವಣಿ (ಪ್ರಜಾವಾಣಿ ದಿ.೦೩.೦೯.೨೦೦೬) ಹಬ್ಬ ಆಚಾರ ಮತ್ತು ನಾವು

೫. ಉದಯವಾಣಿ ದಿ.೦೫.೧೧.೨೦೦೭, ದೀಪಾವಳಿ ಸಂಚಿಕೆ

## ವಿಶೇಷಾಂಕಗಳು

೧. ಕನ್ನಡ ಪ್ರಭ - ೧೯೯೮, (ಕವಿಗಳು ಕಂಡಂತೆ ಬಳ್ಳೇಕೆರೆ ಹನುಮಂತಪ್ಪ) ದೀಪಾವಳಿ (ಬೆಳ್ಗೊಡೆಯಡಿ ರಾರಾಜಿಸಿದ ಕತ್ತಲೆ ಡಾ. ಶ್ರೀ ರಾಮಭಟ್ಟ, (ದೀಪಾವಳಿ ಬೆಳಕು ಗೆದ್ದ ಕತೆ ಶತಾತಧಾನಿ, ಡಾ.ಆರ್.ಗಣೇಶ್

೨. ಉದಯವಾಣಿ-೨೦೦೦, (ದೀಪಾವಳಿ-ಹರ್ಷಾನಂದಜೀ) (ಪುರಾಣಕಲಾಕ್ಕೂ ಪೂರ್ವದ ದೀಪಾವಳಿವೈಶಿಷ್ಟ್ಯ- ಎಂ.ಪಿ.ಶರ್ಮಾ, ತದ್ಯಲಸ) (ದೀಪಾವಳಿ ಕನ್ನಡ ನಾಡಿನಲ್ಲಿ-ಡಾ.ಟಿ. ಗೋವಿಂದರಾಜು) ಥರಾವಳಿ

೩. ಉದಯವಾಗಿ-೨೦೦೧, (ದೀಪಾವಳಿ ಮತ್ತು-ಎಂ.ವಿ. ಶರ್ಮಾ ತದ್ಯಲಸೆ) ಗೋಪೂಜೆ

೪. ಕರ್ಮವೀರ-೨೦೦೬, (ದೀಪ-ಒರೂಪ-ಸ್ವರೂಪ-ಶಾರದಾ ಶಾಮಣ್ಣ)

(ಈ ದೀಪ ಬರಿಯ ಬೆಳಕಲ್ಲ-ಎಂ.ವಿ. ಶರ್ಮಾ, ತದ್ಯಲಸೆ)

(ಬೆಳಕು ಚೆಲ್ಲುವ ಹೊತ್ತು-ಡಾ. ಶ್ರೀ ಪಾದಭವ್)

(ಶಾಸನಗಳಲ್ಲಿ ದೀಪಾವಳಿ-ಡಾ.ಎಚ್.ಎಸ್. ಗೋಪಾಲರಾವ್)



# ಆರತಿಗಳು


ಏಕಾರತಿ


ಮಯೂರಾರತಿ


ಏಕನಾಗಾರತಿ


ಮಹಾರತಿ


...ಗಪಂಚಾರತಿ


ಪಂಚ ನಾಗಾರತಿ


ಕೂಮಾರತಿ


ದೂಪಾರತಿ


ಕರ್ಪೂರಾತಿ


ಕುಂಭಾರತಿ


ಕೈತಾಲಿ

# ಕಾಲುದೀಪಗಳು


...ಲುದೀಪ ೧


ಕಾಲುದೀಪ ೨


ಕಾಲುದೀಪ ಚಿತ್ರ ೩


ಕಾಲುದೀಪ ೪



ಾಲುದೀಪ ೫



ಕಾಲುದೀಪ ೬



ಕಾಲುದೀಪ ೭



ಕಾಲುದೀಪ ೮



ುದೀಪ ೯



ಕಾಲುದೀಪ ೧೦



ಕಾಲುದೀಪ ೧೧



ಕಾಲುದೀಪ ೧೨



ುದೀಪ ೧೩



ಕಾಲುದೀಪ ೧೪



ಕಾಲುದೀಪ ೧೫



ಕಾಲುದೀಪ ೧೬



ಕಾಲುದೀಪ ೧೭




ಕಾಲುದೀಪ ೧೮

# ವೃಕ್ಷದೀಪಗಳು



ವೃಕ್ಷದೀಪ1



ವೃಕ್ಷದೀಪ2



ವೃಕ್ಷದೀಪ3

# ದೀಪದ ಮಲ್ಲಿ



ಪದ ಮಲ್ಲಿಚಿತ್ರ 1



ದೀಪದ ಮಲ್ಲಿಚಿತ್ರ 2



ದೀಪದ ಮಲ್ಲಿಚಿತ್ರ 3



ದೀಪದ ಮಲ್ಲಿಚಿತ್ರ 4

# ತೂಗುದೀಪಗಳು



ೂಗುದೀಪ ಚಿತ್ರ 1



ತೂಗುದೀಪ ಚಿತ್ರ 2



ತೂಗುದೀಪ ಚಿತ್ರ 3



ತೂಗುದೀಪ ಚಿತ್ರ 4



ಗುದೀಪ ಚಿತ್ರ 5



ತೂಗುದೀಪ ಚಿತ್ರ 9



ತೂಗುದೀಪ ಚಿತ್ರ 7



ತೂಗುದೀಪ ಚಿತ್ರ 8


ತೂಗುದೀಪ ಚಿತ್ರ 9


ತೂಗುದೀಪ ಚಿತ್ರ 10

## ನಂದಾದೀಪಗಳು


ಗುದೀಪ ಚಿತ್ರ 2


ತೂಗುದೀಪ ಚಿತ್ರ 3


ನಂದಾದೀಪ ಚಿತ್ರ 5


ನಂದಾದೀಪ ಚಿತ್ರ 6


ನಂದಾದೀಪ ಚಿತ್ರ 7


ನಂದಾದೀಪ ಚಿತ್ರ 8


ನಂದದೀಪ ಚಿತ್ರ 9

## ದೀವಟಿಗೆ


ದೀವಟಿಗೆ ಚಿತ್ರ 1


ದೀವಟಿಗೆ ಚಿತ್ರ 2



ೋರಣ ದೀಪ



ಸಾಲು ದೀಪ



ರಥದೀಪ





ಂಟಿಗೆ ಪಂಟಿಗೆ ಚಿತ್ರ ೧



ಅಂಟಿಗೆ ಪಂಟಿಗೆ ಚಿತ್ರ ೨



ದೇವೀರಮ್ಮ



ಟಿಗೆ ಪಂಟಿಗೆ ಚಿತ್ರ ೩



ಅಂಟಿಗೆ ಪಂಟಿಗೆ ಚಿತ್ರ ೪